# ಕೊಡಗಿನ ಸುಮಂಗಳು

ಜಿ.ಟಿ. ನಾರಾಯಣ ರಾವ್



# ವಿ–ಪುಸ್ತಕದ ಪ್ರಕಾಶಕನ ಅರಿಕೆ

ನನ್ನ ಜಾಲತಾಣದಲ್ಲಿ ಅನಿಯತ ಧಾರಾವಾಹಿಯಾಗಿ ಈ ಕತೆಗಳನ್ನು ಪ್ರಕಟಿಸುತ್ತ ಬಂದೆ. ಸುಮಾರು ಒಂಬತ್ತನೇ ಕತೆಯವರೆಗೆ ಪ್ರಕಟಣೆ ಮುಗಿದ ಕಾಲದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಡಿಕೇರಿ ಸಾಹಿತ್ಯ ಸಮ್ಮೇಳನದ ದಿನಾಂಕಗಳು ಇನ್ನೂ ಒಂದು ತಿಂಗಳ ದೂರದಲ್ಲಷ್ಟೇ ಇದ್ದುವು. ಆಗ ಕಸಾಪದ ವಕ್ತಾರರಿಂದ ಮೊದಲು ದೂರವಾಣಿಯಲ್ಲಿ ಮತ್ತೆ ಲಿಖಿತ ಬೇಡಿಕೆ ಪತ್ರ ಮುಖೇನವೂ ಬಂತು: ಸಂಪ್ರದಾಯದಂತೆ ಸಮ್ಮೇಳನದಲ್ಲಿ ನಾವು ಪ್ರಕಟಿಸಲಿರುವ ಪುಸ್ತಕಗಳಲ್ಲಿ 'ಕೊಡಗಿನ ಸುಮಗಳು' ಪುಸ್ತಕವನ್ನೂ ಆರಿಸಿದ್ದೇವೆ. ನಮ್ಮ ನಿಯಮಾವಳಿಯನ್ನು ದಯವಿಟ್ಟು ಮನ್ನಿಸಿ ಪ್ರಕಟಣಾ ಅನುಮತಿಯನ್ನು ಕೊಡಿ. ಕೊಡಗು ಜಿಲ್ಲೆಗೆ ಸಂಬಂಧಿಸಿದ ಲೇಖಕನಾಗಿ ತಂದೆಯನ್ನು ಗುರುತಿಸಿದ್ದು ಸರಿ. ಆದರೆ ಅವರ ಸಾಹಿತ್ಯ ಸೇವೆಯ ಹೆಚ್ಚು ಸಮರ್ಥ ಅನ್ಯ ಪುಸ್ತಕಗಳನ್ನು ಆರಿಸಿಕೊಳ್ಳಲು ನಾನು ಸಲಹೆ ಕೊಟ್ಟೆ. ಅವರು ಒಪ್ಪಲಿಲ್ಲ. ನಾನು ವಿವಾದಕ್ಕಿಳಿಯದೆ ಅನುಮತಿ ಕೊಟ್ಟೆ. ಸಮ್ಮೇಳನ ನಡೆಯಿತು, ತಿಂಗಳೊಂದು ಸಂದಿತು. ಪುಸ್ತಕ ಬರುವುದಿರಲಿ, ಅದರ ಸುದ್ದಿಯೂ ಮಾಧ್ಯಮಗಳಲ್ಲಿ ಕಾಣಲಿಲ್ಲ. ಆಗ ಮತ್ತದೇ ಕಸಾಪ ವಕ್ತಾರ ದೂರವಾಣಿಸಿ ಮುದ್ರಣಾನುಕೂಲಕ್ಕಾಗಿ ಕೊಡಗಿನ ಸುಮಗಳು ಪುಸ್ತಕದ ಒಂದು ಪ್ರತಿ ಕೋರಿದರು. ನಾನು ಸಹಜವಾಗಿ ಸಮ್ಮೇಳನ ಕಳೆದ ಮೇಲಿದರ ಔಚಿತ್ಯವನ್ನು ಪ್ರಶ್ನಿಸಿದೆ. ಪ್ರತಿ ಸಮ್ಮೇಳನದ ಪ್ರಕಟಣೆಗಳು ಮುಂದಿನ ಸಮ್ಮೇಳನಕ್ಕಾದರೂ ಸಿಗುವಂಥ ವಿಳಂಬನೀತಿಯೂ ಅಲಿಖಿತ ಸಂಪ್ರದಾಯದ ಭಾಗವೇ ಆಗಿದೆಯಂತೆ! ನಾನು ಚರ್ಚೆಗಿಳಿಯದೆ, ಆ ಹಿಂದೆಯೇ ಕೊಟ್ಟ ಅನುಮತಿಗೆ ಮಾತ್ರ ಬದ್ಧನಾಗಿ, ಅದುವರೆಗೆ ನಾನೇ ಬೆರಳಚ್ಚಿಸಿ ಇಲ್ಲಿ ಪ್ರಕಟಿಸಿದ್ದ ಪುಟಗಳ ತಂತ್ರಾಂಶವನ್ನೂ ಉಳಿದಂತೆ ಮೂಲ ಪುಸ್ತಕದ ಪುಟಗಳ ನೆರಳಚ್ಚನ್ನೂ ಕಳಿಸಿಕೊಟ್ಟೆ. ಕಸಾಪದ ಅವಸರದಡುಗೆಯಲ್ಲಿ ಮುದ್ರಣದೋಷದ ಕಲ್ಲುಗಳು ಉಳಿಯುವುದು ಬೇಡವೆಂದು (ಉಚಿತವಾಗಿ) ಕರಡು ತಿದ್ದುವ ಕೆಲಸವನ್ನೂ ನಾನೇ ಕೇಳಿಕೊಂಡೆ. ಹಾಗೇ ಎರಡು ಮೂರು ವಾರಗಳಲ್ಲಿ ಬಂದ ಪೂರ್ಣ ಪುಸ್ತಕವನ್ನು ತಿದ್ದಿಯೂ ಕಳಿಸಿದೆ. ಆದರೆ ಇಂದಿನವರೆಗೆ ಪೂರ್ಣಗೊಂಡ ಪುಸ್ತಕಗಳು ಅವರಿಂದ ನನಗೆ ಬಂದಿಲ್ಲ.

ಈಗ ನಡೆಯುತ್ತಿರುವಂತೆ, ಕನ್ನಡ ಸಾಹಿತ್ಯ ಸಮ್ಮೇಳನವೆಂಬ ಶುದ್ಧ ಅಪ್ರಯೋಜಕ ಕಲಾಪಕ್ಕೆ ಈ ಪ್ರಕಟಣಾ ಕಾರ್ಯಗಳು ಮಕುಟಪ್ರಾಯವಾಗಿ ಹೊಂದುತ್ತವೆ! ಗತವೈಭವದ ಬೃಹತ್ ಅಣಕವಾಗಿ, ಅದೂ ಸಾರ್ವಜನಿಕ ವೆಚ್ಚದಲ್ಲಿ ನಡೆಯುವ ಇದು ಮತ್ತೆ ಇಂಥದ್ದೇ ಹಲವು ಪುಸ್ತಕೋದ್ಯಮದ ಕಲಾಪಗಳನ್ನು ನಾನು ಸಾರ್ವಜನಿಕ ಮಾಧ್ಯಮಗಳಲ್ಲಿ ನನ್ನರಿವಿಗೆ ಬಂದಂತೆಲ್ಲ ಕಾಲಕಾಲಕ್ಕೆ ಟೀಕಿಸಿದ್ದೇನೆ, ಪುಸ್ತಕ ಮಾರಾಟ ಹೋರಾಟವೆಂಬ ನನ್ನದೇ ಪುಸ್ತಕದಲ್ಲೂ ಸಂಕಲಿಸಿ ಪ್ರಕಟಿಸಿದ್ದೇನೆ. [ಇಂದು ಮುದ್ರಿತ ಪುಸ್ತಕ ಪ್ರಕಟಣೆ ಔಚಿತ್ಯವನ್ನೇ ಕಳೆದುಕೊಂಡಿದೆ. ಪ್ರಸ್ತುತ ಪುಸ್ತಕ ಮಾರಾಟ ಹೋರಾಟದ ಮುದ್ರಿತ ಪ್ರತಿಗಳು ಅಲಭ್ಯ. ಹಾಗಾಗಿ ಮುಂದೆ ನನ್ನನುಕೂಲದಲ್ಲಿ ಹೀಗೇ ಜಾಲತಾಣದಲ್ಲಿ ಧಾರಾವಾಹಿಯಾಗಿಸಿ ಆಸಕ್ತರಿಗೆ ಮುಕ್ತಗೊಳಿಸಲಿದ್ದೇನೆ, ದಯವಿಟ್ಟು ತಾಳ್ಮೆಯಿರಲಿ] ಕಸಾಪ ಪ್ರಕಟಣೆ ಬರಲಿ ಬಾರದಿರಲಿ ನನ್ನ ವಿ–ಧಾರಾವಾಹಿ ಪೂರ್ಣಗೊಂಡಿದೆ. ಅವೆಲ್ಲವನ್ನು ಜಾಲತಾಣದಲ್ಲಿ ಆಸಕ್ತರು ಇತರೆಲ್ಲಾ ಕೃತಿಗಳಂತೆ ಯಾವತ್ತೂ ಆಯ್ದು ಓದಬಹುದು. ಈಗ ಹೆಚ್ಚಿನ ಸೌಲಭ್ಯವಾಗಿ, ಎಂದಿನಂತೆ ಉಚಿತ ವಿ–ಪುಸ್ತಕವಾಗಿಯೂ ಪ್ರಸ್ತುತಪಡಿಸುತ್ತಿದ್ದೇವೆ (ಮಗ, ಅಭಯಸಿಂಹನ ಪೂರ್ಣ ತಾಂತ್ರಿಕ ಸಹಾಯದೊಡನೆ).

ಜಿ.ಎನ್. ಅಶೋಕವರ್ಧನ

# ಲೇಖಕನ ಅರಿಕೆ



ವನಸುಮ ಮತ್ತು ಕೊಡಗಿನ ಕತೆಗಳು ಎಂಬ 'ಪ್ರಾಚೀನ' ಕಥಾಸಂಕಲನಗಳ ಲೇಖಕ ಖುದ್ದು ನಾನೇ ಎಂಬುದು ಮರೆತೇ ಹೋಗಿದ್ದಾಗ, ಆ 'ಮೇರು ಕೃತಿಗಳ' ಪ್ರತಿಗಳು ನನ್ನ ಗ್ರಂಥಗೊಂಡಾರಣ್ಯದಲ್ಲಿ ರಜಃಕಣಾಂತರ್ಗತ ಪಳೆಯುಳಿಕೆಗಳಾಗಿ ಮಾಸಿ ಹೋಗಿದ್ದಾಗ, ಲೇಖನಕೃಷಿಯ ಸದ್ಯೋಜಾತ ಉಲ್ಲಾಸ ಇಂಗಿದ ಬಳಿಕ, ನನ್ನ ಯಾವುದೇ ಕೃತಿಯ ಅಥವಾ ಬರೆಹದ ಬಗ್ಗೆ ಏನೊಂದೂ ಆಸಕ್ತಿ ಅಥವಾ ಒಲುಮೆ ಇಲ್ಲದೆ ವರ್ತಮಾನದಲ್ಲಿ ಪೂರ್ಣಮಗ್ನನಾಗಿ ಭವಿಷ್ಯದತ್ತ 'ಚುಂಚ' ಚಾಚುತ್ತಿರುವಾಗ ನಮ್ಮ ಹಿರಿಯ ಮಗ ಜಿ.ಎನ್. ಅಶೋಕವರ್ಧನ (ಅತ್ರಿ ಬುಕ್ ಸೆಂಟರಿನ 'ದೊರೆ') ಈ ಹೊಸ ಕೀಟವನ್ನು ನನ್ನ ತಲೆಗೆ ಹೊಗಿಸಿದ (ದೊರೆಯೇ ಇದು ಸರಿಯೇ ನಿನಗೆ ಹರಿಯೇ): ವನಸುಮ + ಕೊಡಗಿನ ಕತೆಗಳು = ಕೊಡಗಿನ ಸುಮಗಳು ಎಂಬ ಹೊಸ ಸಂಕಲನವನ್ನು ಪ್ರಕಟಿಸಬಾರದೇಕೆ? ಇಂಥ ಒಂದು ಕೃತಿ ಅಂದಿನ ಕೊಡಗಿನ ಬದುಕಿಗೆ ಒಂದು ಇಣುಕುನೋಟ ಒದಗಿಸುವದರ ಜೊತೆಗೆ ನನ್ನ ದೃಷ್ಟಿ ಮತ್ತು ಶೈಲಿಗಳ ವಿಕಾಸ ಅರಿಯಲು ಒಂದು ಅವಕಾಶವನ್ನೂ ಕಲ್ಪಿಸಬಹುದು. ಇದು ಅವನ ವಾದ. 'ಪಸಿಮಣ್ ನಲ್ವೆಣ್ ತನಿಪಣ್ ಕಲಿಗಳ್' – ಇದು ಕೊಡಗು ಎಂಬ ಅರ್ಥ ಬರುವ ಮಾತನ್ನು ಹಿಂದೊಮ್ಮೆ ನೆಹರೂ ಮಡಿಕೇರಿಯಲ್ಲಿ ಮಾಡಿದ ಭಾಷಣದಲ್ಲಿ ನುಡಿದದ್ದು ನೆನಪಿಸಿಕೊಂಡೆ. ಕುಸಿಯುತ್ತಿರುವ (?) ನನ್ನ ಧೃತಿಗೆ ಕಾಯಕಲ್ಪ ಮತ್ತು ಮುಖಮಾರ್ಜನ ನೀಡಲು ಅವನು ಹೂಡಿರುವ ಹೂಟ ಇದಾಗಿರಬಹುದೇ ಎಂಬ ಗುಮಾನಿ ನನಗುಂಟು – ಅವನೆಷ್ಟು ಖಡಾಖಂಡಿತವಾಗಿ ಇದನ್ನು ನಿರಕಾರಿಸಿದರೂ!




ನನ್ನ ದೃಷ್ಟಿ ಮತ್ತು ಶೈಲಿವಿಕಾಸ? ಪ್ರಸಕ್ತ ಸಂಕಲನ ಮುದ್ರಣಗೊಳ್ಳುತ್ತಿರುವಾಗ ಅನಿವಾರ್ಯವಾಗಿ ನಾನು ಮುದ್ರಣ ಕರಡುಗಳನ್ನು ಮತ್ತೆ ಮತ್ತೆ ಓದಬೇಕಾಯಿತು. 'ಕೈಕೊಡದ ಹಿಲ್‌ಮ್ಯಾನ್' [೧೯೬೭ರಲ್ಲಿ ಬರೆದ ಇದಕ್ಕೆ ತಂದೆಯ ಆತ್ಮಕಥೆ ಮುಗಿಯದ ಪಯಣದಲ್ಲಿ ಸಹಜ ಸ್ಥಾನವನ್ನೂ ಕೊಟ್ಟಿದೆ – ಅ.ವ] ಎಂಬ ವಾಸ್ತವ ಅನುಭವವನ್ನು ಮೆಲುಕು ಹಾಕಬೇಕಾಯಿತು. ಅಂದಿನ ಕಲ್ಪನೆ 'ಶಂಭುವಿನ ಕಥೆ'ಯನ್ನು, ಮೂಲಪ್ರತಿ ಎಲ್ಲಿಯೂ ದೊರೆಯದ್ದರಿಂದ ಅಥವಾ ಅದನ್ನು 'ಉತ್ಖನಿಸುವ' ದಿಶೆಯಲ್ಲಿ ನನ್ನ ಪ್ರಯತ್ನ ಸಾಕಾಗದ್ದರಿಂದ, ಇಂದಿನ ಶೈಲಿಯಲ್ಲಿ ಪುನರ್ನಿರೂಪಿಸಬೇಕಾಯಿತು. ದೇಶ ಕಾಲಗಳಲ್ಲಿ ಒಬ್ಬ ಲೇಖಕ ಸಾಕಷ್ಟು ಹಿರಿದೂರ ಗಮಿಸಿ, ನಡೆದು ಬಂದ ಜಾಡನ್ನು ಸಿಂಹಾವಲೋಕಿಸಿದಾಗ ಆತನ ದೃಷ್ಟಿ ತಕ್ಕಷ್ಟು ಜ್ಞೇಯನಿಷ್ಠತೆ ಅಥವಾ ನಿರಪೇಕ್ಷತೆ ಗಳಿಸಿರುವುದೆಂದು ಭಾವಿಸಿದ್ದೇನೆ. ಇಂಥ ಒಂದು ಎಕ್ಸ್ ಕಿರಣ ದೃಷ್ಟಿಯಿಂದ ನನ್ನ 'ಅಂದ'ನ್ನು ಅದೇ ನನ್ನ 'ಇಂದಿ'ನಿಂದ ಸರ್ವೇಕ್ಷಿಸಿದಾಗ ನನಗೆ ಗೋಚರಿಸುವ ಕಂಕಾಲಗಳು ಎರಡು ಮಾತ್ರ: ೧. ಜೀವನದೃಷ್ಟಿ ಖಂಡಿತ ಬದಲಾಗಿಲ್ಲ: ನೈತಿಕತೆಯುಳಿದ ಜೀವನ ಜೀವನವಲ್ಲ. ಕರ್ತವ್ಯಪಾಲನೆಯೇ ಜೀವನ. ನಿಸರ್ಗದೂರ ಜೀವನ ಮರುಭೂಮಿಯ ಮರೀಚಿಕೆ. ನಂಬಿದ್ದನ್ನು ಮಾಡು, ಮಾಡುವುದರಲ್ಲಿ ನಂಬಿಕೆ ಇಡು. ಸದಾ ಜ್ಞಾನಕೈಲಾಸಾರೋಹಿಯಾಗಿರು, ಎಂದೂ ಅದರ ತಳದಲ್ಲಿ ನಿಂತ ರಾವಣನಾಗದಿರು. ೨. ನಿರೂಪಣೆ, ಪದಪ್ರಯೋಗ, ಶೈಲಿ ಮುಂತಾದ ತಾಂತ್ರಿಕ ವಿವರಗಳಲ್ಲಿ ಅಪಾರ ಕಲಾವಂತಿಕೆಯನ್ನೂ ಅಧಿಕ ಮಿತವ್ಯಯವನ್ನೂ ಸಾಧಿಸಬೇಕಾಗಿತ್ತು, ಸಾಧಿಸಬಹುದಾಗಿತ್ತು – ಆದರೆ ಸಾಧಿಸಲಾಗಲಿಲ್ಲ.




೧೯೫೧ರಲ್ಲಿ 'ವನಸುಮ' ಕತಾಸಂಕಲನಕ್ಕೆ ಬರೆದ ಮುನ್ನುಡಿಯಿಂದ ಉದ್ಧೃತಾಂಶ: ಸಾಹಿತ್ಯದ ಸವಿಯನ್ನು ಈ ಲೇಖಕನಿಗೆ [=ನನಗೆ] ಊಡಿಸಿದವರು ಅವನ ಬಾಲ್ಯದ ಗುರುಗಳಾದ ಶ್ರೀ ಎನ್.ಎಸ್. ರಾಮಚಂದ್ರ ಅವರು. ಸಕಲ ಸಂದರ್ಭಗಳಲ್ಲಿಯೂ ಲೇಖಕನಿಗೆ ಉಚಿತ ಹಿತೋಕ್ತಿಗಳನ್ನೂ ಪ್ರೋತ್ಸಾಹವನ್ನೂ ನೀಡಿ ಅವನ ಸಾಹಿತ್ಯತೃಷ್ಣೆಯನ್ನು ವರ್ಧನೆಮಾಡಿದವರು ಶ್ರೀ ಎಂ.ಎಸ್. ಅನಂತಪದ್ಮನಾಭರಾಯರು. ಈ ಮಹನೀಯರುಗಳಿಗೆ ಈ ಪುಟ್ಟ ಪುಸ್ತಕವನ್ನು ಭಕ್ತಿಪೂರ್ವಕವಾಗಿ ಸಮರ್ಪಿಸಲು ಸಂತೋಷವಾಗುವುದು. ಗುರುವರ್ಯರುಗಳಿಗೆ ಕೀರ್ತಿಯನ್ನು ತರಲಿ, ತಾರದಿರಲಿ ಅರ್ಪಣೆಯಲ್ಲಿನ ಉದ್ದೇಶವು ಸದ್ಭಾವಪ್ರಚೋದಿತ.

೧೯೫೩ರಲ್ಲಿ 'ಕೊಡಗಿನ ಕತೆಗಳು' ಮುನ್ನುಡಿಯಿಂದ ಉದ್ಧೃತಾಂಶ: ಲೇಖಕನಿಗೆ ಪ್ರೌಢ ಶಾಲೆಯ ಮೂರು ದರ್ಜೆಗಳಲ್ಲಿಯೂ ಕನ್ನಡ ಭಾಷೆಯ ಗುರುಗಳಾಗಿದ್ದವರು ಪೂಜ್ಯ ಶ್ರೀ ಜಿ.ಎಸ್. ಕೇಶವಾಚಾರ್ಯರು. ಶ್ರೀಮಾನ್ ಕೇಶವಾಚಾರ್ಯರು ವಿದ್ವಾಂಸರು, ಶುದ್ಧ ಸಾಹಿತ್ಯ ಪ್ರೇಮಿಗಳು, ಕನ್ನಡ ಸಾಹಿತ್ಯದಲ್ಲಿ ಅಪಾರ ವಿಶ್ವಾಸವಿರುವವರು ಮತ್ತು ಗಮಕಿಗಳು. ಅವರ ಕನ್ನಡ ಪಾಠಗಳನ್ನು ಆಲೋಚಿಸುವಾಗ ಇಂದಿಗೂ ಲೇಖಕನು ಹರ್ಷಪುಳಕಿತನಾಗುತ್ತಾನೆ. ಲೇಖಕನಿಗೆ ಕನ್ನಡ ಸಾಹಿತ್ಯದಲ್ಲಿರುವ ಪ್ರೇಮಾಭಿಮಾನ ಮತ್ತು ಪ್ರಸ್ತುತ ಗ್ರಂಥದಲ್ಲಿ ತಿಳಿದಷ್ಟು ಶುದ್ಧ ಸಾಹಿತ್ಯವನ್ನು ನೀಡಲು ಮಾಡಿರುವ ಪ್ರಯತ್ನ ಶ್ರೀ ಕೇಶವಾಚಾರ್ಯರ ನಿರಂತರ ವಾತ್ಸಲ್ಯಪೂರ್ವಕ ಶ್ರಮದ ಫಲಿತಾಂಶ. ಇಂದು (೧೯೯೩) ಈ ಸಂಕಲನವನ್ನು ಅದೇ ಸಮರ್ಪಣಭಾವದಿಂದ ಆ ಹಿರಿಯ ಚೇತನಗಳಿಗೆ ಅರ್ಪಿಸುತ್ತಿದ್ದೇನೆ. ಬಾಲಶಿಕ್ಷೆ ತರಗತಿಯಲ್ಲಿ ನನಗೆ ಕನ್ನಡದ ಅಆಇಈ ಕಲಿಸಿದ ಶ್ರೀ ರಾಮಚಂದ್ರ ಅವರು ಮಾತ್ರ ಇಂದು ನಮ್ಮ ಜೊತೆಯಲ್ಲಿದ್ದಾರೆ:

ಬಾನಿನಲ್ಲಿ ಬರೆದ ಗೆರೆಯ ಹಾಗೆ ಮೆರೆವೆಯೋ
ಆ ಅಗಾಧ ಆಳದಲ್ಲಿ ನನ್ನ ಕರೆವೆಯೋ
ಇಲ್ಲೆ ನಾನು ಎಲ್ಲೊ ನೀನು ಕಿವಿಯೊಳುಲಿವೆಯೋ
–ಅಂಬಿಕಾತನಯದತ್ತ

೧೯೪೯–೫೩, ಆಗ ನಾನು ಮಂಗಳೂರು ಸೇಂಟ್ ಅಲೋಶಿಯಸ್ ಕಾಲೇಜಿನಲ್ಲಿ ಗಣಿತೋಪನ್ಯಾಸಕನಾಗಿ ವೃತ್ತಿ ಪ್ರವೇಶ ಮಾಡಿದ್ದೆ. ವಿಜ್ಞಾನದ ಜೊತೆಗೆ ಸಂಗೀತ, ಸಾಹಿತ್ಯ, ಲೇಖನ, ಚರ್ಚೆ, ವ್ಯವಸ್ಥಾಪನೆ, ಚಾರಣ ಹೀಗೆ ಹಲವಾರು ದಿಸೆಗಳಲ್ಲಿ ನನ್ನ ಚೇತನ ಹರಿಯಲು ಸಮೃದ್ಧ ಅವಕಾಶಗಳು ಅಲ್ಲಿದ್ದುವು. ಇಂಥ 'ಅತಿ'ಗಳ (ಅತಿರೇಕ!) ಕಾರಣವಾಗಿ ನನಗೆ ಶ್ರೀ ಶ್ರೀನಿವಾಸ ಉಡುಪರ ಪರಿಚಯವಾಯಿತು.

ಇವರು ಸಂಗೀತವಿದರು, ಗಾಯಕರು, ಲೇಖಕರು, ಪತ್ರಕರ್ತರು, ಸಾಹಿತಿಗಳು, ಬೆಸಂಟ್ ಮಹಿಳಾ ಶಾಲೆಯಲ್ಲಿ ಅಧ್ಯಾಪಕರು, ನನಗಿಂತ ಹಿರಿಯರು. ಶ್ರೀಯುತರು ನನ್ನ 'ಹಾರಾಟ'ಗಳ ಬಗ್ಗೆ ಅಪಾರ ಆಸಕ್ತಿ ತಳೆದು ಕಥಾಸಂಕಲನವನ್ನು ತರುವಂತೆ ಪ್ರೋತ್ಸಾಹಿಸಿದರು. ಆಗ ನಾನು ಬರೆದೆ "ಆಪ್ತ ಮಿತ್ರರೂ ವಸಂತ ಮಾಲಿಕೆಯ ಸಂಪಾದಕರೂ ಆಗಿರುವ ಶ್ರೀನಿವಾಸ ಉಡುಪರು ನಕ್ಷತ್ರಕನಂತೆ ಈ ಲೇಖಕನನ್ನು ಕಾಡಿರದಿದ್ದರೆ 'ವನಸುಮ'ವು ನಗರ ಪ್ರಕಾಶಕ್ಕೆ ಬರುತ್ತಿರಲಿಲ್ಲ. ಪುಷ್ಪಗಳು ಸೌಸವಯುಕ್ತವಾಗಿದ್ದರೆ ಆ ಕೀರ್ತಿ ಶ್ರೀ ಉಡುಪರಿಗೆ ಸಲ್ಲತಕ್ಕದ್ದು. ಈ ವಾಕ್ಯದ ಉತ್ತರಾರ್ಧವು ಅಧ್ಯಾಹಾರ." (ವನಸುಮ ಮುನ್ನುಡಿ ೮–೬–೧೯೫೧). ಮತ್ತೊಮ್ಮೆ ಬರೆದೆ "ಪ್ರಿಯ ಮಿತ್ರರಾಗಿರುವ ಶ್ರೀ ಉಡುಪರ ಮತ್ತು ವಸಂತಮಾಲಿಕೆಯ ಅಧಿಕಾರಿಗಳ ಉಪಕಾರವನ್ನು ಎರಡನೆಯ ಸಲ ಕೃತಜ್ಞತೆಯಿಂದ ಸ್ಮರಿಸುವ ಪುಣ್ಯಕಾಲ ಸನ್ನಿಹಿತವಾಗಿದೆ. ಲೇಖಕನು ಅತ್ಯಂತ ಸಂತೋಷದಿಂದ ಈ ಕಾರ್ಯವನ್ನು ಮಾಡುತ್ತಾನೆ." (ಕೊಡಗಿನ ಕತೆಗಳು ಮುನ್ನುಡಿ ೨೬–೯–೧೯೫೩)



ಶ್ರೀನಿವಾಸ ಉಡುಪರು ಇಂದು ನಮ್ಮ ಜೊತೆಯಲ್ಲಿಲ್ಲ. ವಚನ ಭಾಗವತವೆಂಬ (ಗೀತಾ ಬುಕ್ ಹೌಸ್, ಮೈಸೂರು) ಉದ್ಗ್ರಂಥದ ಮೂಲಕ ಹಾಗೂ ಅವರ ಅಸಂಖ್ಯ ಶಿಷ್ಯಪ್ರಶಿಷ್ಯ ಪರಂಪರೆಯ ಮೂಲಕ ಚಿರಾಯುವಾಗಿದ್ದಾರೆ. ಅವರು ಅಂದು ನಿರ್ವ್ಯಾಜ ಅಂತಃಕರಣದಿಂದ ಇಪ್ಪತ್ತಮೂರರ ಈ 'ಕೋಡಗ'ನನ್ನು 'ಅಂಕಿಸಿ'ರದಿದ್ದರೆ ನಾನೇನಾಗಿರುತ್ತಿದ್ದೆ? ತಾಮಸ್ ಗ್ರೇ ಉವಾಚ:

Full many a flower is born to blush unseen
And waste its sweetness on the desert air

ಸಹಜವಾಗಿ ಕೊಡಗಿನ ಸುಮಗಳು ಶ್ರೀನಿವಾಸ ಉಡುಪರಿಗೂ ಅರ್ಪಿತವಾಗಿದೆ.

ಮೈಸೂರಿನ ಹರ್ಷ ಪ್ರಿಂಟರ್ಸ್ ಉದ್ಯಮದ ಮಾಲಿಕರು ಮತ್ತು ಕಾರ್ಮಿಕರು ನಮ್ಮ ಸಾಹಿತ್ಯ–ಸಂಗೀತ ಕುಟುಂಬದ ಅವಿಭಾಜ್ಯ ಅಂಗವಾಗಿದ್ದಾರೆ. ಅವರಿಗೆ ಕೃತಜ್ಞತೆಗಳನ್ನಾಗಲೀ ಧನ್ಯವಾದಗಳನ್ನಾಗಲೀ ಸೂಚಿಸುವುದು ಅತ್ರಿ ಬುಕ್ ಸೆಂಟರಿಗೆ ಅವನ್ನು ಸೂಚಿಸಿದಂತೆ ಔಪಚಾರಿಕವೆನ್ನಿಸಬಹುದು.

ಎಷ್ಟು ಬಗೆ ಯಂತ್ರಗಳೊಳೆಷ್ಟು ರಸಮಿಶ್ರದಿಂ
ದಷ್ಟಾದಿಭೂತಗಳು ಪರಿಪಾಕವೊಂದಿ
ಒಟ್ಟು ಸೇರಿಹವು ನರನೆಂಬ ಸಿದ್ಧಿಯೊಳವನು
ಸೃಷ್ಟಿಶೈಲದ ಶಿಖರ ಮಂಕುತಿಮ್ಮ.

**ಜಿ.ಟಿ. ನಾರಾಯಣ ರಾವ್**
೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ಅರಸ್ತೆ, ಕುವೆಂಪುನಗರ, ಮೈಸೂರು ೫೭೦೦೨೩.

# ಸುಬ್ಬಪ್ಪನ ದಯೆ

**(ಒಂದನೇ ಕತೆ–೧೯೪೭)**

ನಮ್ಮೂರ ಹೊಲೆಯರ ವಾಲಗ ತಮಟೆಗಳನ್ನು ತಾಳವಾದ್ಯ ಕಛೇರಿಯನ್ನು – ನೀವೆಂದಾದರೂ ಕೇಳಿರುವಿರಾ? ಇದು ಬಹಳ ವಿನೋದವಾಗಿದೆ. ವಾಲಗ ಬಾರಿಸುವವನು, ಶ್ರುತಿ ಕೊಂಬು ಊದುವವರು, ತಮಟೆ ಬಡಿಯುವವರು ಹೀಗೆ ಇಷ್ಟು ಜನರ ಸಮ್ಮೇಳನ ಇಲ್ಲಿ ನಡೆಯುವುದು. ಶ್ರುತಿಗಾರ ಫ್ಲೈರ್ಞೇ ಎಂದು ನಾದ ತುಂಡು ಮಾಡದೇ ಏಕಾಗ್ರತೆಯಿಂದ ಊದುತ್ತಿರುತ್ತಾನೆ. ಅವನು ಕಲ್ಲಿನ ಪ್ರತಿಮೆಯಂತೆ ನಿಶ್ಚಲ. ಆದರೆ ಕೆನ್ನೆಗಳು ಮಾತ್ರ ಉಬ್ಬುತ್ತ ಚಪ್ಪಟೆಯಾಗುತ್ತ ಇರುತ್ತವೆ. ವಾಲಗದವನು ನಾನಾ ವಿಧದ ಹಾಡುಗಳನ್ನು ಬಾರಿಸುತ್ತಾನೆ. ಎಲ್ಲವೂ ಅಪಸ್ವರಮಯ – ಆ ಅಪಸ್ವರದಿಂದಲೇ ಒಂದು ವಿನೋದವಾಗುವುದು. ಇನ್ನು ತಮಟೆಯವರದು ಎಲ್ಲ ಹಾಡುಗಳಿಗೂ ಒಂದೇ ಅಚ್ಚು. ಪೇಟೆಂಟು ತಾಳ – ಡಂಗಡಕ ಎಂದು ಹೊಡೆಯುತ್ತಿರುತ್ತಾರೆ. ಕೊಂಬಿನವರು ಅರ್ಧ ವೃತ್ತಾಕಾರದ ಆ ವಾದ್ಯವನ್ನು ಆಗಾಗ ಗಂಭೀರವಾಗಿ ಮೇಲೆತ್ತಿ ಚೂಪಾದ ಕೊನೆಯನ್ನು ತುಟಿಯ ಮೇಲಿರಿಸಿ, ಈ ಸಂಗೀತಸೌಧಕ್ಕೆ ಕಳಸವಿಡುವಂತೆ, ದಿಗ್ಭಿತ್ತಿಗಳನ್ನು ಭೇದಿಸುವಂತೆ ಮೊಳಗಿಸುತ್ತಾರೆ! ಅಂತೂ ಏನೋ ಒಂದು ಗಲಭೆ, ಒಂದು ಗದ್ದಲ ನಡೆಯುತ್ತಿರುತ್ತದೆ; ಅದನ್ನು ಸಂಗೀತವೆನ್ನಿ, ಹರಟೆಯೆನ್ನಿ. ಅದನ್ನು ಕೇಳುತ್ತ ನಿಂತರೆ ಒಂದು ವಿಧದ ಆನಂದವೇ ಆಗುತ್ತದೆ. ಕಾಲುಗಳು ಥಕ್ಕನೆ ತಾಳಕ್ಕೆ ಸರಿಯಾಗಿ ಹೆಜ್ಜೆಯಿಡಲು ತೊಡಗುತ್ತವೆ. ಸಣ್ಣ ಮಕ್ಕಳು, ಕೆಲಸಗಾರರು ಮೊದಲಾದವರು ಈ ವಾದ್ಯ ಸಂಭ್ರಮ ನಡೆಯುವಾಗ ಮೇಳಗಾರರ ಸುತ್ತಲೂ ಕುಣಿಯುವುದುಂಟು. ಇದು ಭರತನಾಟ್ಯ ಶಾಸ್ತ್ರಕ್ಕೆ ಸರಿಯಾದ ನೃತ್ಯ ಎಂದು ಇಂದಿಗೂ ಕೆಲವರು ಸಾಧಿಸುತ್ತಿದ್ದಾರೆ! ನೀವು ಬೇರೆ ವಿಷಯದಲ್ಲಿ ತಲ್ಲೀನರಾಗಿದ್ದರೆ, ಸ್ವಲ್ಪ ಹೊತ್ತಿನಲ್ಲಿಯೇ ಇದೊಂದು ವಾದ್ಯಗೋಷ್ಠಿ ನಡೆಯುತ್ತಿದೆ ಎಂದೇ ತಿಳಿಯುವುದಿಲ್ಲ. ಆದರೆ ಈ 'ಸಂಗೀತ' ಥಕ್ಕನೆ ನಿಂತರೆ, ಜಡಿಮಳೆ ಸುರಿದು ನಿಂತಾಗ ಆಗುವ ಅನುಭವವೇ ಆಗುವುದು. ಈ ಹೊಲೆಯರು ಹಳ್ಳಿಯಲ್ಲಿ ಹುಟ್ಟಿ, ವಿದ್ಯೆಯ ಯಾವ ಗಂಧವೂ ಇಲ್ಲದೆ ಬೆಳೆದು, ಅಲ್ಲಿಯೇ ಮಣ್ಣುಗೂಡುವವರು ಎಂದು ತಿಳಿದರೆ ನಮಗೆ ಈ ವಾದ್ಯಗಾರರ ವಿಷಯದಲ್ಲಿ ತಿರಸ್ಕಾರ, ತಾತ್ಸಾರ ಮತ್ತು ಕುಚೇಷ್ಟೆ ಉಂಟಾಗುವುದೇ ಇಲ್ಲ. ಬದಲು ಆದರ, ಕುತೂಹಲ, ವಿನೋದ ಜನಿಸುತ್ತವೆ. ತಂಜಾವೂರಿನ ನಾಗಸ್ವರ ವಿದ್ವಾಂಸರ ಗುರುಕುಲಕ್ಕೆ ಸೇರಿದವರಲ್ಲ ಈ ಹರಿಜನರು. ಸರಿಗಮವೆಂದರೇನೆಂದು ಅರಿಯದವರು. ಶ್ರುತಿ ಹೊಂದಿಸುವುದು ಹೇಗೆ, ಏನು ಎಂದು ತಿಳಿಯದಿದ್ದರೂ ಇವರ ವಾಲಗಕ್ಕೆ ಒಂದು ಶ್ರುತಿಯಿದೆ. ಇನ್ನು ತಾಳಾದ ತದ್ಧಿತ್ತೋಂನ್ನಂಗಳ ವೈಖರಿಯಾಗಲೀ, ರಾಗದ ಮೇಳಕರ್ತ ವಿಭಾಗಗಳಾಗಲೀ ಇವರಿಗೆ ತಿಳಿಯದು. ನಮ್ಮೂರಿನ ಜನರು ಸರಳ ಹೃದಯಿಗಳು. ಅಂತೆಯೇ ಮದುವೆಮುಂಜಿಗಳಿಗೆ ಹುತ್ತರಿ ಕುಣಿತ, ಸಾವಿನ ಮೆರವಣಿಗೆ ಮುಂತಾದ ಶುಭ, ಸಂತೋಷ, ಅಶುಭ ಕಾರ್ಯಗಳಿಗೆಲ್ಲ ಈ ಡಂಗಡಕ ವಾದ್ಯವನ್ನೇ ಕರೆಯಿಸುತ್ತಾರೆ. ಈ ಸಂದರ್ಭದಲ್ಲಿ ಮುಖ್ಯವಾಗಿ ಬೇಕಾದುದು ಗಲಭೆ, ಕಿವಿಗೆ ತಾಗುವ ಸ್ವರ, ಏನೋ ಸಮಾರಂಭ ನಡೆಯುತ್ತಿದೆ ಎಂದು ಅರಿಯಲು. ಮೈಸೂರು, ತಂಜಾವೂರು ಸಂಗೀತದ ಚಾಕಚಕ್ಯ ಅನಾವಶ್ಯಕ. ಆದರೂ ಈಚೆಗೆ ಕೆಲವರು ಈ ತತ್ತ್ವಕ್ಕೆ ಭಂಗ ತರುತ್ತಿದ್ದಾರೆ. ಮೈಸೂರಿನಿಂದ ವಾಲಗದವರನ್ನು ಕರೆಯಿಸಿ, ಅವರಿಗೆ ಒಂದಕ್ಕೆ ನಾಲ್ಕು ತೆತ್ತು, ಅವರು ಬಾರಿಸುವ 'ಉತ್ತಮ ರೀತಿ'ಯ ಅಪಸ್ವರಕ್ಕೆ ಶಾಭಾಸ್‌ಗಿರಿಯನ್ನೂ ಬಹುಮಾನವನ್ನೂ ಕೊಟ್ಟು ಕಳಿಸುತ್ತಾರೆ. ಆದರೆ ಅಪೂರ್ವ. ಹೆಚ್ಚಿನ ಎಲ್ಲ ಶುಭಾಶುಭ ಕಾರ್ಯಗಳಿಗೆ ಪುರೋಹಿತರ ಮಂತ್ರದಂತೆ (ಈಗ ಇದೂ ಮರೆಯಾಗುತ್ತ ಬರುತ್ತಿದೆ) ಹೊಲೆಯರ ವಾದ್ಯವೂ ಆವಶ್ಯಕ.

ಬಲಗೈ ನಿಂಗನು ಮಡಿಕೇರಿಯ ಹೊಲೆಯರ ಪೈಕಿ ಅನುಭವಸ್ಥನಾದ ವಾದ್ಯಗಾರ (ವಾಲಗ ಬಾರಿಸುವವನು) ಎಂದು ಹೆಸರು ಪಡೆದಿದ್ದನು. ಇದಕ್ಕೆ ರುಜುವಾತಾಗಿ "ಕೋದಂಡ ಕುಟ್ಟಯ್ಯ ದೊರೆಗಳ ಮದ್ವೆಗೆ ನನ್ನೇ ಕರ್ಸಿದ್ರು ಬುದ್ದೀ. ಇಲ್ನೋಡಿ ಅವ್ರು ನಂಗೆ ಇನಾಂ ಕೊಟ್ಟ ಕೋಟೂ" ಎನ್ನುತ್ತ ಒಂದು ಹಳೆಯ ಕೋಟನ್ನು ಹೆಮ್ಮೆಯಿಂದ ತೋರಿಸುತ್ತಿದ್ದನು. ಮಡಿಕೇರಿ ಪೇಟೆಯ ದೊಡ್ಡ ಮನುಷ್ಯರ ಮನೆಯ ಮುಖ್ಯ ಕಾರ್ಯಗಳಿಗೆಲ್ಲ ನಿಂಗನದೇ ವಾದ್ಯ ಖಾಯಂ ಆಗಿತ್ತು. ಪಕ್ಕ ವಾದ್ಯಗಳಿಗೆ, ಅಂದರೆ ಮೋರಿ ಹಿಡಿಯಲು (ಶ್ರುತಿ ಊದಲು), ತಮಟೆ ಬಡಿಯಲು ಇತ್ಯಾದಿಗಳಿಗೆ ಉಕ್ಕಡದ ಇತರ ಹೊಲೆಯರನ್ನು ಕರೆದುಕೊಂಡು ಹೋಗುತ್ತಿದ್ದನು. ಇವರಿಗೆಲ್ಲ ಭಕ್ಷೀಸು, ಹೊಟ್ಟೆ ತುಂಬ ಊಟ, ಬಟ್ಟೆ ಎಲ್ಲ ದೊರೆಯುತ್ತಿದ್ದುವು. ಆದರೆ ಮದುವೆ ಮುಂತಾದವುಗಳು ಇಡಿಯ ವರ್ಷದಲ್ಲಿ ಇರುವುದಿಲ್ಲ. ಉಳಿದ ಸಮಯದಲ್ಲಿ ಕೂಲಿಗೆಲಸ ಮಾಡಿ ಹೊಟ್ಟೆ ಹೊರೆಯುತ್ತಿದ್ದರು.

ಅಂತೂ ನಿಂಗನಿಗೆ ಏನೂ ತೊಂದರೆಯಿರಲಿಲ್ಲ. ಆದರೆ ಅವನಿಗೆ ಮಕ್ಕಳೇ ಇರಲಿಲ್ಲ. ಹೊಲತಿ ಪುಟ್ಟಿಯೂ ಎತ್ತಿಕೊಳ್ಳಲು, ಆಡಿಸಲು ಒಂದು ಮಗುವಿಲ್ಲವಲ್ಲ ಎಂದು ಪೇಚಾಡುತ್ತಿದ್ದಳು. ದಿನಗೂಲಿಗೆ ಪೇಟೆಗೆ ಹೋಗುವಾಗ "ವಾಂಕಾರಪ್ಪ"ನಿಗೆ (ಓಂಕಾರೇಶ್ವರ ದೇವಾಲಯ) ದೂರದಿಂದ ನಮಸ್ಕಾರ ಮಾಡಿ ಹೋಗುತ್ತಿದ್ದಳು. ಮೋರಿ ಹಿಡಿಯಲು, ಮುಂದೆ ಜತೆಯಲ್ಲಿ ಕೆಲಸ ಮಾಡಲು, ಹಿಂದಿನಿಂದ ಬಂದ ವಾಲಗದ ವಿದ್ಯೆಯನ್ನು ಮುಂದುವರಿಸಲು ಒಬ್ಬ ಮಗನಿಲ್ಲವಲ್ಲ ಎಂದು ನಿಂಗನು ಕೊರಗುತ್ತಿದ್ದನು. ಮಕ್ಕಳೆಂದರೆ ವೃದ್ಧಾಪ್ಯದಲ್ಲಿ ತಮಗೆ ಅನ್ನ ಕೊಡುವವರು, ಮನೆಗೆ ಭೂಷಣರು ಎಂದು ಮುಂತಾದ 'ಉದಾತ್ತ' ಭಾವನೆಗಳು ಅವರಲ್ಲಿರಲಿಲ್ಲ. ಈ ರೀತಿ ಅಭಿಪ್ರಾಯವಿದ್ದು ಮುಂದೆ ಹಾಗಾಗದಿದ್ದರೆ ಆಗುವ ಹತಾಶೆಯೂ ಅವರಿಗಿರಲಿಲ್ಲ. ನೆರೆಕರೆಯ ಗುಡಿಸಲಿನ ಮಕ್ಕಳೆಲ್ಲರೂ ದೊಡ್ಡವರಾದರು. ಆದರೆ ನಿಂಗನ ಗುಡಿಸಲು ಮಾತ್ರ ತಣ್ಣಗೆ ಉಳಿಯಿತು.



ಮುದುಕ ಹೊಲೆಯನೊಬ್ಬನು ಸೂಚಿಸಿದನು "ನಿಂಗಣ್ಣಾ ನೀನ್ಯಾಕೆ ಆ ಸುಬ್ಬಪ್ಪಯ್ಯನಿಗೆ ಹರ್ಕೆ ಹೇಳೋದಿಲ್ಲ? ಹಿಂದೆಟ್ಟೋ ಸಲ ಆ ದೇವ್ರು ಬ್ಯಾರೆಯವ್ರಿಗೆ ಒಲ್ದಿದ್ದಾನೆ." ನಿಂಗನಿಗೆ ಇದು ಹೌದೆಂದು ಅನ್ನಿಸಿತು. ಆದರೆ ಸುಬ್ರಹ್ಮಣ್ಯ ಸ್ವಾಮಿಗೆ ಏನೆಂದು ಹರಕೆ ಹೇಳಿಕೊಳ್ಳುವುದು? ರಥೋತ್ಸವ ಮಾಡಿಸುತ್ತೇನೆ ಎಂದೇ, ಚಿನ್ನದ ನೇವಳವನ್ನು ತೊಡಿಸುತ್ತೇನೆ ಎಂದೇ? ದೇವರದರ್ಶನವೂ ಹೊಲೆಯರಿಗಿರಲಿಲ್ಲ. "ಸ್ವಾಮೀ ಸುಬ್ಬಪ್ಪಾ! ಒಬ್ಬ ಮಗನ್ನ ಕೊಡು. ವರ್ಸ ವರ್ಸ ನಿನ್ನಲ್ಲಿಗೆ ಬಂದು ಸೇವೆ ಮಾಡಿ ಬರ್ತೇನೆ" ಎಂದು ನಿಂಗನು ಭಕ್ತಿಯಿಂದ ಪ್ರಾರ್ಥಿಸಿಕೊಂಡನು. ಬಡವರ ಪ್ರಾರ್ಥನೆ ದೇವರಿಗೆ ಶೀಘ್ರವಾಗಿ ತಲಪುವುದು. ಮುಂದೆ ಒಂದು ವರ್ಷದಲ್ಲಿಯೇ ನಿಂಗನಿಗೊಂದು ಗಂಡು ಮಗುವಾಯಿತು – ಕೃಷ್ಣವರ್ಣದ ಪುತ್ರರತ್ನ ಜನಿಸಿತು. ಆ ಗಂಡ ಹೆಂಡಿರ ಸಂತೋಷಕ್ಕೆ ಪಾರವೇ ಇಲ್ಲ. ಕತ್ತಲೆಯಿಂದ ಮುದುರಿದ್ದ ಗುಡಿಸಲು ಬೆಳಕಿನಿಂದ ಮಿನುಗಿತು. ನಿಂಗನು ವಾಲಗವನ್ನು ಊದಿದನು. ಕಪ್ಪು ಕಲ್ಲುಗುಂಡಿನಂತಿದ್ದ ಆ ಮಗು "ಕಿರೋ" ಎಂದು ಅರಚಿತು. ಸುಬ್ರಹ್ಮಣ್ಯದ ಸುಬ್ಬಪ್ಪನ ದಯೆಯಿಂದ ಹುಟ್ಟಿದ ಮಗುವಾದುದರಿಂದ ಅದಕ್ಕೆ ಸುಬ್ಬ ಎಂದು ಹೆಸರಿಟ್ಟರು.

ಸುಬ್ಬನು ದಿನದಿಂದ ದಿನಕ್ಕೆ ಬೆಳೆಯುತ್ತಿದ್ದನು. ಅವನ ಪುಂಡು ಕೂಡ ಅಂತೆಯೇ ಹೆಚ್ಚುತ್ತಿತ್ತು. ಯಾವ ಸಣ್ಣ ವಸ್ತುವನ್ನೂ ನೆಲದ ಮೇಲೆ ಇಡುವಂತಿರಲಿಲ್ಲ. ಗೂಡಿನಲ್ಲಿಯೋ ಗೋಡೆಯ ಮೇಲೆಯೋ ಅವನ್ನೆಲ್ಲ ಇಡಬೇಕಾಗುತ್ತಿತ್ತು. ಸುಬ್ಬನು ಹುಟ್ಟಿದ ವರ್ಷವೇ ನಿಂಗನು ಸುಬ್ರಹ್ಮಣ್ಯ ಷಷ್ಠಿಗೆ ಸುಬ್ರಹ್ಮಣ್ಯಕ್ಕೆ ನಡೆದುಕೊಂಡು ಹೋದನು. ಮಡಿಕೇರಿಯಿಂದ ಒಂದು ದಿವಸ ಹಾದಿ. ವಾಲಗವನ್ನು ಜೊತೆಯಲ್ಲೇ ಒಯ್ದಿದ್ದನು. ಅಲ್ಲಿ ಜಾತ್ರೆಯ ಜನಜಂಗುಳಿಯಲ್ಲಿ ಇವನಿಗೆ ವಾಲ ಬಾರಿಸಲು ಬಿಡುವರೇ? ಅಸ್ಪೃಶ್ಯರು ದೂರ ನಿಂತಿರಬೇಕಾಗುತ್ತಿತ್ತು. ರಥೋತ್ಸವ ನಡೆಯುವಾಗ ಬಹುದೂರದಿಂದ ಹೊಲೆಯರ ಗುಂಪಿನಲ್ಲಿ ನಿಂತು ನೋಡಬಹುದಾಗಿತ್ತು. ಆದರೆ ಸರ್ವಾಂತರ್ಯಾಮಿ ದೇವರ ಸೇವೆ ಮಾಡಲು ರಥದ ಮುಂದೆಯೇ ಜನರ ಗುಂಪು ಇರುವಲ್ಲಿಯೇ ನಿಲ್ಲಬೇಕಾಗಿಲ್ಲವಷ್ಟೆ. ದೇವಾಲಯದ ಉತ್ತರ ಭಾಗದಲ್ಲಿ ಜನರಿಲ್ಲದ ಕಡೆಗೆ ಹೋಗಿ ನಿಂಗನು ವಾಲಗ ಊದಿ ಬರುತ್ತಿದ್ದನು. ಇವನ ಹಾಗೆಯೇ ಇತರ ಹೊಲೆಯರು ಅಲ್ಲಿ ಬಂದು ಸೇರುತ್ತಿದ್ದರು. ಎಲ್ಲರೂ ತಮಗೆ ಬೇಕಾದ ಹಾಗೆ ಹಾಡುಗಳನ್ನು ಬಾರಿಸಿ ದೇವರ ಸೇವೆ ಮಾಡುತ್ತಿದ್ದರು. ಅವರ ಭಕ್ತಿಯೇ ಅಲ್ಲಿ ಮುಖ್ಯ. ವಾಲಗದಲ್ಲಿ ಇದ್ದ ಇಂಪಲ್ಲ. ಇವರ ಭಕ್ತಿಗೆ ಮೆಚ್ಚಿಯೋ ಎಂಬಂತೆ ಒಂದು ನಾಗರಹಾವು ಅಲ್ಲೇ ದೂರದಲ್ಲಿ ಹರಿದುಹೋಗುತ್ತಿದ್ದುದನ್ನು ನೋಡುತ್ತಿದ್ದರು. "ಸ್ವಾಮೀ ಸುಬ್ಬಪ್ಪಾ" ಎಂದು ಭಕ್ತಿಯಿಂದ ಅಡ್ಡಬೀಳುತ್ತಿದ್ದರು.
ನಿಂಗನು ಹೀಗೆ ಪ್ರತಿವರ್ಷವೂ ಸುಬ್ರಹ್ಮಣ್ಯ ಜಾತ್ರೆಗೆ ಹೋಗಿ ತನ್ನ ಸೇವೆ ಸಲ್ಲಿಸಿ ಬರುತ್ತಿದ್ದನು.

ಸುಬ್ಬನು ಈಗ ದೊಡ್ಡ ಹುಡುಗ. ನಿಂಗನೂ ವಾಲಗ ಬಾರಿಸುವಾಗ ಮೋರಿ ಹಿಡಿಯುತ್ತಿದ್ದನು. ಒಂದು ದಿನ ವಾಲಗವನ್ನು ಊದಲು ಪ್ರಾರಂಭಿಸಿದನು. ಆದರೆ ಬಹಳ ಹೊತ್ತು ಇದನ್ನು ಉರುಗಲು ಆಗುತ್ತಿರಲಿಲ್ಲ, ಎಳೆಯ ಎದೆಯಾದುದರಿಂದ. ಈ ವಾಲಗದ ವಿದ್ಯೆ ವಂಶ ಪರಂಪರೆಯಾಗಿ ಬಂದದ್ದು – ನಿಂಗನಿಗೆ ಅವನ ತಂದೆಯಿಂದ, ಅವನಿಗೆ ಅವನ ತಂದೆಯಿಂದ, ಹೀಗೆ. ಆದರೆ ತ್ಯಾಗರಾಜರ ಗುರುಕುಲಕ್ರಮವೇನೂ ಇಲ್ಲಿ ಇಲ್ಲ. ದೇಹ ಬಲಿತಾಗ ವಾಲಗ ಹಿಡಿದು ಇಷ್ಟ ಬಂದಂತೆ ಉರುಗುವುದೇ ಇದರ ಕ್ರಮ. ಗಟ್ಟಿಯಾಗಿ, ಬಹಳ ಹೊತ್ತು ಪ್ಲೇಪ್ಲೇ ಮಾಡಲು ಶಕ್ತನಾದವನೇ ಯಶಸ್ವಿ. ಹಲವು ವರ್ಷಗಳ ಅನುಭವದಿಂದ ಅನೇಕ ಹಳ್ಳಿ ಹಾಡುಗಳ ಅಪಭ್ರಂಶಗಳನ್ನು ಬಾರಿಸುತ್ತಿದ್ದರು. ಸಂಗೀತವೆಂದರೇನೆಂದು ಅರಿಯದವರು ವಿದ್ಯೆಯ ಗಂಧವಿಲ್ಲದವರು ಇಷ್ಟು ಕಲಿಯುವುದು ವಿಶೇಷವಲ್ಲವೇ? ಸುಬ್ಬನು ವಾಲಗವನ್ನು ಅರಚಿಸಲು ತೊಡಗಿದನು. ನಿಂಗನಿಗೆ ತನ್ನ ಮಗನು ತನ್ನ ಮಟ್ಟಕ್ಕೆ ಬರುವುದನ್ನು ನೋಡಿ ಬಲು ಸಂತೋಷ. ಮದುವೆ ಮನೆಗಳಿಗೆ ಹೋಗುವಾಗಲೆಲ್ಲ ಮಗನನ್ನು ಶ್ರುತಿಯೂದಲು ಕರೆದುಕೊಂಡು ಹೋಗುತ್ತಿದ್ದನು.

ಆಗ ಸಿನೆಮಾ ಇನ್ನೂ ಬಂದಿರಲಿಲ್ಲ. ಬಸ್ಸೇ ಅಪೂರ್ವ. ಬೇಸಗೆಯಲ್ಲಿ ನಾಟಕ ಕಂಪೆನಿಗಳು ಮಡಿಕೇರಿಗೆ ಬಂದು ಒಂದೆರಡು ತಿಂಗಳುಗಳಿದ್ದು ಹೋಗುತ್ತಿದ್ದುವು. ನಮ್ಮೂರಿನ ಜನರಿಗೆ ಇದೇ ಅತಿ ಸಂಭ್ರಮದ ಸಮಯ. ಬೆಳೆ ಕೆಲಸ ಮುಗಿದು ಜನರ ಜೇಬಿನಲ್ಲಿ ದುಡ್ಡು ಸೇರುತ್ತಿತ್ತು. ವಿರಾಮವೂ ಇರುತ್ತಿತ್ತು. ಒಂದು ನಾಟಕವನ್ನಾದರೂ ನೋಡದ ಜನರೇ ಮಡಿಕೇರಿಯಲ್ಲಿರಲಿಲ್ಲ. ನಾಟಕದವರು ತಮ್ಮೊಡನೆ ವಾಲಗದವರನ್ನು ಕರೆದು ತರುತ್ತಿದ್ದರು. ನಾಟಕ ಕಂಪೆನಿಯು ಬರಲಿದೆ ಎಂದು ಸುದ್ದಿ ಹಬ್ಬುವಾಗಲೇ ಪೇಟೆಯ ಹುಡುಗರೆಲ್ಲ ಆ ಬಯಲಿನಲ್ಲಿ ಹಾಜರು. ಸ್ಥಳ ಪರೀಕ್ಷೆ ಮಾಡಿ ಧರ್ಮಾರ್ಥ ತಮ್ಮ ಅಮೂಲ್ಯ ಅಭಿಪ್ರಾಯವನ್ನು ಕೊಡುತ್ತಿದ್ದರು! ನಾಟಕ ಕಂಪೆನಿಯು ಬಂದು ಡೇರೆ ಹಾಕಿದ ಮೇಲೆ ಪ್ರತಿದಿನವೂ ಆ ಬಯಲಿನಲ್ಲಿ ಮಹಾಸಭೆಗಳನ್ನು ನಡೆಯಿಸುತ್ತಿದ್ದರು. ಆ ಡೇರೆಯ ಸುತ್ತ ಆಡುವುದು, ಚಿತ್ರಗಳನ್ನು ಅಣಕಿಸುವುದು, ಅಲ್ಲೆ ಬಯಲಿನಲ್ಲಿ ಗೋಲಿ, ಚಿಣ್ಣೀಕೋಲು ಮುಂತಾದವುಗಳನ್ನು ಆಡುವುದು ಹೀಗೆ ಮಾಡುತ್ತ ಸಮಯ ಕಳೆಯುತ್ತಿದ್ದರು. ಸುಬ್ಬನೂ ಅವನ ಉಕ್ಕಡದ ಸಂಗಾತಿಗಳೊಡನೆ ಅಲ್ಲಿಗೆ ಹೋಗುತ್ತಿದ್ದನು. ಸಾಯಂಕಾಲವಾದೊಡನೇ ವಾಲಗದವರು ಹಾಡುಗಳನ್ನು ಬಾರಿಸಲು ತೊಡಗುತ್ತಿದ್ದರು.

ಒಂದನೆಯ ದಿನವೇ – ಈ ಹಾಡನ್ನು ಮೊದಲನೆಯ ಸಲ ಕೇಳಿದಾಗ – ಸುಬ್ಬನಿಗೆ ಮೈಯೆಲ್ಲ ರೋಮಾಂಚನವಾದ ಹಾಗಾಯಿತು. ಜತೆ ಹುಡುಗರು ಆಡಲು ಕರೆದರೆ ಹೋಗದೆ ಅಲ್ಲಿಯೇ ನಿಂತುಬಿಟ್ಟನು. ವಾಲಗದವನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು. ಅವನಿಗೆ ಸಂತೋಷ, ಉತ್ಸಾಹ ಎಲ್ಲ ಮೇರೆ ಮೀರುವಂತಾದುವು. ನಾಟಕ ಪ್ರಾರಂಭವಾಗುವುದು ಹತ್ತು ಘಂಟೆ ರಾತ್ರಿಯಲ್ಲಿ. ಕತ್ತಲಾದೊಡನೇ ಜತೆ ಹುಡುಗರು ಹೊರಟು ಸುಬ್ಬನನ್ನು ಕರೆಯಲು ತಾನೀಗ ಬರುವುದಿಲ್ಲ ಎಂದು ಹೇಳಿ ಕಳಿಸಿದನು. ಆ ವಾಲಗವನ್ನು ಎಷ್ಟು ಕೇಳಿದರೂ ತೃಪ್ತಿಯಿಲ್ಲದೇ ಅಲ್ಲಿಗೇ ನಿಂತನು. ತಾನೊಂದು ಹೊಸ ಲೋಕದಲ್ಲಿಯೇ ತಿರುಗುತ್ತಿರುವಂತೆ ಅವನಿಗಾಯಿತು. ಅಲ್ಲಿ ಎಲ್ಲರೂ ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡಿದ್ದರು. ಎಲ್ಲರೂ ಸಂಗೀತ ಹಾಡುವವರೇ. ಇವನಿಗೆ ಏನು ಬೇಕಾದರೂ ದೊರೆಯುವಂತೆ ಇತ್ತು. ಅಷ್ಟರಲ್ಲೇ "ನಡೀ ಹೈದ ಮನೆಗೆ" ಎಂದು ಬೆನ್ನ ಮೇಲೆ ಯಾರೋ ಹೊಡೆದರು. ಸುಬ್ಬನು ಸಂಗೀತ ಪ್ರಪಂಚದಿಂದ ಕೆಳಕ್ಕೆ ಬಿದ್ದನು. ಮಗನನ್ನು ಹುಡುಕಿಕೊಂಡು ನಿಂಗನೇ ಅಲ್ಲಿಗೆ ಬಂದಿದ್ದನು. ಸುಬ್ಬನು ಬೆಚ್ಚಿಬಿದ್ದನು. ಆದರೆ ಬಾಯಿಯಿಂದ ಮಾತ್ರ "ಅದೆಷ್ಟು ಚಂದ ಅಪ್ಪಾ, ಆ ವಾಲಗ" ಎಂಬ ಉದ್ಗಾರ ಹೊರಟಿತು.

"ಮತ್ತೆ ಅವ್ರು ಪೇಟೆ ಪಟ್ನದಿಂದ ಬರೋವ್ರು, ಇದ್ಯೆ ಕಲ್ತವ್ರು."

"ಇನ್ನೊಮ್ಮೆ ಕೇಳ್ಬೇಕು."

"ನಮ್ಗ್ಯಾಕೆ ಅದೆಲ್ಲ ಹಾಡುಗೀಡು! ದೊಡ್ಮನ್ಸರ ಹಾಡು ಅದು. ಹೊತ್ತಾಯ್ತು ಮನೀಗೆ ಹೊರಡು."

ಅಪ್ಪನ ಮಾತನ್ನು ಮೀರಲಾರದೇ ಸುಬ್ಬನು ಹೊರಟನು. ಅವರಿಬ್ಬರೂ ಗುಡಿಸಲು ಕಡೆಗೆ ನಡೆದರು. ಆದರೆ ಸುಬ್ಬನ ಮನಸ್ಸು ಮಾತ್ರ ಆ ಬಯಲಿನಲ್ಲಿಯೇ ಉಳಿಯಿತು. ಅರ್ಧ ಮೈಲು ದೂರಕ್ಕೂ ಆ ವಾಲಗ ಕೇಳಿಸುತ್ತಿತ್ತು. ಆಲಿಸುತ್ತ, ಮೆಲುಕುತ್ತ ಅವನು ಭಾರವಾದ ಹೆಜ್ಜೆಗಳಿಂದ ಮುಂದೆ ನಡೆದನು.

"ಇದೇನಾಗಿರಬಹುದು, ಇದೇನಾಗಿರಬಹುದು" ಎಂದೇ ಸುಬ್ಬನ ಯೋಚನೆ. ಅವನಿಗೆ ರುಚಿಯಾದ ಊಟ ಮಾಡಿದಂತೆ, ಮೈಗೆ ಎಣ್ಣೆ ಸವರಿಕೊಂಡು ಬಿಸಿ ನೀರು ಸ್ನಾನಮಾಡುವ ಮುಂಚೆ ಸುಟ್ಟ ಹಲಸಿನ ಬೇಳೆಗಳನ್ನು ತಿನ್ನುವಾಗಿನ ಆನಂದದಂತೆ, ಆಟದಲ್ಲಿ ತಾನು ಗೆದ್ದಾಗ ಆಗುವ ಸಂತೋಷದಂತೆ – ಆ ವಾಲಗ ಕೇಳಿದಾಗ ಆನಂದವಾಗಿತ್ತು.

ಮರುದಿವಸದಿಂದ ಪ್ರತಿ ಸಾಯಂಕಾಲವೂ ಸುಬ್ಬನು ಆ ನಾಟ್ಕದ ಡೇರೆಯ ಸಮೀಪ ಹಾಜರು. ಒಂದು ರಾತ್ರಿ ನಿಂಗನು ಸುಬ್ಬನನ್ನು ಯಾವುದೋ ನಾಟಕಕ್ಕೆ ಕರೆದುಕೊಂಡು ಹೋದನು. ಅಲ್ಲಿಯ ಸಂಗೀತ, ವಾದ್ಯ ಎಲ್ಲ ಕೇಳಿ ಇದೇ ಒಂದು ಹೊಸ ಲೋಕ. ತಾನೂ ಅಲ್ಲಿಗೆ ಹೋಗಲೇಬೇಕು ಎಂದು ಸುಬ್ಬನಿಗೆ ಅನಿಸಿತು.

"ಅದೆಂಥ ಸಂಗೀತ ಅಪ್ಪಾ?"

"ಅದು ದೊಡ್ಮನ್ಸರ ಸಂಗೀತ, ನಂಗೊತ್ತಿಲ್ಲ."

"ನಾನೂ ಕಲೀಬೈದಾ?"

"ಸರಿಯಾಯ್ತು ಹೇಳು. ನಮ್ಗ್ಯಾಕೆ ಅದೆಲ್ಲ?"

ಸುಬ್ಬನ ಆಸೆ ಆಗ ಅಲ್ಲೇ ಮುರಿಯಿತು. ಆದರೆ ಮರುದಿವಸದಿಂದ ಅಪ್ಪನ ವಾಲಗ ಹಿಡಿದು, ತಾನು ಕೇಳಿ ನೆನಪಿನಲ್ಲಿ ಉಳಿದ ಕೆಲವು ರಾಗಗಳನ್ನು ಬಾರಿಸಲು ಪ್ರಯತ್ನಿಸುತ್ತಿದ್ದನು. ಆದರೆ ಆ ವಾಲಗ ಏನೇನೂ ಮಾಡಿದರೂ ರ್‍ಹೊಯ್ಹೋ ಎಂದೇ ಅರಚುತ್ತಿದ್ದಿತು. ಮನಸ್ಸಿನಲ್ಲಿ ರಾಗವಿದೆ, ಆದರೆ ವಾಲಗದಲ್ಲಿ ಮಾತ್ರ ಏನೋ ಒಂದು ರೋಗ. ಬೆಟ್ಟುಗಳನ್ನು ಹೇಗೆ ಹೇಗೆ ಆಡಿಸಿದರೂ ಗಾಳಿಯನ್ನು ಯಾವ ರೀತಿಯಲ್ಲಿ ಊದಿದರೂ ಅದು ಮಾತ್ರ ಅರಚುತ್ತಲೇ ಇತ್ತು. ಸುಬ್ಬನು ಹತಾಶನಾದನು. ಮರುದಿವಸ ಪುನಃ ತೆಗೆದುಕೊಂಡನು. ಇಲ್ಲ, ಮೂರನೆಯ ದಿವಸ, ಪುನಃ ಅಪಸ್ವರವೇ. ಹೀಗೆ ಪ್ರತಿ ದಿನವೂ ಪ್ರಯತ್ನಪಟ್ಟನು. ಪ್ರತಿ ಸಾಯಂಕಾಲವೂ ಡೇರೆಯ ಸಮೀಪ ಹೋಗಿ ರಾಗಗಳನ್ನು ಕೇಳಿ ಅವನ್ನೇ ಯೋಚಿಸುತ್ತ ಬರುತ್ತಿದ್ದನು. ಮತ್ತೆ ಬೆಳಗ್ಗಿನಿಂದ ಸಾಯಂಕಾಲದವರೆಗೆ ಬಿಡುವಿದ್ದಾಗಲೆಲ್ಲ ಆ ರಾಗದ ಅಭ್ಯಾಸ.

ಮಳೆಗಾಲ ಸಮೀಪವಾಯಿತು. ಮೋಡಗಳು ಕವಿದುವು. ಬಿಬ್ರಿಗಳು "ರೊಂಯೋ ರೊಂಯೋ" ಎಂದು ಅರಚಿ ಮಳೆಯನ್ನು ಕರೆದುವು. ಮದುವೆಗಳು ಮುಗಿದುವು. ನಾಟಕದ ಕಂಪೆನಿಯು ಡೇರೆ ಕಿತ್ತು ಬೇರೆಲ್ಲಿಗೋ ಸಾಗಿತು. ಅಲ್ಲಿ ಕೇಳಿದ ಮಧುರ ರಾಗಗಳು ಮಾತ್ರ ಸುಬ್ಬನ ಮನಸ್ಸಿನಲ್ಲಿ ಮಿಡಿಯುತ್ತಿದ್ದುವು. ಇನ್ನೆಂದು ಆ ಸಂಗೀತ ಕೇಳುವುದೋ? ಸುಬ್ಬನ ವಾಲಗ ಮಾತ್ರ ಏನೇನು ಮಾಡಿದರೂ ಅಳುವಂತೆ ಅರಚುತ್ತಿತ್ತು. ಅವನೇನು ಬಾರಿಸಿದರೂ ಮಗನಿಗೆ ಸಂಗೀತ ಬಂದೇ ಬಿಟ್ಟಿತು ಎಂದು ನಿಂಗನು ಸಂತೋಷಪಡುತ್ತಿದ್ದನು. ಬೇರೆಯವರಿಗೆ ತನ್ನ ಮಗನ ವಿಷಯ ಹೆಮ್ಮೆಯಿಂದ ಹೇಳುತ್ತಿದ್ದನು.

"ಮತ್ತೆ ನಿನ್ನ ಅಜ್ಜ, ಅಪ್ಪ ಇವರಿಂದ ಬಂದ ಇದ್ಯ ಇವ್ನಿಗೂ ಬರ್ದೇಹೋದೀತಾ?" ಎಂದನು ಇನ್ನೊಬ್ಬ.

ಮಳೆ ಸುರಿದು ನೆಲವನ್ನು ತಂಪು ಮಾಡಿತು. ಮೋಡಗಳು ದೂರ ಸರಿದು ಆಕಾಶವು ನೀಲವಾಯಿತು. ಚಳಿಯು ಏರುತ್ತಿತ್ತು. ಸುಬ್ರಹ್ಮಣ್ಯ ಷಷ್ಠಿಯು ಸಮೀಪವಾಗುತ್ತಿತ್ತು. ಈ ವರ್ಷ ಮಗನನ್ನೂ ಕರೆದುಕೊಂಡು ಅಲ್ಲಿಗೆ ಹೋಗಬೇಕೆಂದು ನಿಂಗನು ನಿಶ್ಚಯಿಸಿದನು. ಸುಬ್ಬನು ಸಂತೋಷದಿಂದ ಕುಣಿದನು. ತಂದೆತಾಯಿ ಜತೆಯಲ್ಲಿ ದೂರದ ಊರಿಗೆ ಹೋಗುವುದೆಂದರೆ ಯಾವ ಮಗುವಿಗೂ ಸಂತೋಷವೇ.

"ಅಲ್ಲಿ ನಾಟಕ ಬರ್ತದಾ, ಅಪ್ಪ?"

"ಬರ್ತದೆ."

"ಇಲ್ಲಿ ಬಾರ್ಸಿದ್ರಲ್ಲ – ಹಾಂಗೆ ವಾಲಗ?"

"ಅದೂ ಬರ್ತದೆ, ಇನ್ನೂ ಭಾರೀ ಲಾಯಕ್ಕು ವಾಲಗಾನೂ ಬರ್ತದೆ."

"ಇನ್ನೇಟು ದಿನ ಉಂಟು ಹೊರಡ್ಲಿಕ್ಕೆ?"

"ನಾಡಿದ್ದು ಬೇಸ್ತಾರಕ್ಕೆ (ಗುರುವಾರ ) ಇಪ್ಪತ್ತೊಂದರಲ್ಲಿ."

ಇನ್ನು ಮೂರನೆಯ ಗುರುವಾರದ ತನಕ ಕಾಯುವುದು ಸುಬ್ಬನಿಗೆ ಬಲು ಕಠಿಣದ ಭಾರವಾಯಿತು. ಯಾವಾಗ ಅಲ್ಲಿಗೆ ಹೋಗುವುದು, ಯಾವಾಗ ಆ ವಾಲಗವನ್ನು ಪುನಃ ಕೇಳುವುದು ಎಂದೇ ಅವನ ಆಲೋಚನೆಯಾಯಿತು. ಸಮಯ ನಿಧಾನವಾಗಿ ಹರಿಯಿತು. ಆ ಗುರುವಾರ ಬರಬೇಕಾದ ವಾರವೂ ಬಂದಿತು. ಆದರೆ ಹಠಾತ್ತಾಗಿ ನಿಂಗನಿಗೆ ಕಾಲಿಗೊಂದು ಮುಳ್ಳು ತಗಲಿ, ಅದು ನಂಜಾಗಿ ಕಾಲು ಬಾತುಕೊಂಡಿತು. ಅವನಿಗೆ ಗುಡಿಸಲೊಳಗೆ ನಡೆಯುವುದೂ ಸಾಧ್ಯವಾಗಲಿಲ್ಲ. ಇನ್ನು ಸುಬ್ರಹ್ಮಣ್ಯಕ್ಕೆ ಹೋಗುವುದು ಹೇಗೆ? ಗಾಡಿ ಮಾಡಿ ಹೋಗುವಷ್ಟು ಹಣವಿಲ್ಲ  ಅದು ದೊಡ್ಡ ಮನುಷ್ಯರ ಮರ್ಜಿ!

"ಅಯ್ಯೋ ಸುಬ್ಬಪ್ಪಾ, ಈ ವರ್ಷ ನನ್ಗೇವೆ ಬೇಡಾಂತ ನಿರಾಕರ್ಸಿದ್ಯಾ?" ಎಂದು ನಿಂಗನು ಕೊರಗಿದನು.

"ಹಾಂಗ್ಯಾಕೆ ನಿಂಗಣ್ಣಾ. ಇಲ್ಲೇ ನಡ್ಸು ಸೇವೇನ. ದ್ಯಾವ್ರಿಗೆ ಎಲ್ಲಿದ್ರೇನು? ಬರ್ವ ವರ್ಸ ಅಲ್ಗೇ ಹೋಗಿ ಇನ್ನು ಪಸಂದಗಿ ನಡ್ಸಿದ್ರಾಯ್ತು" ಎಂದನು ಇನ್ನೊಬ್ಬ.

"ನಾನು ಹೋಗೋದು ಬೇಡಾಂತ ದೇವ್ರು ಮಾಡಿದ್‌ಹಂಗೆ ತೋರ್ತದೆ. ಸುಬ್ಬನಾದ್ರೂ ಹೋಗ್ಲಿ. ಇಲ್ವಾದ್ರೆ ದೇವ್ರು ಕೋಪಿಸ್ಕೊಂಡ್ರೆ?"

ಅಪ್ಪನಿಗೆ ಕಾಲು ನೋವೆಂದಾದ ಕೂಡಲೇ ಸುಬ್ಬನಿಗೆ ಅಳು ಬರುವಂತಾಗಿತ್ತು. ಮನಸ್ಸು ಮುದುರಿತ್ತು. ಇನ್ನು ತಾನು ಹೋಗುವಂತಿಲ್ಲ. ಆ ವಾಲಗ ಕೇಳುವಂತಿಲ್ಲ ಎಂದು ದುಃಖ ಹೆಚ್ಚಿತ್ತು. ಒಂದು ಆಸೆಯೇ ಇಲ್ಲದಿರುವಾಗ, ಅದನ್ನು ಹುಟ್ಟಿಸಿ ಮಣ್ಣುಗೂಡಿಸುವುದೆಂದರೆ ತುಂಬ ವೇದನೆಯ ವಿಷಯ. ತಾನೊಬ್ಬನೇ ಬೇರೆಯವರ ಜತೆಯಲ್ಲಿ ಹೋಗುತ್ತೇನೆ ಎಂದು ಹೇಳುವ ಧೈರ್ಯ ಅವನಿಗಿರಲಿಲ್ಲ. ನಿಂಗನ ಈ ಉತ್ಸಾಹಜನಕ ಮಾತನ್ನು ಸುಬ್ಬನು ಮರೆಯಿಂದ ಆಲಿಸಿದನು. ಮುಂದಕ್ಕೆ ನೆಗೆದು ಹಾರಿ, "ಅಪ್ಪಾ ನಾನು ಹೋಗುತ್ತೇನೆ. ದೇವ್ರ ಸೇವೆ ಮಾಡ್ತೇನೆ" ಎಂದು ಒಂದೇ ಸಲ ಕೂಗಿ ಹೇಳಿದನು.

ಗುರುವಾರ ನಸುಕು ಹರಿಯಿತು.

"ಹೋಗಿ ಬಾ ಸುಬ್ಬ. ದೇವ್ರ ಸೇವೆ ಮಾಡು. ಒಳ್ಳೇದ್ಮಾಡ್ತಾನೆ. ದೊಡ್ಡಣ್ಣನ ಜತೆಯಲ್ಲಿಯೇ ಇರು. ಜನ ಭಾಳ ತುಂಬ, ಆನೆಯುಂಟು, ಕಾಡುಂಟು. ನೋಡ್ಕೊ ದೊಡ್ಡಣ್ಣ ಇವನ್ನ, ನಿನ್ನ ಜತೇಲೆ ಇರಲಿ ಹುಸಾರು" ಎಂದನು ನೋವಿನಿಂದ ನರಳುತ್ತಿದ್ದ ನಿಂಗ.

"ಹೊಳೇಗೆ ಇಳೀಬೇಡ ಸುಬ್ಬ. ನೋಡ್ಕೋ ದೊಡ್ಡಣ್ಣ" ಎಂದಳು ಪುಟ್ಟಿ.

ಸುಬ್ಬ, ದೊಡ್ಡಣ್ಣ, ಇತರ ಹೊಲೆಯರು ಎಲ್ಲರೂ ಸುಬ್ರಹ್ಮಣ್ಯಕ್ಕೆ ಹೊರಟರು. ದಾರಿಯಿಡೀ ಸುಬ್ಬನಿಗೆ ವಾಲಗದ ಕನಸು. ಅದನ್ನು ಪುನಃ ಕೇಳಲಿದೆಯೆಂದು ಸಂತೋಷ. ಬೆಟ್ಟಗಳ ತಪ್ಪಲಿಗಾಗಿ, ಗದ್ದೆಗಳ ಅಂಚಿಗಾಗಿ, ರಬ್ಬರು ತೋಟಗಳ ನಡುವಿಗಾಗಿ ನಡೆದರು. ದಾರಿಯಲ್ಲಿ ಅಡ್ಡ ಸಿಗುವ ಸಣ್ಣ ತೊರೆಗಳಲ್ಲಿ ದಾಹವನ್ನು ನೀಗಿಸಿಕೊಂಡು ಮುಂದುವರಿದರು. ಮಧ್ಯಾಹ್ನವಾಗುವಾಗ ಯಾವುದೋ ಹೊಳೆಯ ಕರೆಯಲ್ಲಿ ರುಚಿಕರವಾದ ಬುತ್ತಿಯೂಟ. ದೂರ ನಡೆಯುವಾಗ ಹಾದಿ ಬದಿಯ ಮರದ ನೆರಳಿನಲ್ಲಿ ಹೊಳೆಯ ತಡಿಯಲ್ಲಿ ಬುತ್ತಿಯೂಟ ಮಾಡುವಾಗ ದೊರೆಯುವ ತೃಪ್ತಿ, ಆನಂದ ಮೃಷ್ಟಾನ್ನ ಭೋಜನದಲ್ಲಿಯೂ ಇಲ್ಲ. ಹಸಿವು, ವಾತಾವರಣಗಳೇ ರುಚಿಕರವಾದ ಮೇಲೋಗರಗಳು. ಕತ್ತಲೆ ಸಂಪೂರ್ಣ ಕವಿದ ಮೇಲೆ ಅವರು ಸುಬ್ರಹ್ಮಣ್ಯಕ್ಕೆ ತಲಪಿದರು. ಇದುವರೆಗೂ ಸುಬ್ಬನು ಅಷ್ಟು ಜನಜಂಗುಳಿಯನ್ನು ಎಲ್ಲಿಯೂ ನೋಡಿರಲಿಲ್ಲ. ಎಲ್ಲಿ ನೋಡಿದರೂ ಜನ, ಗಲಭೆ, ನೂಕುನುಗ್ಗಲು. ಹಿಂದಿನ ದಿವಸವೇ ಮಳೆ ಸುರಿದು ನೆಲವೆಲ್ಲ ಕೆಸರು, ಮಣ್ಣು, ನೀರಿನಿಂದ ತುಂಬಿತ್ತು. ಆಗಲೇ ಸುಬ್ಬನ ಕಿವಿಗಳನ್ನೂ ಮನವನ್ನೂ ಸೆಳೆಯಿತು, ಸ್ವಾಗತಿಸಿತು – ದೂರದಿಂದ ವಾಲಗದ ಅಮೃತ ಸ್ವರ. ಹಸಿದವನಿಗೆ ಮೃಷ್ಟಾನ್ನ ದೊರೆಯಿತು. ಬಿಸಿಲಿನಿಂದ ಒಣಗಿ ಗಾರಾದ ಭೂಮಿಗೆ ಮಳೆ ಸುರಿಯಿತು. ಆದರೆ ಆ ಇಂಚರ ಜನಿಸುವ ತಾಣಕ್ಕೆ ಅಷ್ಟು ಜನರ ನಡುವೆ ಹಾದು ಹೋಗುವುದು ಹೇಗೆ?

ಬುತ್ತಿಯೂಟವನ್ನು ಮುಗಿಸಿ ರಾತ್ರಿಯ ಸಣ್ಣ ತೇರನ್ನು ನೋಡಲು ಹೊರಟರು. ದೇವಸ್ಥಾನದ ಮುಂದೆ ಒಂದು ಇರುವೆ ಕೂಡ ಹೋಗುವಷ್ಟು ಸ್ಥಳವಿರಲಿಲ್ಲ. ಅಷ್ಟು ಜನರು, ಬದಿಯಲ್ಲಿದ್ದ ಕಟ್ಟಡಗಳಲ್ಲಿ, ಅಂಗಡಿಗಳಲ್ಲಿ ಎಲ್ಲೆಲ್ಲಿಯೂ ಜನರೇ ಜನರು. ದೊಡ್ಡ ರಥವೊಂದು ದೇವಸ್ಥಾನದ ಎದುರು ನಿಂತಿದೆ. ಅಲ್ಲೇ ಬದಿಯಲ್ಲಿ ಚಿಕ್ಕದೊಂದು ಆನೆ ಇದೆ. ಸಿಂಗರಿಸಿದ ಆನೆಯು ಜನರು ಎಸೆಯುವ ತೆಂಗಿನಕಾಯಿ, ಕೊಬ್ಬರಿಯನ್ನು ಜಗಿಯುತ್ತ ಸೊಂಡಿಲಾಡಿಸುತ್ತ ನಿಂತಿದೆ. ವಾಲಗದವರ ಒಂದು ಪಟಾಲಮ್ಮೇ ಅಲ್ಲಿ ನಿಂತು ಹಾಡುಗಳನ್ನು ಬಾರಿಸುತ್ತಿದೆ.

ಸುಬ್ಬ, ದೊಡ್ಡಣ್ಣ ಇವರೆಲ್ಲ ಹೊಲೆಯರ ಗುಂಪಿನಲ್ಲಿ ದೂರದಲ್ಲಿ ನಿಂತಿದ್ದರು. ಹತ್ತಿರ ಹೋಗಲು ಅವರಿಗೆ ಪ್ರವೇಶವಿರಲಿಲ್ಲ. ವಾಲಗದ ಸುಸ್ವರ ಕೇಳುತ್ತ, ಸುಬ್ಬನಿಗೆ ಈ ಜನರ ಪರಿವೆಯೇ ಮರೆತುಹೋಯಿತು. ಅದೇನು ಮಧುರ, ಅದೆಂತಹ ಭಾವ. ಹಿಂದೆ ನಾಟಕ ಕಂಪೆನಿಯ ವಾಲಗದವರು ಬಾರಿಸಿದ ಒಂದೇ ಒಂದು ಹಾಡೂ ಇಷ್ಟು ಇಂಪು ಇರಲಿಲ್ಲ. ಈ ವಾಲಗದವನು ಯಾರೆಂದು ತಿಳಿಯಲು ಕತ್ತನ್ನು ಎಷ್ಟು ಉದ್ದ ಮಾಡಿನೋಡಿದರೂ ಸುಬ್ಬನಿಗೆ ಕಾಣಿಸಲಿಲ್ಲ. ಇಬ್ಬರ ಭೌತಿಕ ಅಂತರ ಹಿರಿದಾಗಿತ್ತು. ಅದೂ ರಾತ್ರಿಯ ದೊಂದಿಯ ಬೆಳಕಿನಲ್ಲಿ ಅಷ್ಟು ದೂರದಿಂದ ವಾಲಗದವನು ಯಾರೆಂದು ಗುರುತಿಸುವುದು ಹೇಗೆ? ಮುಂದೆ ನೂಕಿಕೊಂಡು ಹೋಗಬೇಕೆಂದು ಮನಸ್ಸಾಯಿತು. ಆದರೆ ದೊಡ್ಡಣ್ಣನು ಬಲವಾಗಿ ಕೈ ಹಿಡಿದುಕೊಂಡಿದ್ದನು. "ಅಲ್ಲಿ ನೋಡು ಆ ಬೊಂಬೆ, ಅಲ್ಲಿ ನೋಡು ರಥದ ಚಂದ" ಎಂದು ಮುಂತಾಗಿ ವಾಲಗದ ಹೊರತಾಗಿ ಎಲ್ಲವನ್ನೂ ತೋರಿಸುತ್ತಿದ್ದನು. ವಾಲಗ ಹೇಗಾದ್ರೂ ಇರಬೇಕಾದುದೇ ಅದರಲ್ಲೇನು ವಿಶೇಷ ಎಂದು ಅವನ ಅಭಿಪ್ರಾಯವಾಗಿರಬಹುದು. ದೊಡ್ಡಣ್ಣನ ಮಾತಿಗೆ ಯಾಂತ್ರಿಕವಾಗಿ ಹೂಗುಟ್ಟುತ್ತಿದ್ದ ಸುಬ್ಬ ವಾಲಗದ ಹೊರತು ಬೇರೆ ಯಾವುದರಲ್ಲೂ ಲಕ್ಷ್ಯವಿಡಲಿಲ್ಲ. ತೇರು ಸಾಗಿತ್ತು. ವಾಲಗ ಮೇಳದವರು ಬೇರೆ ಬೇರೆ

ಹಾಡುಗಳನ್ನು ಬಾರಿಸುತ್ತ ಹೊರಟರು. ಅವು ಯಾವ ರಾಗ, ಹಾಡುಗಳೆಂದು ಸುಬ್ಬನಿಗೆ ತಿಳಿಯುತ್ತಿರಲಿಲ್ಲ. ಆದರೆ ಅವು ಅವನ ಹೃದಯವೀಣೆಯನ್ನು ಮಿಡಿಯುತ್ತಿದ್ದುವು. ರಥ ಹೊರಟಂತೆ ಜನರ ನೂಕು ನುಗ್ಗಲು ಅಸಾಧ್ಯವಾಯಿತು. ಬದಿಯಲ್ಲಿದ್ದವರು ಚರಂಡಿಗೆ ಇಳಿದರು ಅಥವಾ ಕರೆಗೋಡೆಗೆ ಅಮರಿ ನಿಂತರು. ರಥೋತ್ಸವ, ಪೂಜೆ ಮುಂತಾದವು ಮಧ್ಯರಾತ್ರಿಯ ತನಕವೂ ಸಾಗಿದುವು.

ಹೊಲೆಯರೆಲ್ಲರೂ ಬಡವರಿಗೆ, ಭಿಕ್ಷುಕರಿಗೆ ತಂಗಲು ತಯಾರಿಸಿದ್ದ ತಟ್ಟಿಯ ಛಾವಣಿಗಳ ಕಡೆಗೆ ಮಲಗಲು ಹೋದರು. ಸುಬ್ಬನ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ಆ ವಾಲಗದ ಸ್ವರ–ಜೇನು ಹೊಳೆ ಹರಿಯುವಂತೆ ಬರುವ ಆ ಇಂಪು ಅವನ ಮನಸ್ಸನ್ನು ಸೇಚನ ಮಾಡಿತ್ತು. ಅದು ಮತ್ತೆ ಮತ್ತೆ ಪ್ರತಿಧ್ವನಿಸುತ್ತಿತ್ತು. ನಿದ್ರೆ ಮಾಡಿದರೂ ಅದೇ ವಾಲಗದ ಸ್ವರ, ಅದೇ ರಾಗಾಲಾಪನೆ, ಅದೇ ಸ್ವರ್ಗೀಯ ಸಂಗೀತ, ಅದೇ ಗಾನಾಮೃತಪಾನ!

ಮರುದಿವಸವೇ ಸುಬ್ರಹ್ಮಣ್ಯ ಷಷ್ಠಿ – ಗರುಡ ಬರುವುದು, ಮುಖ್ಯ ರಥೋತ್ಸವ, ಭೋಜನ ಮುಂತಾದವುಗಳು. ಬೆಳಗ್ಗೆ ನಾಲ್ಕು ಗಂಟೆಗೆ ಪುನಃ ವಾಲಗ ತಮಟೆಗಳು ಪ್ರಾರಂಭವಾದುವು. ಸಂಗೀತ ಸುಧಾವಾಹಿನಿ ಪ್ರವಹಿಸತೊಡಗಿತು. ಶಾಂತ ವಾತಾವರಣ. ಕುಳಿರ್ಗಾಳಿಯ ಮೃದುವಾದ ತೀಟ, ಮಂಗಳಕರ ಗೀತ – ಭೂಪಾಳ, ಅಮೃತವರ್ಷಿಣಿ, ವಸಂತ, ಮೋಹನ, ಧೇನುಕ ಈ ರಾಗಗಳಲ್ಲಿ ಆಲಾಪನೆ, ರಾಗಮಾಲಿಕೆ. ದಣಿದು ಮಲಗಿದ್ದ ಸುಬ್ಬನನ್ನು "ಏಳಪ್ಪಾ ಮಗು, ಇನ್ನೂ ನಿದ್ರೆ ಮಾಡುತ್ತೀಯಲ್ಲ!" ಎಂದು ಮೃದುವಾಗಿ ಯಾರೋ ನೇವರಿಸಿ ಮೈಸವರಿ ಎಬ್ಬಿಸಿದಂತೆ ಆಯಿತು. ಸುಬ್ಬನು ಫಕ್ಕನೆ ಎದ್ದು ಕುಳಿತನು. ಉಳಿದವರು ಚಳಿಗೆ ಮದುರಿ ಮಲಗಿ ಗೊರಕೆ ಹೊಡೆಯುತ್ತಿದ್ದರು. ಎಚ್ಚರದಲ್ಲಿರುವೆನೋ ಸ್ವಪ್ನದಲ್ಲಿರುವೆನೋ ಎಲ್ಲಿಂದ ಈ ಸಂಗೀತ ಕೇಳಿದ ಹಾಗಾಗುತ್ತದೆ ಎಂದು ಅವನಿಗೆ ಭ್ರಮೆಯಾಯಿತು. ಅದೇ ವಾಲಗದ ಇನಿದನಿಯ ಹಾಲಿನ ಹೊಳೆ ಹರಿದು ಬರುತ್ತಿದೆ. ಸುಬ್ಬನಿಗೆ ರೋಮಾಂಚನವಾಯಿತು. ಕೂಡಲೇ ಗುಡಿಸಲಿನಿಂದ ಹೊರಬಿದ್ದು ದೇವಾಲಯದ ಕಡೆಗೆ ಓಡತೊಡಗಿದನು. ನದೀಮೂಲವನ್ನು ತಲಪಲು ಹೆಚ್ಚು ಹೊತ್ತು ಬೇಕಾಗಲಿಲ್ಲ. ದೇವಾಲಯದ ಮುಂದೆ, ಹಣತೆಗಳ ಬೆಳಕಿನಲ್ಲಿ, ಧೂಪ ಗಂಧ ಪುಷ್ಪಗಳ ಪರಿಮಳದಲ್ಲಿ ವಾಲಗದವರು ಸಾಲಾಗಿ ಕುಳಿತು ದೇವರಿಗೆ ಉದಯ ಗೀತೆಗಳನ್ನು ಬಾರಿಸುತ್ತಿದ್ದರು. ಸುಬ್ಬನು ಅದೇ ಪ್ರಥಮತಃ ಅವರನ್ನು ಹತ್ತಿರದಿಂದ ನೋಡಿದುದು. ಅವರು ಯಾವ ರಾಗವನ್ನು ಬಾರಿಸುತ್ತಿದ್ದರು ಎಂಬುದು ಅವನಿಗೆ ತಿಳಿಯಲಿಲ್ಲ. ಆದರೆ ಅವೆಲ್ಲವೂ ಚಿರಪರಿಚಿತವಾಗಿದ್ದಂತೆ ಇದ್ದುವು. ಪ್ರತಿಯೊಂದೂ ಇಂಪುಗಡಲನ್ನು ಕಡೆದು ತೆಗೆದ ಬೆಣ್ಣೆಯಂತೆ ಮೃದು ಮಧುರವಾಗಿ ಇತ್ತು. ಸುಬ್ಬನು ತನ್ನನ್ನು ತಾನು ಮರೆತು ಈ ರಾಗ ಸಮುದ್ರದಲ್ಲಿ ಮುಳುಗಿದನು, ತಲ್ಲೀನನಾದನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ವಾಲಗದವರು ಎದ್ದರು. ಉದಯರಾಗ ಮುಗಿಯುವಾಗ ಪೂರ್ವದಿಗಂತ ರಕ್ತರಾಗ ತಾಳುತ್ತಿದ್ದಿತು. ಜನರು ಹೆಚ್ಚು ಹೆಚ್ಚು ಓಡಾಡಲು ತೊಡಗಿದರು. ನೀಲಾಕಾಶದಲ್ಲಿ ಕಾಗೆಗಳು ಕರ್ಕಶವಾಗಿ ಕೂಗುತ್ತ ಹಿಂಡುಹಿಂಡಾಗಿ ಹಾರಲು ಪ್ರಾರಂಭಿಸುದುವು. ತಾಯಿಯ ಮಡಿಲಿನಲ್ಲಿ ಸುಖವಾಗಿ ಮಲಗಿದಂತಿದ್ದ ಸುಬ್ಬನು ಎಚ್ಚರಗೊಂಡು ಎದ್ದನು. ಶಾಂತ ವಾತಾವರಣದ ಈ ಮಂಗಳ ಗೀತ ಅವನ ಮೇಲೆ ಅಪೂರ್ವ ಪರಿಣಾಮ ಮಾಡಿತ್ತು. ಸುಪ್ತ ಚೇತನವೊಂದು ಮನಸ್ಸಿನ ಅಂತರಾಳದಿಂದ ಉದಯಿಸಿ "ಬಿಡಬೇಡ ಮುಂದೆ ಹೋಗು" ಎನ್ನುವಂತೆ ಅವನನ್ನು ಪ್ರೇರಿಸುತ್ತಿತ್ತು. ಧಮನಿಗಳಲ್ಲಿ ರಕ್ತವು ನವಚೈತನ್ಯದಿಂದ ಪ್ರವಹಿಸುತ್ತಿತ್ತು. ಅಷ್ಟರಲ್ಲಿಯೇ ದೊಡ್ಡಣ್ಣನ ನೆನಪಾಯಿತು. ಅವನಿಗೆ ತಾನು ಅಲ್ಲಿ ಇಲ್ಲದಿರುವುದು ತಿಳಿದರೆ ಎಲ್ಲಿ ಹುಡುಕುತ್ತಾನೋ, ಏನು ತಿಳಿಯುತ್ತಾನೋ ಎಂದು ಸುಬ್ಬನು ಛಾವಣಿಯ ಕಡೆಗೆ ಓಡಿದನು.

ಗುಡಿಸಲಿನ ಹತ್ತಿರದಲ್ಲಿಯೇ ಗಾಬರಿಯಿಂದ ಬರುತ್ತಿದ್ದ ದೊಡ್ಡಣ್ಣನು ಎದುರಾದನು. "ಎಲ್ಲಿಗೆ ಹೋಗಿದ್ದೆ?"

"ಇಲ್ಲೆ ಹೊಳೆ ಕರೆಗೆ."

"ಇನ್ಮುಂದೆ ಒಬ್ನೆ ಹಾಗೆಲ್ಲ ಹೋಗ್ಬೇಡ. ಅಲ್ಲಿ ಮೊಸಳೆ ಉಂಟು."

ಸುಬ್ಬನ ಮನಸ್ಸು ವಾಲಗದವನ ಮೇಲೆ – ಕಪ್ಪಾದ ದೇಹ, ಪುಷ್ಟಿಯಾಗಿ ಬೆಳೆದಿದೆ. ಬಿಳಿಯ ಪಂಚೆ ಉಟ್ಟು ಭರ್ಜರಿ ಶಾಲು ಹೊದ್ದಿದ್ದಾನೆ. ತಲೆಯಲ್ಲಿ ಬಿಗಿದು ಕಟ್ಟಿದ ನರೆತ ಜುಟ್ಟು. ಹಣೆಯ ಮೇಲೆ ಎದ್ದು ತೋರುವ ವಿಭೂತಿಯ ಮೂರು ಪಟ್ಟಿಗಳು. ಕೈಯಲ್ಲಿ ಹೊಳೆಯುವ ಉಂಗುರಗಳು. ಬೆಳ್ಳಿಯ ಕಟ್ಟು ಹಾಕಿದ ಕರಿಬಣ್ಣದ ವಾಲಗ. ಶ್ರುತಿ ಉರುಗುವವನು ಒಬ್ಬ ಹುಡುಗ. ಆ ಶ್ರುತಿಯಲ್ಲಿ ಒಂದು ಹೊಸ ಕ್ರಮವಿದ್ದಿತು. ವಾಲಗದ ಸ್ವರದೊಡನೆ ಅದು ಸಮಮಿಶ್ರವಾಗಿ, ಮೃದು ಮಧುರವಾಗಿ ಬೆರೆಯುತ್ತಿತ್ತು. ತಮಟೆ ಹೊಡೆಯುವವನು ಬಲಗೈ ಬೆರಳುಗಳಿಗೆ ಬಿಳಿಯ ಟೊಪ್ಪಿಗಳನ್ನು ಹಾಕಿಕೊಂಡಿದ್ದು ತಮಟೆಯಲ್ಲಿಯೇ ಹಾಡನ್ನು ಬಾರಿಸುತ್ತಿದ್ದಾನೋ ಎಂಬಂತೆ ನುಡಿಸುತ್ತಿದ್ದನು. ಮಳೆಗಾಲದಲ್ಲಿ ಮನೆಯ ಸೂರಿನ ದಂಬೆಯಿಂದ ಒಂದೇ ಸಮನೆ ನೀರು ಸುರಿಯುವಂತೆ ಇರುವ ಡಂಗಡಕ ತಾಳವೇ ಅಲ್ಲಿ ಇರಲಿಲ್ಲ. "ಬಿಡಬೇಡ ಮುಂದೆ ಹೋಗು" ಎಂದು ಮನಸ್ಸು ಹೇಳುತ್ತಿತ್ತು. ಎಲ್ಲಿಗೆ ಹೋಗುವುದು, ಹೇಗೆ ಹೋಗುವುದು?

ಜಾತ್ರೆಯ ದಿವಸ ಜನರು ಇನ್ನೂ ಕಿಕ್ಕಿರಿದು ಸೇರಿದರು. ರಥೋತ್ಸವವನ್ನು ದೂರದಿಂದ ನಿಂತು ನೋಡುವುದೂ ಹೊಲೆಯರಿಗೆ ಸಾಧ್ಯವಾಗಲಿಲ್ಲ – ಅಷ್ಟು ಮಂದೆ 'ಉತ್ತಮ ಜಾತಿ'ಯ ಭಕ್ತರು ಸೇರಿದ್ದರು. ಒಂದು ಕಡೆ ಹೊಲೆಯರ ಸೇವೆ, ವಾದ್ಯರೂಪದಲ್ಲಿ 'ರೊಂಯೋ ಡಂಗಡಕ' ಎಂದು ಆಗುತ್ತಿತ್ತು. ದೇವಾಲಯದ ಮುಂದೆ ಈ ವಾಲಗದವರು ಎಡೆಬಿಡದೆ ಹಾಡುಗಳನ್ನು ಬಾರಿಸುತ್ತಿದ್ದರು. ದೇವಾಲಯದ ಒಳಕ್ಕೆ ಒಂದು ಕಡೆಯಿಂದ ಜನರು ಪ್ರವಾಹದಂತೆ ನುಗ್ಗುತ್ತಿದ್ದರು. ಇನ್ನೊಂದು ಕಡೆಯಿಂದ ಹಾಗೆಯೇ ಹಿಂತಿರುಗುತ್ತಿದ್ದರು. ಶಂಖ ಜಾಗಟೆಗಳ ಸ್ವರ, ಜನರ ಬೊಬ್ಬೆ ದೂರಕ್ಕೆ ಅದೊಂದು ಹುಣ್ಣಿಮೆ ರಾತ್ರಿಯ ಸಮುದ್ರಘೋಷ. ಆ ಹರಟೆಯ ಮಧ್ಯೆ ಸುಬ್ಬನು ವಾಲಗದ ಸ್ವರವನ್ನೇ ಆಲಿಸುತ್ತಿದ್ದನು. ಹೊತ್ತು ಏರಿತು. ಗರುಡ ನೆತ್ತಿಯ ಮೇಲೆ ಬಂದು ಮೂರು ಪ್ರದಕ್ಷಿಣೆ ಮಾಡಿ, ಕುಮಾರಪರ್ವತದೆಡೆಗೆ ಹಾರಿತು. ದೊಡ್ಡ ರಥ ಹೊರಟಿತು, ಜನರು ರಥವನ್ನು ಎಳೆದರು. ಆನೆಯು ಹಿಂದಿನಿಂದ ನೂಕಿತು. ವಾಲಗದವರು ಹಾಡು ಬಾರಿಸುತ್ತ ಮುಂದೆ ನಡೆದರು. ರಥೋತ್ಸವ ಮುಗಿಯಿತು. ಮಧ್ಯಾಹ್ನದ ಮಹಾಭೋಜನವನ್ನುಂಡು ಭಕ್ತರು ತೇಗಿದರು. ಶೂದ್ರರಿಗೆ ಹೊರಗೆ ಅನ್ನ, ಮೇಲೋಗರ, ಪಾಯಸ, ಭಕ್ಷ್ಯ – ಇವೆಲ್ಲವನ್ನೂ ಹಂಚಿದರು. ಸುಬ್ಬ, ದೊಡ್ಡಣ್ಣ ಇವರೆಲ್ಲ ಹೊಟ್ಟೆ ತುಂಬ ದೇವರ ಪ್ರಸಾದ ಉಂಡು ತೃಪ್ತರಾದರು. ಆದರೆ ಸುಬ್ಬನ ಮನಸ್ಸು ಮಾತ್ರ "ಬಿಡಬೇಡ, ಮುಂದೆ ಹೋಗು, ಅದನ್ನು

ಕಲಿ" ಎಂದು ಎಡೆಬಿಡದೆ ಹೇಳತೊಡಗಿತು. ಆ ರಾತ್ರಿಯ ಪೂಜೆಗೂ ವಾಲಗವಿತ್ತು. ಆದರೆ ಮುಖ್ಯೋತ್ಸವ ಮುಗಿದು ಹೋಗಿತ್ತು. ಮರುದಿನ ಕುಮಾರಧಾರಾ ನದಿಗೆ ದೇವರನ್ನು ಸ್ನಾನ ಮಾಡಿಸಲು ವಿಜೃಂಭಣೆಯಿಂದ ಕೊಂಡೊಯ್ದರು. ವಾಲಗಸಹಿತ ಮೆರವಣಿಗೆಯಾಯಿತು. ಈ ಉತ್ಸವವನ್ನು ದೊಡ್ಡಣ್ಣ, ಸುಬ್ಬ, ಮುಂತಾದ ಹೊಲೆಯರೆಲ್ಲರೂ ನೋಡಿದರು. ದೇವರಿಗಿಂತ ಬಹಳ ದೂರದಲ್ಲಿ ಬದಿಯಲ್ಲಿ ನಡೆದು ನದೀ ತೀರವನ್ನು ಸೇರಿದರು. ಮತ್ತೆ ಆ ದಿವಸದ ಕಾರ್ಯಕ್ರಮ ಮುಗಿಯಿತು. ಸುಬ್ಬನು ಮಾತ್ರ ಆನಂದ ಪರವಶತೆಯಿಂದ ಮುಂದೇನು ಮಾಡುವುದು ಎಂದು ತಿಳಿಯದೇ ಮನಸ್ಸಿನ ಗೊಂದಲ – ಇವುಗಳಿಂದೆಲ್ಲ ಕೂಡಿ ದೊಡ್ಡಣ್ಣನೊಡನೆ ಯಾಂತ್ರಿಕವಾಗಿ ನಡೆದನು. "ಬಿಡಬೇಡ, ಮುಂದೆ ಹೋಗು" ಎಂದು ಅಂತರ್ವಾಣಿ ನುಡಿಯುತ್ತಲೇ ಇತ್ತು.

ಅದರ ಮರುದಿವಸ ಬೆಳಿಗ್ಗೆ ಎಲ್ಲರೂ ಮಡಿಕೇರಿಗೆ ಹಿಂತಿರುಗುವುದು ಎಂದು ನಿಶ್ಚಯಿಸಿದರು. ಆ ರಾತ್ರಿ ಅಲ್ಲೊಂದು ಬಯಲಾಟವನ್ನು ನೋಡಲು ಹೊಲೆಯರು ಹೊರಟರು. ಆದರೆ ಸಾಯಂಕಾಲ ಪುನಃ ವಾಲಗದವರು ಎಲ್ಲಿಯಾದರೂ ಹಾಡು ಬಾರಿಸಿದರೆ, ಅದನ್ನು ಕೇಳಲೇಬೇಕು. ಇನ್ನು ಯಾವಾಗ ಇದನ್ನು ಪುನಃ ಕೇಳುವುದೋ ಏನೋ ಎಂದು ಸುಬ್ಬನು ಯೋಚಿಸಿ "ನಾನು ಬರುವುದಿಲ್ಲ ಇಲ್ಲಿಯೇ ಇರುತ್ತೇನೆ" ಎಂದನು. ದೊಡ್ಡಣ್ಣನು ಎಷ್ಟು ಒತ್ತಾಯಿಸಿದರೂ ಸುಬ್ಬನು ಒಪ್ಪಲೇ ಇಲ್ಲ. ನಿಜ ಕಾರಣವನ್ನು ಹೇಳಲೂ ಇಲ್ಲ. "ಹಾಗಾದರೆ ಇಲ್ಲಿಯೇ ಇರು. ನಾನು ಬೇಗನೆ ಬರ್ತೇನೆ, ಎಲ್ಲಿಗೂ ಹೋಗ್ಬೇಡ" ಎಂದು ದೊಡ್ಡಣ್ಣನು ಬಯಲಾಟಕ್ಕೆ ಹೋದನು.

"ಇಲ್ಲಿ ನಿಲ್ಲಬೇಡ, ಮುಂದೆ ಹೋಗು, ವಾಲಗವನ್ನು ಕಲಿ" ಎಂದು ಒಂದೇ ಸಮನೆ ಮನಸ್ಸು ಹೇಳುತ್ತಿತ್ತು. ಏನು ಮಾಡುವುದೆಂದು ತಿಳಿಯದೇ ಸುಬ್ಬನು ಅಲ್ಲಿಯೇ ಕುಳಿತುಕೊಂಡ. ಹಿಂದಿನ ದಿನದ ರಾಗಗಳನ್ನು ನೆನಪು ಮಾಡಿಕೊಳ್ಳುತ್ತಿದ್ದನು. ಅವನ ಊಹೆ ಸರಿಯಾಯಿತು. ಆಗಲೇ ದೇವಸ್ಥಾನದ ಬದಿಯಿಂದ ಪುನಃ ವಾಲಗ ಕೇಳಿಸಿತು, ತಮಟೆಯ ನಿನಾದ ಕರ್ಣ ಮೃದಂಗವನ್ನು ಅಲುಗಿಸಿತು. ಸುಬ್ಬನ ಮೈಯಲ್ಲಿ ವಿದ್ಯುತ್ಸಂಚಾರವಾದ ಹಾಗಾಯಿತು. ಕೂಡಲೇ ಆ ಕಡೆಗೆ ನೆಗೆದು ಓಡಿದನು. ಜನಜಂಗುಳಿ ಹೆಚ್ಚು ಇರಲಿಲ್ಲ. ಬಹುಮಂದಿ ಆಗಲೇ ತಮ್ಮ ತಮ್ಮ ಮನೆಗಳಿಗೆ ಹೋಗಿದ್ದರು. ಉಳಿದವರು ಹೊರಡುತ್ತಿದ್ದರು. ಸುಬ್ಬನು ದೇವಾಲಯದ ಹತ್ತಿರ ತಲಪುವಾಗಲೇ ವಾಲಗದವರು ವಾದ್ಯ ನಿಲ್ಲಿಸಿ ಹೊರಡುತ್ತಿದ್ದರು. ಸುಬ್ಬನು ಅವರ ಹತ್ತಿರ ಹೋಗಿ ನಿಂತನು. ಅಲ್ಲಿ ಬೇರೆ ಕೆಲವರು ಹುಡುಗರು, ಅವರು ತಮ್ಮ ವಾದ್ಯಗಳನ್ನು ಕಟ್ಟುವುದನ್ನು ನೋಡುತ್ತ ನಿಂತಿದ್ದರು. ಇನ್ನೆರಡು ನಿಮಿಷಗಳಲ್ಲಿಯೇ ಅವರು ಅಲ್ಲಿಂದ ಹೊರಟು ನಡೆದರು. ಆ ಹುಡುಗರು ಬೇರೆ ಬೇರೆ ಕಡೆಗೆ ಹೋದರು. ಸುಬ್ಬನು ಮಾತ್ರ ಮಂತ್ರಮುಗ್ಧ ಸರ್ಪದಂತೆ ವಾಲಗದವರನ್ನು ಅನುಸರಿಸಿದನು.

ಆ ವಾದ್ಯಕಾರರು ತಮ್ಮ ಕೆಲಸ ಮುಗಿಸಿ ಊರಿನ ಕಡೆಗೆ ಹೊರಟು ನಡೆಯುತ್ತಿದ್ದರು. ಅವರ ಹಿಂದೆಯೇ ಬೇರೇನನ್ನೂ ಯೋಚಿಸದೇ ಯಾಂತ್ರಿಕವಾಗಿ ಸುಬ್ಬನೂ ನಡೆಯುತ್ತಿದ್ದನು. ಅವರಲ್ಲಿ ಯಾರೂ ಇವನನ್ನು ವಿಶೇಷವಾಗಿ ಗಮನಿಸಲಿಲ್ಲ. ನೋಡಿದರೂ ಅಲ್ಲಿ ಯಾವುದೋ ಹಳ್ಳಿಗೆ ಹೋಗುವ ಹೈದನಿರಬಹುದೆಂದು ಅವನನ್ನು ಮಾತಾಡಿಸಲಿಲ್ಲ. ಸಾಯಂಕಾಲ ಮುಗಿದು ಬೇಗನೆ ಕತ್ತಲಾಯಿತು. ಅವರು ಅಲ್ಲಿ ಒಂದು ಹೊಳೆಕರೆಯಲ್ಲಿ ಅಡುಗೆ ಮಾಡಲು ನಿಂತರು. ಸುಬ್ಬನೂ ಅಲ್ಲಿ ನಿಂತನು. ನೆರಳಿನಂತೆ ಅವನು ಅವರ ಹಿಂದೆ ಹೋಗುತ್ತಿದ್ದನು. ಆಗ ವಾಲಗದವರು ಇವನನ್ನು ನೋಡಿ ಕುತೂಹಲದಿಂದ "ಎಂಗೆ ಪೋಹಬೇಕು" ಎಂದು ಅರ್ಧ ಅರವ, ಅರ್ಧ ಕನ್ನಡ ಭಾಷೆ ಆಡಿದನು. ಸುಬ್ಬನಿಗೆ ಅರ್ಥವಾಗಲಿಲ್ಲ. "ಎಲ್ಲಿಕೆ ಹೋಕಬೇಕು" ಎಂದು ಇನ್ನೊಬ್ಬನು ವಿವರಿಸಿ ಕೇಳಿದನು.

"ಗೊತ್ತಿಲ್ಲ" ಎಂದನು ಸುಬ್ಬ.

"ಎಂಗಳ ಒಡನೆ ವರೆಯಾ?" ವಾಲಗದವನ ಪ್ರಶ್ನೆ.

"ನಮ್ಮ ಚತೇಲಿ ಪರ್ತಿಯಾ?" ಕನ್ನಡ ಜ್ಞಾನಿ ಕೇಳಿದನು.

"ಹೌದು" ಎಂದನು ಸಂತೋಷದಿಂದ ಸುಬ್ಬ.

"ಅರೆ, ನಾವು ಕೊಯಂಬತ್ತೂರಿಕೆ ಹೋಕುವುದು. ಅಲ್ಲಿಕೆ ಪರ್ತಿಯಾ?"

ಕೊಯಂಬತ್ತೂರೆಂದರೆ ಏನೆಂದೇ ಸುಬ್ಬನಿಗೆ ಗೊತ್ತಿಲ್ಲ. "ಹ್ಞೂ" ಎಂದನು.

"ನಿನಕೆ ತಂದೆತಾಯಿ ಯಾರೂ ಇಲ್ಲವಾ?"

ಇದಕ್ಕೇನು ಉತ್ತರ ಹೇಳಬೇಕೆಂದು ತಿಳಿಯಲಿಲ್ಲ. ಬಾಯಿಂದ ಮಾತ್ರ "ಇಲ್ಲ" ಎಂದು ಹೇಳಿಹೋಯಿತು.

"ನಮ್ಮ ಚತೇಲಿ ಬಂತು ಏನು ಮಾಡ್ತಿಯಾ?"

"ನೀವ್ಹೇಳಿದ್ದು ಮಾಡ್ತೇನೆ."

"ಮುಂದೆ ಹೋಗು ಹೆದರಬೇಡ" ಎಂದು ತಳ್ಳಿತು ಮನಸ್ಸು.

"ವರಟು! ವೇಲೆ ಶೆಯ್ಯರಂತಕು ಒರು ಪಯ್ಯನಾಚಿ" ಎಂದು ವಾಲದವನು ಈ ಸಂಭಾಷಣೆಯನ್ನು ಮುಗಿಸಿದನು.

ಮತ್ತೆ ಅವರು ಅವನನ್ನು ಏನೂ ಪ್ರಶ್ನಿಸಲಿಲ್ಲ. ಆ ರಾತ್ರಿ ಅವನಿಗೂ ಅನ್ನವನ್ನು ಕೊಟ್ಟರು. ಸುಬ್ಬನಿಗೆ ಬಲು ಸಂತೋಷವಾಯಿತು. ರಾತಿಯೂಟ ಮಾಡಿ ಮುಂದೆ ಹೊರಟರು. ಕೆಲವು ಗಂಟುಗಳನ್ನು ಹೊತ್ತು ಕೊಳ್ಳಲು ಸುಬ್ಬನಿಗೆ ಕೊಟ್ಟರು. ಅವನು ಭಕ್ತಿಯಿಂದ ಅವನ್ನು ಹೊತ್ತು ಕೊಂಡನು.

ಹೀಗೆ ಅವರು ಮುಂದೆ ಮುಂದೆ ನಡೆಯುತ್ತ ಸಾಗಿದರು. ದಾರಿಯಲ್ಲಿ ಅಲ್ಲಲ್ಲಿ ಎದುರಾದ ದೇವಾಲಯಗಳಲ್ಲಿ ವಿಶ್ರಾಂತಿ ಪಡೆದುಕೊಂಡು, ಅಲ್ಲಿ ನಾಗಸ್ವರ ಸೇವೆ ಸಲ್ಲಿಸಿ ಮುಂದೆ ಹೋದರು. ಮೈಸೂರು ಸೀಮೆ ದಾಟಿ, ಕೊಯಮತ್ತೂರನ್ನು ಸೇರಿದರು.

****

ಸುಬ್ಬನಲ್ಲಿ ಹುದುಗಿದ್ದ ಸಂಗೀತ ಪ್ರೇಮವನ್ನು ಅರಿಯಲು, ಅಡಗಿದ್ದ ಚಿನ್ನವನ್ನು ಹೊರದೆಗೆಯಲು ಆ ನಾಗಸ್ವರ ವಿದ್ವಾಂಸರಿಗೆ ಹೆಚ್ಚು ದಿವಸ ಹಿಡಿಯಲಿಲ್ಲ. ಸುಬ್ಬನು ಮುನಿಸ್ವಾಮಿ ಪಿಳ್ಳೆಯ ಮನೆಯಲ್ಲಿಯೇ ಕೆಲಸಕ್ಕೆ ಇದ್ದನು. ಪಿಳ್ಳೆಯು ಬಲು ಯೋಗ್ಯ ವ್ಯಕ್ತಿಯಾಗಿದ್ದನು. ಆಚಾರವಂತನೂ ದೇವರಲ್ಲಿ ಅತಿ ಭಕ್ತಿಯುತನೂ ಆಗಿದ್ದನು. ಅವನ ಮನೆಯಲ್ಲಿ ಅವನೂ ಅವನ ಹೆಂಡ್ತಿ ಇಬ್ಬರೇ ಇದ್ದರು. ಮತ್ತೆ ವಾಲಗ ಕಲಿಯಲು ಅನೇಕ ಶಿಷ್ಯರಿದ್ದರು. ಅವರೆಲ್ಲರನ್ನೂ ತನ್ನ ಮಕ್ಕಳಂತೆ ನೋಡಿಕೊಳ್ಳುತ್ತ, ನಾಗಸ್ವರವನ್ನು ಹೇಳಿಕೊಡುತ್ತಿದ್ದನು ಮುನಿಸ್ವಾಮಿ. ಸುಬ್ಬನಿಗೆ ಬೆಳಗ್ಗಿನಿಂದ ಸಾಯಂಕಾಲದವರೆಗೆ ಈ ಗಾನಾಮೃತಪಾನ. ಆದರೆ ಕಲಿಯುವವರು ಮಾಡುತ್ತಿದ್ದ ಹರಟೆ ಮಾತ್ರ ಅವನಿಂದ ಸಹಿಸಲಾಗುತಿದ್ದಿಲ್ಲ.

ಒಂದು ದಿನ ಶಂಕರಾಭರಣ ರಾಗವನ್ನು ಒಬ್ಬ ಶಿಷ್ಯನಿಗೆ ಪಿಳ್ಳೆಯು ಹೇಳಿಕೊಡುತ್ತಿದ್ದನು. 'ಸ್ವರರಾಗಸುಧಾ' ಎಂಬ ಕೀರ್ತನೆ. ಆದರೆ ಅದರ ಪಲ್ಲವಿಯಲ್ಲೇ ಆ ಶಿಷ್ಯನು ತಪ್ಪಿ ಬೀಳುತ್ತಿದ್ದನು. 'ಸ್ವರರಾಗಸುಧಾ' ಎಂದು ಬಾರಿಸಿ ಒಂದು ದೀರ್ಘ ಅಲುಗು ಇದೆ. ಅದನ್ನು ಬಾರಿಸುವಾಗ ಅಪಸ್ವರ ಬಂದು ಕಿವಿಗೆ ಕಾದ ಸೀಸದ ರಸ ಹೊಯ್ದಂತೆ ಆಗುತ್ತಿತ್ತು. ಅ ಹಾಡನ್ನು ಒಳ್ಳೆಯ ನಾಗಸ್ವರದಿಂದ ಸುಬ್ಬನು ಲೆಕ್ಕವಿಲ್ಲದಷ್ಟು ಸಲ ಕೇಳಿದ್ದನು. ಆ ಹಾಡಿಗೆ ಬೆಟ್ಟುಗಳು ಹೇಗೆ ಓಡಬೇಕೆಂದು ಕೂಡ ಸುಬ್ಬನಿಗೆ, ಸೂಕ್ಷ್ಮಗ್ರಾಹಿಯಾದ ನಾಗಸ್ವರ ಪ್ರೇಮಿಗೆ ತಿಳಿದಿತ್ತು. ಆ ಶಿಷ್ಯನ ಈ ದಡ್ಡತನ ಸುಬ್ಬನಿಗೆ ತಡೆಯಲಾಗಲಿಲ್ಲ.

"ನಾನು ಬಾರಿಸುತ್ತೇನೆ" ಎಂದು ಒಂದೇ ಸಲ ಮುಂದೆ ಬಂದನು. ಅವನ ಉತ್ಸಾಹ "ಹೋಗು ಮುಂದೆ ಹೋಗು" ಎಂದು ನೂಕುತ್ತಿದ್ದಿತು. ಅವನ ಸಂಗೀತಪ್ರೇಮ, ಆ ಸುಪ್ತ ಶಕ್ತಿ ಆಗ ನಿದ್ದೆಯಿಂದೆದ್ದು "ನಾನಿದ್ದೇನೆ" ಎಂದು ಸಾಧಿಸಲು ಹೊರಗೆ ಬಂದಿತು. ಇವನ ರೀತಿಯನ್ನು ನೋಡಿ ಶಿಷ್ಯನಿಗೆ ನಗು ಬಂದಿತು. ಪಿಳ್ಳೆಯು ಆಶ್ಚರ್ಯದಿಂದ, ಕುತೂಹಲದಿಂದ "ನೀ ವಾಶಿಕ್ಕರೆಯಾ? ಎಡುತುಕೋ" ಎಂದು ಇನ್ನೊಂದು ನಾಗಸ್ವರವನ್ನು ಕೊಟ್ಟನು.

ಆಲಾಪನೆ, ಅಲುಗು, ಸ್ವರ ಇವುಗಳ ಅಲಂಕಾರವಿಲ್ಲದೆ ಇದ್ದರೂ ಶುದ್ಧವಾಗಿ ಆ ಹಾಡನ್ನು ಸುಬ್ಬನು ಬಾರಿಸಿದನು. ಗುರುವಿಗೆ ಆಶ್ಚರ್ಯ, ಸಂತೋಷ, ವಿಸ್ಮಯ. ಶಿಷ್ಯನು ತಲೆತಗ್ಗಿಸಿದನು. ಸುಬ್ಬನು ಆನಂದಪುಳಕಿತನಾಗಿದ್ದನು. ವಾಲಗವನ್ನು ಕೆಳಗಿರಿಸಿ ಮೈಮರೆತು ಕುಳಿತಿದ್ದನು.

"ಇಷ್ಟು ಚೆನ್ನಾಗಿ ಎಲ್ಲಿ ಕಲಿತೆ?" ಎಂದು ಪಿಳ್ಳೆಯು ತಮಿಳಿನಲ್ಲಿ ಕೇಳಿದನು.

ಏನು ಉತ್ತರ ಕೊಡುವುದು? "ನೀವು ಬಾರಿಸುವುದನ್ನು ಕೇಳಿ" ಎಂದನು ಸುಬ್ಬ. ಬೇರಾವ ಕಾರಣವೂ ಸಮರ್ಪಕವಾಗಿರಲಿಲ್ಲ. ಇದೇ ನಿಜವಾದುದು. ಪಿಳ್ಳೆಗೆ ಇದನ್ನು ನಂಬಲಾಗಲಿಲ್ಲ. ಬೇರೆ ಸುಲಭವಾದ ರಾಗಗಳೆರಡನ್ನು – ಮೋಹನ ಮತ್ತು ಕಲ್ಯಾಣಿ – ಬಾರಿಸಲು ಹೇಳಿದನು. ಅವನ್ನೂ ಸುಬ್ಬನು ಶುದ್ಧವಾಗಿ ನಿರಾಭರಣವಾಗಿ ನುಡಿಸಿದನು. ಸುಬ್ಬನ ಪ್ರತಿಭೆಯ ಅರಿವು ಗುರುವಿಗೆ ಕೂಡಲೇ ಆಯಿತು. ಮಕ್ಕಳಿಲ್ಲದ ತನಗೆ ಇಂತಹ ಶಿಷ್ಯನನ್ನು ಅಯಾಚಿತವಾಗಿ ದಯಪಾಲಿಸಿದ ಮುರುಘನನ್ನು ಮನಸ್ಸಿನಲ್ಲಿಯೇ ತುಂಬ ವಂದಿಸಿದನು.

ಪಿಳ್ಳೆ ಅಂದಿನಿಂದ ಸುಬ್ಬನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡನು. ಅವನು ಮತ್ತೆ ಹೊರಗೆಲಸ ಮಾಡಬೇಕಾಗಿರಲಿಲ್ಲ. ಸುಬ್ಬನ ಆಸೆ ಕೈಗೂಡುವಂತಾಯಿತು. ಅಂದಿನಿಂದ ಸುಬ್ಬನಿಗೆ ಕ್ರಮ ಪ್ರಕಾರ ಪಾಠ ಪ್ರಾರಂಭವಾಯಿತು. ಒಂದು ಸಲ ಹೇಳಿಕೊಟ್ಟರೆ ಅದು ಅವನಿಗೆ ಕೂಡಲೇ ಬರುತ್ತಿತ್ತು. ಅವನು ಹೇಳಿದಂತೆ ನಾಗಸ್ವರವು ನುಡಿಯುತ್ತಿತ್ತು. ಅವನ ಅಪ್ಪನ ನಾಗಸ್ವರದಂತೆ ಅಳುತ್ತಿರಲಿಲ್ಲ. ಆದರೆ ಅಳುವಿನ ಹಿನ್ನೆಲೆಯಿಲ್ಲದಿದ್ದರೆ ನಗುವು ತಿಳಿಯುವುದೇ? ಬೇರೆ ಶಿಷ್ಯರು ವರ್ಷಗಳಲ್ಲಿ ಕಲಿಯುವುದನ್ನು ಸುಬ್ಬನು ತಿಂಗಳುಗಳಲ್ಲಿ ಕಲಿತು ಮುಗಿಸಿದನು. ಪಿಳ್ಳೆಯು ನವೋತ್ಸಾಹದಿಂದ ಈ ಶಿಷ್ಯನಿಗೆ ರಾಗ ಪ್ರಕರಣವೆಲ್ಲವನ್ನೂ ಕಲಿಸಿದನು. ತೋಡಿ, ಭೈರವಿ, ಕಲ್ಯಾಣಿ, ಶಂಕರಾಭರಣ ಮುಂತಾದ ರಾಗಗಳಲ್ಲಿ ಗುರುಶಿಷ್ಯರು ಆಲಾಪನೆ ಮಾಡಲು ತೊಡಗಿದರೆ ಯಾರು ಹೆಚ್ಚು, ಯಾರು ಕಡಿಮೆ ಎಂದೇ ತಿಳಿಯುತ್ತಿದ್ದಿಲ್ಲ. ಪ್ರತಿಯೊಬ್ಬನದೂ ಪ್ರತ್ಯೇಕವಾಗಿ ಕೇಳುವಾಗ ಅವನೇ ಉತ್ತಮನೆಂದು ಅನಿಸುತ್ತಿತ್ತು. ಇಬ್ಬರೂ ಒಟ್ಟಿಗೆ ಬಾರಿಸುವಾಗ ಗುರುವಿನದು ಏಕರೀತಿಯ ಗಂಭೀರವಾದ ಮುನ್ನಡೆ; ಶಿಷ್ಯನು ನೆರಳಿನಂತೆ ಹಿಂಬಾಲಿಸುತ್ತಾ, ಒಮ್ಮೆ ಏರುಸ್ವರದಲ್ಲಿ ಒಮ್ಮೆ ತಗ್ಗು ಸ್ವರದಲ್ಲಿ ಬಾರಿಸುತ್ತ ಕೇಳುವವರಲ್ಲಿ ಆನಂದೋಲ್ಲಾಸವನ್ನು ಕಲ್ಪಿಸುತ್ತಿದ್ದನು. ಹಾಲಿನ ಹೊಳೆಯಲ್ಲಿ – ಈ ಎರಡೂ ದ್ರವ ಪದಾರ್ಥಗಳು ಮಿಶ್ರವಾಗುವುದಿಲ್ಲ – ಆದರೂ ಅವುಗಳ ಮಿಶ್ರಣ ಮಧುರ, ಹಿತಕರ, ಆನಂದಕರ. ಹೇಗೂ ಸ್ವರಪ್ರಸ್ತಾರದಲ್ಲಿ (ಹಾಡಿನ ಮಧ್ಯೆ ಸರಿಗಮಪದನಿಗಳನ್ನು ಜೋಡಿಸುವ ಕ್ರಮ) ಗುರುವಿನದೇ ಮೇಲುಗೈ ಆಗಿತ್ತು.

ಹೀಗೆ ಐದಾರು ವರ್ಷಗಳು ಸಲ್ಲುವಾಗ ಸುಬ್ಬನು – ಸುಬ್ರಹ್ಮಣ್ಯ ಪಿಳ್ಳೆ – ಗುರುವಿನ ವಿದ್ಯೆ, ಪಾಂಡಿತ್ಯಗಳನ್ನು ಸಂಪೂರ್ಣ ಸಂಪಾದಿಸಿ, ತನ್ನ ಪ್ರತಿಭೆಯನ್ನೂ ಅದಕ್ಕೆ ಎರಕ ಹೊಯ್ದನು. ಈಗ ಇವರಿಬ್ಬರ ನಾಗಸ್ವರಗಳನ್ನು ಕೇಳಿದವರು ಶಿಷ್ಯನೇ ಉತ್ತಮ ಎನ್ನುತ್ತಿದ್ದರು. ಆದರೆ ಹಳಬರು "ಎಷ್ಟಾದರೂ ಮುನಿಸ್ವಾಮಿಯದು ಹಳೇ ಕೈ. ಅವನೇ ಮೇಲು" ಎಂದು ಹಳೆಯತನಕ್ಕೆ ಶರಣುಹೋಗುತ್ತಿದ್ದರು.

ವಿದ್ಯೆಯನ್ನು ಕಲಿಯುವಾಗ ಸುಬ್ಬನು ಅದರಲ್ಲಿ ಸಂಪೂರ್ಣ ತನ್ಮಯನಾಗಿದ್ದನು. ತಂದೆತಾಯಿಗಳ ಆಲೋಚನೆ ಬಂದಾಗಲೆಲ್ಲ ಮನಸ್ಸು "ಮುಂದೆ ಹೋಗು, ಹೆದರಬೇಡ" ಎಂದೇ ಹೇಳುತ್ತಿತ್ತು. ಆದರೆ ಎಷ್ಟು ವರ್ಷ ಹೀಗೆ, ಅವರಿಗೆ ತಾನು ಏನಾದೆ ಎಂದೂ, ಬದುಕಿದ್ದೇನೋ ಸತ್ತಿದ್ದೇನೋ ಎಂದೂ ತಿಳಿಯದೇ ಇರುವುದು? ಈಗ ಅವರು ಹೇಗಿದ್ದಾರೋ? ಈಗ ಸಂಗೀತವನ್ನು ತಕ್ಕಮಟ್ಟಿಗೆ ಕಲಿತಾಯಿತು. ಒಂದು ಸಲವಾದರೂ ಊರಿಗೆ ಹೋಗಿ ಅಪ್ಪ, ಅಮ್ಮ ಇವರನ್ನು ನೋಡಿ ಬರಬೇಕೆಂದು ಸುಬ್ಬನಿಗೆ ಬಲವಾಗಿ ಆಸೆ

ಹಿಡಿಯಿತು. ತಂದೆ ತಾಯಿ ಯಾರೂ ಇಲ್ಲವೆಂದು ಅಂದೇ ಗುರುವಿಗೆ ತಿಳಿಸಿದ್ದುದರಿಂದ ಈ ವಿಷಯವನ್ನು ಅವನು ಮುಂದೆ ವಿಚಾರಿಸಲೇ ಇಲ್ಲ. ತನ್ನ ಮಗನೇ ಇವನು ಎಂದು ನೋಡಿಕೊಳ್ಳುತ್ತಿದ್ದನು. ಸುಬ್ಬನ ಮನಸ್ಸಿನಲ್ಲಿ ಮಾತ್ರ ಅಪ್ಪ, ಅಮ್ಮ, ದೊಡ್ಡಣ್ಣನಿಗೆ ಮೋಸ ಮಾಡಿ – ಬೇಕೆಂದು ಅಲ್ಲ – ತಾನು ಓಡಿಬಂದುದು ಈ ಎಲ್ಲ ಚಿತ್ರಗಳು ಮೂಡುತ್ತಿದ್ದುವು. ತನ್ನನ್ನು ನೆನೆದು ಅಪ್ಪನೆಷ್ಟು ಕೊರಗುತ್ತಾನೋ? ಅಮ್ಮನೆಷ್ಟು ಹಂಬಲಿಸುತ್ತಾಳೋ? ಆದರೆ ಎಷ್ಟು ದೂರವೋ ಏನೋ ಮಡಿಕೇರಿ. ಅಲ್ಲಿಗೆ ಹೇಗೆ ಹೋಗುವುದು? ಆದರೆ ಹೋಗಲೇ ಬೇಕು.

ಗುರುವಿಗೆ ಈ ವಿಷಯವನ್ನು ಸುಬ್ಬನು ತಿಳಿಸಿದನು. ಒಂದು ಸಲವಾದರೂ ಊರಿಗೆ ಹೋಗಿಬರಬೇಕೆಂಬ ತನ್ನ ಅಪೇಕ್ಷೆಯನ್ನು ವ್ಯಕ್ತಪಡಿಸಿದನು. ಮುನಿಸ್ವಾಮಿ ಪಿಳ್ಳೆಗೆ ನಿಜಸಂಗತಿ ತಿಳಿದು ಸಂತೋಷವೇ ಆಯಿತು – ತಂದೆತಾಯಿ ಇರುವ ಹುಡುಗ ಎಂದು. ಆದರೆ ತನ್ನನ್ನು ಬಿಟ್ಟು ಹೋಗುವನಲ್ಲ ಎಂದು ವ್ಯಸನವೂ ಆಯಿತು. "ನನಗೆ ಪ್ರಾಯವಾಗುತ್ತಾ ಬಂದಿತು. ಇನ್ನು ಈ ವರ್ಷ ಪುನಃ ಸುಬ್ರಹ್ಮಣ್ಯಕ್ಕೆ ಹೋಗಬೇಕೆಂದು ಉಂಟು. ಈ ಸಲ ಹೋಗದಿದ್ದರೆ ಮುಂದೆ ಹೋಗುವುದು ಸಾಧ್ಯವೇ ಇಲ್ಲ. ನಾವೆಲ್ಲ ಹೋಗುವ, ಮತ್ತೆ ನೀನು ನಿನ್ನ ಊರಿಗೆ ಹೋಗು. ಮುರುಘ ನಿನ್ನನ್ನು ನನಗೆ ದಯಪಾಲಿಸಿದ. ಅವನಲ್ಲೇ ನಿನ್ನನ್ನು ಬಿಟ್ಟು ಬರುತ್ತೇನೆ" ಎಂದು ಪಿಳ್ಳೆಯು ತಮಿಳಿನಲ್ಲಿ ಹೇಳಿದನು.

ಮುಂದಿನ ಏಳೆಂಟು ತಿಂಗಳುಗಳಲ್ಲಿ ಸುಬ್ರಹ್ಮಣ್ಯ ಷಷ್ಠಿಯು ಬರುವುದರಲ್ಲಿತ್ತು. ಎರಡು ತಿಂಗಳುಗಳ ಮುಂಚೆ, ಮುನಿಸ್ವಾಮಿ ಪಿಳ್ಳೆಯ ಪಂಗಡ ಹೊರಟಿತು. ಆರು ವರ್ಷಗಳ ಹಿಂದೆ ಬಂದಂತೆಯೇ ಸಾಗಿದರು. ಈಗ ಪಿಳ್ಳೆಯು ಸ್ವಲ್ಪ ಬಲಕುಂದಿದವನಾಗಿದ್ದನು. ಆದರೆ ಅವನ ಜತೆಯಲ್ಲಿ ಅವನ ಮಗನಂತೆ, ಪ್ರತಿರೂಪನಂತೆ ಇದ್ದ, ದೇಹದಲ್ಲಿ ಬಲವಾಗಿ ಬೆಳೆದಿದ್ದ, ವಿದ್ಯೆಯಲ್ಲಿ ಸಂಪೂರ್ಣ ಪಾಂಡಿತ್ಯ ಪಡೆದಿದ್ದ ಸುಬ್ಬನು ಇದ್ದನು. ಜಾತ್ರೆಗೆ ಒಂದು ವಾರದ ಮೊದಲೇ ಇವರು ಸುಬ್ರಹ್ಮಣ್ಯವನ್ನು ತಲಪಿದರು. ದೂರದೂರದ ಯಾತ್ರಿಕರು ಆಗಲೇ ಅಲ್ಲಿಗೆ ಬಂದು ಸೇರಲು ಪ್ರಾರಂಭಿಸಿದ್ದರು. ಪ್ರತಿ ದಿನವೂ ಜನಸಮೂಹ ಬೆಳೆಯುತ್ತಲೇ ಇತ್ತು. ಪಿಳ್ಳೆಯ ಕಡೆಯ ನಾಗಸ್ವರ ಪ್ರತಿದಿನವೂ ಬೆಳಗ್ಗೆ ಸಂಜೆ ದೇವಾಲಯದ ಮುಂದೆ ನಡೆಯುತ್ತಿತ್ತು. ಎಷ್ಟೋ ಜನರು "ಆರು ವರ್ಷದ ಹಿಂದೆ ಇವನನ್ನು ಕೇಳಿದ್ದೆವು. ಇಷ್ಟು ಚೆನ್ನಾಗಿ ಬಾರಿಸುವವನನ್ನು ನಾವು ಮತ್ತೆ ಕೇಳಲಿಲ್ಲ. ಈಗ ಅವನಷ್ಟೇ ಕಲಿತ ವಿದ್ವಾಂಸನನ್ನು ಕರೆದು ತಂದಿದ್ದಾನೆ" ಎಂದು ಅಲ್ಲಿ ನಿಂತು ಮಾತಾಡಿಕೊಳ್ಳುತ್ತಿದ್ದರು. ಬಹುಮಂದಿ, "ವಾಲಗ ಹೇಗೂ ಇರಬೇಕಾದುದೇ" ಎಂದು ಯಾರು ಬಾರಿಸುವುದು ಎಂದು ಸಹ ನೋಡದೆ ಹೋಗುತ್ತಿದ್ದರು. ಸುಬ್ಬನಿಗೊಂದೇ ಚಿಂತೆ: ನಿಂಗನು ವರ್ಷ ವರ್ಷದಂತೆ ಸೇವೆ ಸಲ್ಲಿಸಲು ಈ ವರ್ಷವೂ ಬಂದಾನೋ, ಬಂದರೆ ಅಲ್ಲಿಯೇ ನೋಡಿ ಮಡಿಕೇರಿಗೆ ಒಟ್ಟಿಗೆ ಹೋಗಬಹುದಲ್ಲ ಎಂದು. ಹೊಲೆಯರು ತಂಗಲು ಕಟ್ಟುತ್ತಿದ್ದ ಭಾವಣಿಗಳು ಇರುವಲ್ಲಿ ಈಗ ಹೊಸ ಕಟ್ಟಡಗಳು ಎದ್ದಿದ್ದುವು. ಇನ್ನೂ ದೂರದಲ್ಲಿ ಅವನ್ನು ಕಟ್ಟುತ್ತಿದ್ದರು. ಅಲ್ಲಿಗೆ ಪ್ರತಿ ದಿನವೂ ಸಾಯಂಕಾಲ ಸುಬ್ಬನು ಒಬ್ಬನೇ ಹೋಗಿ ನೋಡಿ ಬರುತ್ತಿದ್ದನು. ಆದ್ರೆ ಯಾರೂ ಅಲ್ಲಿಗೆ ಬಂದಿರಲಿಲ್ಲ. ಸುಬ್ಬನಿಗೆ ಹಿಂದಿನ ಚಿತ್ರವೆಲ್ಲವೂ ನೆನಪಾಗುತ್ತಿತ್ತು. ಅದೊಂದು ಸಂತೋಷದ ವಿಷಯ. ಆದರೆ ಅವನ ಪ್ರಾರ್ಥನೆಯೊಂದೇ "ಮನೆಯಲ್ಲಿ ಎಲ್ಲರೂ ಸೌಖ್ಯವಾಗಿರಲಿ" ಎಂದು.

ಷಷ್ಠಿಯ ಹಿಂದಿನ ರಾತ್ರಿಯೂ ಸುಬ್ಬನು ಆ ಭಾವಣಿಗೆ ಹೋಗಿ ನೋಡಿದನು. ಅನೇಕ ಹೊಲೆಯರು ಅಲ್ಲಿ ಸೇರಿದ್ದರೂ ಅವನ ಪರಿಚಿತರು ಮಡಿಕೇರಿಯವರಾರೂ ಬಂದಿರಲಿಲ್ಲ. ಬಹುಷಃ ತಡವಾಗಿ ಬರುತ್ತಾರೋ ಏನೋ?

ರಾತ್ರಿ ದೇವರ ಸೇವೆಗೆ, ಸಣ್ಣ ರಥೋತ್ಸವಕ್ಕೆ ನಾಗಸ್ವರ ಬಾರಿಸಲು ಗುರುಶಿಷ್ಯರು ಹೊರಟರು. ಮೈಸೂರಿನಿಂದ ಬಂದಿದ್ದ ನಾಗಸ್ವರದವನು ಈ ಕೊಯಮತ್ತೂರಿನ ವಿದ್ವಾಂಸರ ಪಾಂಡಿತ್ಯ ನೋಡಿ, ತನ್ನ ವಾಲಗವನ್ನು ಮೂಲೆಯಲ್ಲಿಟ್ಟು ಇವರನ್ನು ಕೇಳಲು ನಿಂತಿದ್ದನು. ಶ್ರೀರಾಗದಲ್ಲಿ ಆಲಾಪನೆ ನಡೆದಿತ್ತು. ಕಿವಿಯಿದ್ದವರು ಇದೇನು ಅದ್ಭುತವಪ್ಪಾ ಎಂದು ದಂಗುಬಡಿದು ಅಲ್ಲಿಯೇ ನಿಂತು ಕೇಳಿದರು. ಈ ಗುರುಶಿಷ್ಯ ಸಂವಾದವನ್ನು, ಮಧುರ ಸ್ಪರ್ಧೆಯನ್ನು. ಆಲಾಪನೆಯೇ ಎಷ್ಟೋ ಹೊತ್ತು, ಮತ್ತೆ 'ಎಂದುರೋ ಮಹಾನುಭಾವುಲು' ಎಂಬ ತ್ಯಾಗರಾಜರ ಪಂಚರತ್ನ ಕೀರ್ತನೆಯನ್ನು ನಿಧಾನಗತಿಯಲ್ಲಿ ಪ್ರಾರಂಭಿಸಿದರು. ಒಂದು ವಾಲಗವನ್ನು ಏರುಸ್ವರದಲ್ಲಿ, ಇನ್ನೊಂದನ್ನು ತಗ್ಗು ಸ್ವರದಲ್ಲಿ (ಶಿಷ್ಯನದು) ಬಾರಿಸುತ್ತಿದ್ದರು. ಒಂದು ಸುಖಾಂತ ನಾಟಕವನ್ನಾಡಿ ತೋರಿಸುತ್ತಿದ್ದಂತೆ, ಒಂದು ಸುಂದರ ಚಿತ್ರವನ್ನು ಅನಾವರಣ ಮಾಡಿ ತೋರಿಸುತ್ತಿದ್ದಂತೆ ಆ ಸಂಗೀತವಿತ್ತು. ಕಿವಿಯಿಲ್ಲದಿದ್ದವರೂ ಇದೇನು ವಿಶೇಷವಪ್ಪಾ ಈ ವರ್ಷ ಎಂದು ನಿಂತು ಆಲಿಸಿದರು. ಸುಬ್ಬನು ಈಗ ಆಲಾಪನೆ, ಪಲ್ಲವಿ, ಸ್ವರ ಪ್ರತಿಯೊಂದರಲ್ಲಿಯೂ ಗುರುವಿಗಿಂತಲೂ ಒಂದು ಹೆಜ್ಜೆ ಮುಂದುವರಿದಿದ್ದನು. ಮೈಮರೆತು ಅವರಿಬ್ಬರೂ ಆ ಹಾಡನ್ನು ಬಾರಿಸಿದರು. ಡೋಲಿನವರು ಅದ್ವಿತೀಯವಾಗಿ ವಾಜಿಸಿದರು. ರಥವು ಮುಂದುವರಿಯಿತು. ಜನರು ಇವರನ್ನು ನೂಕಿದರು, ಹಾಗೆಯೇ ಇವರೂ ಮುಂದುವರಿದರು. ನಾಗಸ್ವರದಲ್ಲಿ ಲೀನರಾಗಿ ತ್ಯಾಗರಾಜರ ವಿದ್ವತ್ಸಮುದ್ರದಲ್ಲಿ ಶ್ರೀರಾಗದ ಮಾಧುರ್ಯಶ್ರೀಯನ್ನರಸುತ್ತಾ ಅವರು ಬಾಹ್ಯ ಜ್ಞಾನವನ್ನೇ ಮರೆತರು. ಜನಪ್ರವಾಹದಲ್ಲಿ ಸಂಗೀತಾಮೃತವಾಹಿನಿ ಮಿಶ್ರವಾಗಿ ದಿಗಂತಕ್ಕೆ ಹರಿಯಿತು. ಸಾಂದ್ರ ತಮಸ್ಸಿಗೆ ಜ್ಯೋತಿಸ್ವರೂಪವಾಯಿತು.

ರಥವು ಮುಂದುವರಿಯುವಾಗಲೇ, "ಸುಬ್ಬ, ಸುಬ್ಬ, ನನ್ನ ಸುಬ್ಬ, ಬಂದ್ಯಾ ಮಗ್ನೇ" ಎಂದು ಕಿರಿಚುತ್ತ, ಆ ಜನರನ್ನು ನೂಕುತ್ತ ಯಾರೋ ಮುಂದೆ ಓಡಿದರು. ಆತ್ಮಶಕ್ತಿಯ ಮುಂದೆ ಬೇರೆಲ್ಲ ಶಕ್ತಿಗಳೂ ನೇಸರ ಮುಂದಿನ ಸೊಡರುಗಳು; ನಿಂಗನು ಹೀಗೆ ಓಡಿದಾಗ ಜನರೆಲ್ಲರೂ ಅಡ್ಡ ಸರಿದು ದಾರಿ ಮಾಡಿದರು. ನಿಂಗನು ಓಡಿ ಹೋಗಿ ಮಗನನ್ನು ಆಲಿಂಗಿಸಿದರು. ಸುಬ್ಬನು ಭಾವ ಸಮಾಧಿಯಿಂದ

ಫಕ್ಕನೆ ಇಳಿದು "ಅಪ್ಪಾ ಬಂದ್ಯಾ?" ಎಂದು ಅವನನ್ನು ಅಪ್ಪಿಕೊಂಡನು. ವಾಲಗ ಕೆಳಗೆ ಬಿತ್ತು, ಹತ್ತಿರವಿದ್ದ ಜನರು ಇದೇನು ಎಂದು ಆಶ್ಚರ್ಯದಿಂದ ನೋಡುತ್ತಿದ್ದರು. ವಿಷಯ ತಿಳಿದಿದ್ದ ಗುರುವಿಗೆ ಸಂತೋಷದಿಂದ ಆನಂದ ಬಾಷ್ಪ ಸುರಿಯಿತು. "ಮುರುಘಾ ಕೃಪೆಶೈದೆಯಾ!" ಎಂದು ಅವನು ಆ ರಾಗವನ್ನು ಭಕ್ತಿಯಿಂದ ಮುಂದುವರಿಸಿದನು. ಹಿಂದಿನ ಜನರಿಗೆ ರಾಗ ತುಂಡಾದುದೇ ತಿಳಿಯಲಿಲ್ಲ.

'ಎಂದುರೋ ಮಹಾನುಭಾವುಲು' ಮುಂದುವರಿಯಿತು. ಆ ಮಹಾನುಭಾವರಿಗೆಲ್ಲಾ ವಂದನೆ!

# ಹೀಗೆ ಮಾಡುವುದೇ?

## (ಎರಡನೇ ಕತೆ–೧೯೪೪ಲ)

ಗಿರಿಶಿಖರದ ನೆರಳಿನಲ್ಲಿ, ಮರಗಳ ಮರೆಯಲ್ಲಿ ಹೊಂಬಣ್ಣದ ಸೂರ್ಯನು ಅಡಗುತ್ತಿದ್ದಾನೆ. ಚಳಿಗಾಳಿಯು ಆಗಲೇ ಬೀಸಲು ಪ್ರಾರಂಭವಾಗಿದೆ. ಒಂದು ಸಲ ಪ್ರವಾಹದಂತೆ ಅದು ಬೀಸಿ ಮತ್ತೆ ಸ್ವಲ್ಪ ಹೊತ್ತು ಶಾಂತವಾಗುವುದು. ಚಿನ್ನದ ಹೊದಿಕೆಯನ್ನು ತೆರೆಯಾಗಿ ಹಾಸಿದಂತೆ ಇರುವ ಇಡೀ ಗದ್ದೆಗಳು ಆಗ ತಲೆದೂಗಿ, ಬತ್ತದ ಪರಿಮಳವನ್ನು ಗಾಳಿಗೆ ಬೆರೆಸಿ ಶಾಂತವಾಗುವುವು. ಎಲ್ಲಿ ನೋಡಿದರೂ ಗದ್ದೆಗಳು, ಅತಿ ದೂರದಲ್ಲಿ ಬೆಟ್ಟದ ಸಾಲುಗಳು. ಅವು ಸಂಜೆಯ ಸೂರ್ಯನ ರಶ್ಮಿಯಲ್ಲಿ ಧೂಳಿನ ಪರೆಯಿಂದ ಮುಚ್ಚಿದಂತೆ ತೋರುವುವು. ಈ ಗದ್ದೆಗಳು ಮೆಟ್ಟಲು ಮೆಟ್ಟಲಾಗಿ, ಒಂದು ಕಡೆ ನೋಡಿದರೆ ಇಳಿಯುತ್ತಾ ಸಾಗಿರುವುವು. ಪ್ರತಿ ಗದ್ದೆಯೂ ಬತ್ತದ ಕದಿರುಗಳಿಂದ ತುಂಬಿ ತುಳುಕುತ್ತಿದೆ. ಅದೇ ಹುತ್ತರಿಯು (ಪುದಿಯ ಅರಿ ಪುತ್ತರಿ, ಹೊಸ ಅಕ್ಕಿ ಬರುವ ಶುಭಸೂಚಕವಾದ ಒಂದು ಹಬ್ಬ) ಕಳೆದಿರುವ ಸಮಯ. ಇನ್ನೇನು ಒಂದು ವಾರ, ಎರಡು ವಾರಗಳಲ್ಲಿ ಅವೆಲ್ಲ ಕಟಾವಿಗೆ ಸಿದ್ಧವಾಗುವುವು. "ಈ ದಿನ ಈ ಗದ್ದೆ, ನಾಳೆ ಆ ಗದ್ದೆ" ಎಂದು ಎಲ್ಲ ಗದ್ದೆಗಳೂ ಕೊಯ್ದು ಮುಗಿಯುವುವು. ತೆನೆ ತುಂಬಿ ಬಾಗಿ ನಿಂತಿರುವ ಬತ್ತದ ಪೈರುಗಳನ್ನು ಕೊಯ್ದು, ಹತ್ತಿರ ಹತ್ತಿರ ಸಾಲಾಗಿ ಗದ್ದೆಯಲ್ಲಿ ಹರಡುತ್ತಾರೆ. ಆಗ ದೂರದಿಂದ ಒಂದು ಮರದ ಮೇಲಿನಿಂದಲೋ ಒಂದು ಗುಡ್ಡದ ತುದಿಯಿಂದಲೋ ಈ ಗದ್ದೆಗಳನ್ನು ನೋಡಬೇಕು. ಹಸುರು ಬಟ್ಟೆಯ ಮೇಲೆ ಅರಸಿನದ ಚಿತ್ರಗಳನ್ನು ಯಾರೋ ನುರಿತ ಚಿತ್ರಕಾರನು ಕುಂಚಿಸಿದಂತೆ ಚೆಲುವಾಗಿ ತೋರುವುವು. ಪ್ರಕೃತಿಯು ಪ್ರತಿ ಋತುವಿನಲ್ಲಿಯೂ ನವರೂಪ ಧರಿಸಿ ನಮ್ಮನ್ನು ಆಹ್ಲಾದಪಡಿಸುತ್ತಿರುತ್ತಾಳೆ.

ಅದೂ ಈ ವರ್ಷದ ಬೆಳೆಯೆಂದರೆ ಮೃಗ ತಿಂದರೂ ಅಳಿಯದು ಎಂದು ಹಳ್ಳಿಗರೆಲ್ಲರೂ ಸಂತೋಷದಿಂದ ಹೇಳಿಕೊಳ್ಳುತ್ತಿದ್ದರು. ಮಳೆಯು ಸಮೃದ್ಧಿಯಾಗಿ ಕಾಲಕಾಲಕ್ಕೆ ಸರಿಯಾಗಿ ಸುರಿಯಿತು. ಬಿಸಿಲು ಬೇಕಾದಾಗ ಸರಿಯಾಗಿ ಕಾಯಿತು. ಭೂಮಿತಾಯಿ ಚಿನ್ನವನ್ನೇ ಹಡೆದಳು. ಈ ಕ್ಷಾಮಸಮಯದಲ್ಲಿ ಬತ್ತದ ಪ್ರತಿಯೊಂದು ಕಾಳೂ ಅತ್ಯಮೂಲ್ಯವಾದುದು. ಪ್ರತಿಯೊಬ್ಬ ರೈತನಿಗೂ ಹರ್ಷ ಯಾರಿಗೆ ತಾನೇ ಆಗದು? ಇಡೀ ವರ್ಷದ ಗೈಮೆಯ ಫಲ ಆಗ ಕಾಣುವುದು. ಅರೆ ಹೊಟ್ಟೆ ಉಂಡು, ಕಾಯಿಲೆಗಳಿಂದ ಪೀಡಿತನಾಗಿ, ಸಾಲದಲ್ಲಿ ಮುಳುಗಿ ಅಂತೂ ಉತ್ತು ಬಿತ್ತುವನು. ಮಳೆಗಾಲ ಮುಗಿದು, ಕಾಯಿಲೆಗಳೆಲ್ಲ ಅಳಿದು, ಹೊಟ್ಟೆ ತುಂಬ – ನಾಲ್ಕು ದಿವಸಗಳಾದರೂ ತಿನ್ನಲು ಧಾನ್ಯ ದೊರೆಯುವುದು ಎನ್ನುವಾಗ ಆನಂದಕ್ಕೆ ಪಾರವೇ ಇಲ್ಲ. ಬಡತನ, ಅರೆಹೊಟ್ಟೆ, ಉಣಿಸು ಇವೇ ಅವನಿಗೆ ವ್ಯಾಧಿಗಳನ್ನು ತರುವ ಮುಖ್ಯ ಸೋಂಕುಗಳು. ಆದರೆ ಈ ವರ್ಷ ಹಾಗಲ್ಲ; ಆನಂದ, ತೃಪ್ತಿಗಳು ಎಲ್ಲ ಕಡೆಗಳಲ್ಲಿಯೂ ತುಂಬಿದ್ದುವು.

ತಿಮ್ಮಯ್ಯನು ಸಾಯಂಕಾಲ ಗದ್ದೆಯ ಏರಿಯ ಮೇಲೆ ನಡೆದು ಬರುತ್ತಿದ್ದನು. ದನಗಳನ್ನು ಕೊಟ್ಟಿಗೆಗೆ ಕೂಡಿಸಿ ಆಯಿತು. "ಇನ್ನೇನು ಒಂದು ವಾರ ತಡೆದರೆ ಈ ಗದ್ದೆಗಳನ್ನೆಲ್ಲಾ ಕೊಯ್ಯಬಹುದು. ಈ ವರ್ಷ ದೃಷ್ಟಿ ತಾಗುವಂತೆ ಪೈರು ಬಂದಿದೆ. ದೇವರ ದಯದಿಂದ ಇನ್ನು ಒಂದು ತಿಂಗಳು ಅಥವಾ ಕಡಿಮೆ ಎರಡು ವಾರ, ಮಳೆ ಬಾರದಿದ್ದರೆ ಈ ವರ್ಷದ ಸುಭಿಕ್ಷಕ್ಕೆ ಅಂತ್ಯವೇ ಇಲ್ಲ. ಕಳೆದ ವರ್ಷ ಗದ್ದೆಗಳಿಗೆ ನೀರಿಲ್ಲದೆ ಹೊತ್ತಿ ಹೋಗಿ ಆದ ಸಾಲವನ್ನು ತೀರಿಸಬಹುದು. ಆದರೆ ಕಾಡು ಹಂದಿಯ ಕಾಟ ವಿಪರೀತವಾಗಿದೆ. ಈಗೀಗ ಅವುಗಳಿಗೇನು ನಮ್ಮ ಮೇಲೆ ಇಷ್ಟು ಹೊಟ್ಟೆಕಿಚ್ಚು? ಇದುವರೆಗೆ ಆಗದಿದ್ದಷ್ಟು ಹಾನಿ ಅವುಗಳಿಂದ ಈ ವರ್ಷವಾಯಿತು. ರಾತ್ರಿ ಇಡೀ ಗದ್ದೆಯಲ್ಲಿ ಬೆಂಕಿ ಹಾಕಿಕೊಂಡು ಬೊಬ್ಬೆ ಹೊಡೆಯುತ್ತಿರಬೇಕು. ಈ ನಾಯಿಯೋ ಹೆಣ ಪಾರಕಾಯಲಿಕ್ಕೂ ಹರಿಯದು! 'ಒಂದು ಕೋವಿ ತೆಗೆದುಕೊಡಿ' ಸ್ವಾಮಿಯವರಿಗೆ ಎಷ್ಟು ಸಲ ಹೇಳಿದೆ. 'ಆಗಲಿ, ಆಗಲಿ' ಎಂದೇ ಅವರು ಸತಾಯಿಸುತ್ತಿದ್ದಾರೆ. ಇಲ್ಲಿ ಕೋವಿ ಬರುವವರೆಗೆ ಹಂದಿ ಕಾಯುತ್ತದೋ? ಆಗಲೇ ಆ ಕರೆಯಲ್ಲಿ ಮೂರು ಬಟ್ಟಿ ಬತ್ತವನ್ನು ತಿಂದು ಹಾಳು ಮಾಡಿತು. ಮೂರು ಬಟ್ಟಿ ಎಂದರೆ ಈಗ ಕಡಿಮೆ ಮೂವತ್ತು ರೂಪಾಯಿ ನಷ್ಟವಾಯಿತು. ಅವರಿಗೇನು! ಬಂದದ್ದರಲ್ಲಿ ಸಮ ಅರ್ಧ ತೆಗೆದುಕೊಂಡು ಹೋಗುತ್ತಾರೆ. ನಮ್ಮ ಕಷ್ಟ ತಿಳಿಯುತ್ತದೋ? ಆ ಬೋನಿರ ಮನೆಯವನು ಮೊನ್ನೆ ಒಂದು ಹಂದಿಗೆ ಗುಂಡು ಹೊಡೆದು ಓಡಿಸಿದ. ಈ ಪಾಣಾಲೆ ಶಿವಣ್ಣನು ಒಂದನ್ನು ಹೊಡೆದು ತಿಂದೇ ಬಿಟ್ಟ. ಸುತ್ತಲೂ ಪೆಟ್ಟು ಬೀಳುವ ಹಂದಿ ನನ್ನ ಗದ್ದೆಗೇ ಬಂದು ಬೀಳುತ್ತದೆ. ನಾನು ಮಾತ್ರ ಬಾಯಿ ಬಡಿದೇ ಸಾಯಬೇಕು" ಎಂದು ಯೋಚಿಸುತ್ತ ತಿಮ್ಮಯ್ಯನು ಗದ್ದೆಯ ಏರಿಯ ಮೇಲೆ ತಿರುಗುತ್ತಿದ್ದನು.

"ರೈತರು ಬೆಳೆಯ ಸಮಯದಲ್ಲಿ ಮಾತ್ರ ದುಡಿದು, ಬೇಸಗೆಯ ಸಮಯವನ್ನು ಅನಾವಶ್ಯಕವಾಗಿ ಹಾಳುಮಾಡುತ್ತಾರೆ" ಎಂದು ಮುಂತಾಗಿ ಗ್ರಾಮೋದ್ಧಾರಕರು ಹೇಳುತ್ತಾರೆ. ಆದರೆ ಮಳೆ ಹಿಡಿಯುವಾಗಿನಿಂದ ಬೆಳೆಯನ್ನು ಪತ್ತಾಯ ತುಂಬುವುದರವರೆಗೆ ಅವರು ಎಷ್ಟು ಕೆಲಸ ಮಾಡುತ್ತಾರೆ ಎಂದು ಇವರು ಲಕ್ಷಿಸುವುದಿಲ್ಲ. ನಮಗೆ ಆರು ದಿವಸ ಅದೂ ನಿಶ್ಚಿತ ಸಮಯದಲ್ಲಿ ಮಾತ್ರ ಕೆಲಸ ಮಾಡಿದರೆ ಏಳನೆಯ ದಿವಸ ರಜೆ ಬೇಕು. ಮತ್ತೆ ವರ್ಷಕ್ಕೊಂದಾವರ್ತಿ ಹಕ್ಕಿನ ರಜೆ ಬೇಕೆಂದು ಗಲಭೆ ಎಬ್ಬಿಸುತ್ತೇವೆ. ರೈತರಿಗೆ ವಿಶ್ರಾಂತಿ ಬೇಡವೇ? ಬೆಳೆಯ ಕೆಲಸದ ಸಮಯದಲ್ಲಿ ಹಗಲೂ ರಾತ್ರಿಯೂ ಗದ್ದೆಗಳನ್ನು ಕಾಯುತ್ತಿರಬೇಕು. ಕಾಡುಹಂದಿಗಳಿಂದ, ನಾಡು (ಸಾಕಿದ) ಹಂದಿಗಳಿಂದ, ಕಪಿಗಳಿಂದ ಪೈರು ರಕ್ಷಿಸಬೇಕು. ಕಾಡು ಹಂದಿಗಳು ರಾತ್ರಿ ಬರುವುವು, ಕಪಿ ನಾಡುಹಂದಿಗಳು ಹಗಲು ಬರುವುವು. ದನ, ಕರುಗಳು ಸರ್ವಸಮಯದಲ್ಲಿಯೂ! ಮತ್ತೆ ಇಲಿ, ಹೆಗ್ಗಣ, ಹಕ್ಕಿಗಳಿಂದ ಆಗುವ ನಷ್ಟವೆಷ್ಟೋ! ಇಷ್ಟೆಲ್ಲ ಆದ ಮೇಲೆ, ಕೊಯ್ಯುವಾಗ ಅಥವಾ ಕೊಯ್ಲು ಗದ್ದೆಯಲ್ಲೇ ಹಾಸಿರುವಾಗ ಮಳೆ ಸುರಿದರೆ ಅರ್ಧಕ್ಕರ್ಧ ನಷ್ಟ. ಈ ಎಲ್ಲ ಕಠಿಣ ಸೋಪಾನಗಳನ್ನು

ಉತ್ತರಿಸಬೇಕು ಅದೂ ಕಡುಬಡತನದಲ್ಲಿ, ಅನಾರೋಗ್ಯದಲ್ಲಿ. ಈ ಮಹಾಪರೀಕ್ಷೆಯಾದ ಅನಂತರ ಒಂದೆರಡು ತಿಂಗಳು ಸ್ವಲ್ಪ ವಿರಾಮವಾಗಿರುವುದು ತಪ್ಪೇ?

ತಿಮ್ಮಯ್ಯನು ಹಾಗೆಯೇ ಮುಂದೆ ಮುಂದೆ ನಡೆದನು. ಬಿಸಿಲು ಗದ್ದೆಗಳಿಂದ ಮೇಲಕ್ಕೆ ಏರುತ್ತಾ ಇತ್ತು. ಅಲ್ಲೇ ದೂರದಲ್ಲಿ ಒಂದು ಗದ್ದೆಯಲ್ಲಿ ಕಪ್ಪಾಗಿ ಏನೋ ನಿಂತಿದ್ದುದನ್ನು ತಿಮ್ಮಯ್ಯನು ಫಕ್ಕನೆ ಕಂಡು, "ಇದರ ಸಾವು, ಮಣ್ಣು ತಿಂಧೋಗ!" ಎಂದು ಬೊಬ್ಬೆ ಹೊಡೆಯುತ್ತ ಆ ಕಡೆಗೆ ಓಡಿದನು. ಅಲ್ಲಿ ಎರಡು ಸಾಕಿದ ಹಂದಿಗಳು ಮನಸೋ ಇಚ್ಛೆ ಭತ್ತದ ತೆನೆಗಳನ್ನು ಮೇಯುತ್ತಿದ್ದುವು. ಇವು ತಿನ್ನುವುದು ಒಂದು ಪಾಲಾದರೆ ಮೆಟ್ಟಿ ಹಾಳು ಮಾಡುವುದು ಮೂರು ಪಾಲು. ಹಂದಿಗಳು ತಿಮ್ಮಯ್ಯನನ್ನು ನೋಡಿದೊಡನೆಯೇ ಹುಚ್ಚುಹುಚ್ಚಾಗಿ ಓಡಿಹೋದುವು. ಆ ಹಂದಿಗಳು ಬೇಕನ ಮನೆ ಸಿಂಗಪ್ಪನವು ಎಂದು ತಿಮ್ಮಯ್ಯನಿಗೆ ತಿಳಿದಿತ್ತು. ಹಿಂದಿನ ದಿನವೂ ಬಂದಿದ್ದುವು. ಆಗ ಅವುಗಳನ್ನು ಓಡಿಸಿ, ಸಿಂಗಪ್ಪನಲ್ಲಿಗೆ ಹೋಗಿ ದೂರು ಹೇಳಿದ್ದನು. ಆದರೆ ಸಿಂಗಪ್ಪನು ಸ್ವಲ್ಪ ಠೇಂಕಾರಿ. "ಬಂದರೆ ಬಂತು, ಅವನ್ನೇನು ಪಾರ ಕಾಯುವುದೇ ನಮ್ಮ ಕೆಲಸವೋ?" ಎಂದಿದ್ದನು ಗಡುಸು ದನಿಯಲ್ಲಿ.
"ಹಾಗೆ ಹೇಳಿದರೆ ಆಗುವುದೇ? ಸ್ವಲ್ಪ ಗೂಡೊಳಗೆ ಕಟ್ಟಿ ಹಾಕಿ!" ಸಿಂಗನು ಮುಖ ತಿರುಗಿಸಿಕೊಂಡು ತೋಟದ ಕಡೆಗೆ ಹೋದನು.

ಮರುದಿನವೂ ಅವೇ ಹಂದಿಗಳು ಬಂದು ಮೇಯುತ್ತಿದ್ದರೆ ಯಾರಿಗೆ ತಾನೆ ಕೋಪೋದ್ರೇಕವಾಗುವುದಿಲ್ಲ? ತಿಮ್ಮಯ್ಯನು "ಇವನ ಮನೆ ಹಾಳಾಗ. ಮರ್ಯಾದೆಲಿ ಹೇಳಿದರೆ ಇವನಿಗೆ ತಿಳಿಯೋದಿಲ್ಲ" ಎಂದು ಶಪಿಸುತ್ತ ಸಿಂಗಪ್ಪನಲ್ಲಿಗೆ ಹೋದನು.
"ನಿಮ್ಮ ಹಂದಿಗಳು ಇವತ್ತು ಕೂಡ ಬಂದಿದ್ದುವು; ಲೂಟಿಯೇ ಲೂಟಿ."
"ಒಳ್ಳೇದಾಯ್ತು, ಹಿಡಿದು ದೊಡ್ಡಿಗೆ ಹಾಕಬಹುದಲ್ಲ!" ಎಂದನು ಸಿಂಗಪ್ಪ.
"ನೀವು ಹಾಗೆಲ್ಲ ಕಾನೂನು ಮಾತಾಡಿದರೆ ನಡೀಲಿಕ್ಕಿಲ್ಲ. ಹಂದಿಗಳನ್ನು ಕಟ್ಟಿ ಹಾಕಿ, ಕುತ್ತಿಗೆಗೆ ಬಡಿಗೆ ಕಟ್ಟಿ" (ತ್ರಿಕೋಣಾಕಾರವಾಗಿ ಕೋಲುಗಳನ್ನು ಕೊರಳಿಗೆ ಕಟ್ಟುತ್ತಾರೆ. ಆಗ ಹಂದಿಗೆ ಬೇಲಿ ಸಂದಿನೊಳಗೆ ನುಗ್ಗಿ ಗದ್ದೆಯೊಳಗೆ ಹೋಗಲು ಆಗುವುದಿಲ್ಲ).
"ನನಗೆ ಹಂದಿಯನ್ನು ಸಾಕುವ ವಿಷಯ ನೀನೇನು ಬುದ್ಧಿ ಹೇಳಬೇಕಾಗಿಲ್ಲ."
"ಹಾಗಾದ್ರೆ, ಇನ್ನೊಂದ್ಸಲ ಬರಲಿ. ಕಾಲ್ಹೊಡೆದು ಮುರೀದೇ ಇದ್ರೆ."
"ಏನದು ನಮ್ಮ ಮನೆಗೆ ಬಂದು ಎಷ್ಟದು ನಿನ್ನ ಜೋರು? ನಡೀ ಹೊರಗೆ!" ಎಂದು ಅಬ್ಬರಿಸಿದನು, ಸಿಂಗಪ್ಪನ ಪ್ರಾಯದ ಮಗ ಬೆಳ್ಯಪ್ಪನು.
"ನಿಮಗೆ ಪಾಠ ಕಲಿಸದೇ ಇದ್ರೆ ನೋಡಿ."
"ಬಹಳ ಕಲಿಸುವನಂತೆ. ಕೆಲಸ ನೋಡು, ಹೋಗೋಗು" ಎಂದರು ತಂದೆ ಮಕ್ಕಳಿಬ್ಬರೂ ತಾತ್ಸಾರದಿಂದ.

ತಿಮ್ಮಯ್ಯನು ಅಪಮಾನದಿಂದಲೂ ಸಿಟ್ಟಿನಿಂದಲೂ ಹಿಂತಿರುಗಿದನು. "ಇನ್ನೊಂದು ಸಲ ಬಂದರೆ, ಆ ಹಂದಿಗಳ ಹುಟ್ಟಿದ ಹಬ್ಬವನ್ನೇ ಮಾಡಿಬಿಡುತ್ತೇನೆ. ಇವನಿಗೆ ಯಾಲಕ್ಕಿ ಮಾರಿ ಸ್ವಲ್ಪ ಹಣ ಜಮೆಯಾಗಿದೆಯೆಂದು ಇಷ್ಟು ಕೋಡು! ಮೂರು ವರ್ಷದ ಹಿಂದೆ ಮಳೆ ಹಿಡಿದಾಗ, ನನ್ನಿಂದ ದಮ್ಮಯ್ಯ ಹಾಕಿ ಬತ್ತ ಸಾಲ ತೆಗೆದುಕೊಂಡು ಹೋದ ಅಲ್ಪನಿಗೆ ಈಗ ಎಷ್ಟು ಸೊಕ್ಕು ಅಬ್ಬ!" ಎಂದು ಯೋಚಿಸುತ್ತ ತಿಮ್ಮಯ್ಯನು ಅವಡು ಕಚ್ಚಿದನು.

ಸೂರ್ಯನು ಮುಳುಗಿದನು. ಚಳಿಗಾಲದಲ್ಲಿ ಸಮಯ ಬಹಳ ಬೇಗ ಓಡುವುದು. ಬೇಗ ಊಟ ಮಾಡಿ ಗದ್ದೆಗೆ ಗಸ್ತು ತಿರುಗುವ ಕೆಲಸಕ್ಕೆ, ಕಾಡು ಹಂದಿಗಳನ್ನು ಅಟ್ಟುವ ಕೆಲಸಕ್ಕೆ ತಿಮ್ಮಯ್ಯನು ಹೋದನು. ಕಾಡು ಹಂದಿಗಳನ್ನು ಬೊಬ್ಬೆ ಹೊಡೆದು ಓಡಿಸಬಹುದು, ಪೆಟ್ಟು ಹೊಡೆದು ಗಾಯಗೊಳಿಸಬಹುದು. ನಾಡು ಹಂದಿಗಳನ್ನು ಹಾಗೆ ಮಾಡಬಹುದಾದರೂ ಆ ಹಂದಿಗಳ ಮಾಲಿಕರ ತಲೆಗಳಲ್ಲಿ ಹಂದಿಯ ಲದ್ದಿಯೇ ತುಂಬಿದ್ದರೆ ಮಾಡುವುದೇನು? ಅವರು ನಿಷ್ಠುರವಾಗಿ ಜಗಳಕ್ಕೆ ಇಳಿಯುತ್ತಾರೆ. ತಿಮ್ಮಯ್ಯನು ಗದ್ದೆಯ ಮಧ್ಯದಲ್ಲಿ ಕಟ್ಟಿದ ಅಟ್ಟಣಿಗೆಯಲ್ಲಿ (ಹುಲ್ಲು ಮಾಡು, ಗೋಡೆಯಿಲ್ಲ. ಎತ್ತರದಲ್ಲಿ ನಾಲ್ಕು ಹಲಗೆಗಳನ್ನು ಜೋಡಿಸಿ, ಅಲ್ಲಿ ಮಲಗಲು ಏರ್ಪಾಡು. ಅಡಿಯಲ್ಲಿ ಬೆಂಕಿ ಉರಿಯಲು ಒಂದು ಒಲೆ) ಬೆಂಕಿ ಹಾಕಿ ಟಿನ್ನು ಬಡಿಯುತ್ತಾ ಕುಳಿತುಕೊಂಡನು. ಆದರೆ ಹಗಲೂ ರಾತ್ರಿಯೂ ಒಂದೇ ಸವನೆ ದುಡಿಯುವುದು ಯಾರಿಂದ ತಾನೇ ಸಾಧ್ಯ? ಮಧ್ಯರಾತ್ರಿಯ ಅನಂತರ, ಆ ಶಾಂತ ಸಮುದ್ರ ಮಧ್ಯದ ದ್ವೀಪದಲ್ಲಿ ಅವನು ನಿದ್ರೆ ಮಾಡಿದನು. ಹೊರಗೆಲ್ಲ ಚಳಿಯು ಮೂಳೆಯನ್ನು ನಡುಗಿಸುವಷ್ಟು ಇತ್ತು. ಬೆಂಕಿಯ ಉಷ್ಣವನ್ನೂ ಲೆಕ್ಕಿಸದು ಆ ಚಳಿ. ಅಭ್ಯಾಸ ಬಲದಿಂದಲೇ ತಿಮ್ಮಯ್ಯನು ಅಲ್ಲಿ ಮಲಗಿದನು. ಆದರೆ ಇದೇನು? ಪುನಃ ಅವೇ ಹಂದಿಗಳು ಬಂದು, ಬೇರೆ ಗದ್ದೆಗಳನ್ನು ತಿಂದು ಹಾಳು ಮಾಡತೊಡಗಿದುವು! ಹಠಾತ್ತಾಗಿ ತಿಮ್ಮಯ್ಯನಿಗೆ ಈ ಸ್ವಪ್ನ ಕಂಡು ಎಚ್ಚರವಾಯಿತು. ದಣಿದು ಮಲಗಿದ್ದುದರಿಂದ ನಿದ್ರೆಯು ಬಲವಾಗಿಯೇ ಹಿಡಿದಿತ್ತು. ಕಣ್ಣು ತೆರೆಯುವುದೂ ಕಷ್ಟವಾಯಿತು. ಆದರೂ ಬಲಾತ್ಕಾರದಿಂದ ಎದ್ದು ಕಣ್ಣುಜ್ಜಿ ಸುತ್ತಲೂ ನೋಡಿದನು. ಕೃಷ್ಣ ಪಕ್ಷ ಪ್ರಾರಂಭದ ಚಂದ್ರನು ಪಶ್ಚಿಮ ದಿಗಂತದ ಕಡೆಗೆ ಹೊರಳಿದ್ದನು. ಮಂದ ಪ್ರಕಾಶ ಆ ಗದ್ದೆಯ ಸಮುದ್ರದ ಮೇಲೆ ಹಬ್ಬಿತ್ತು. ಆಕಾಶ ಸ್ವಚ್ಛ, ಪೂರ್ವ ದಿಗಂತ ಪ್ರಭಾಮಯ. ಟಿನ್ನು ಹೊಡೆದು ಗಲಾಟೆ ಎಬ್ಬಿಸಿದನು ತಿಮ್ಮಯ್ಯ. ಜತೆಯಲ್ಲಿದ್ದ ಬಡಕಲು ನಾಯಿ ಮಲಗಿದಲ್ಲಿಂದಲೇ "ವೌ ವೌ" ಎಂದು ಬಗುಳಿತು. ಅವನು ತೃಪ್ತನಾಗದೇ ನಡುಗುತ್ತ ಗದ್ದೆಗೆ ಇಳಿದನು. ಹಿಂದಿನ ಸಂಜೆಯಲ್ಲಿ ನೋಡಿದ ಗದ್ದೆಗೇ ಸೀದಾ ಹೋದನು. ಅವೇ ಹಂದಿಗಳು ಏನನ್ನೂ ತಿಳಿಯದವುಗಳಂತೆ ಬಕಬಕನೆ ಮೇಯುತ್ತಿದ್ದುವು. ಎಷ್ಟು ತಿಂದುವೋ ಇನ್ನೆಷ್ಟು ಹಾಳುಮಾಡಿದುವೋ ಒಂದು ಭಾಗವಿಡೀ ಬೋಳಾಗಿದೆ. ನಖಶಿಖಾಂತ ತಿಮ್ಮಯ್ಯ ನಡುಗಿದನು. ಓಡಲು

ತೊಡಗಿದ ಹಂದಿಗಳ ಹಿಂದೆಯೇ ತಾನೂ ಓಡುತ್ತ, ಕೈಯಲ್ಲಿದ್ದ ಬಡಿಗೆಯಿಂದಲೇ ಬೀಸಿ ಬೀಸಿ ಹೊಡೆದನು. ಒಂದು ಹಂದಿಯು ತಪ್ಪಿಸಿಕೊಂಡು ಓಡಿಹೋಯಿತು. ಪೆಟ್ಟು ತಗಲಿದ ಇನ್ನೊಂದು ಓಡಲಾರದೇ ಓಡುತ್ತಿತ್ತು. "ಹೆಣ, ಇನ್ನು ಬರುತ್ತಿಯಾ?" ಎಂದು ಅದಕ್ಕೆ ಹೊಡೆದು, ಕುಂಟುಕಾಲನ್ನು ಮುರಿದೇ ಬಿಟ್ಟನು. ಹಂದಿಯು ನೋವಿನಿಂದ ವಿಕಾರವಾಗಿ ಕೂಗುತ್ತ – ಹರಿಶ್ಚಂದ್ರನನ್ನು ಬಲೆಗೆ ಕೆಡವಿ ವಿಶ್ವಾಮಿತ್ರಾಶ್ರಮಕ್ಕೆ ತೆರಳಿದಂತೆ ಗೂಡಿನೆಡೆಗೆ ತೆವಳುತ್ತಾ ಹೋಯಿತು. ಆದರೆ ಮುಂದೆ ಹೋಗಲಾರದೇ ಅಲ್ಲೆ ಕುಸಿದುಬಿತ್ತು. ಕರ್ಕಶವಾಗಿ, ಇಡೀ ಶಾಚಿತ ವಾತಾವರಣದಲ್ಲಿ ಒಂದು ಸುಂಟರಗಾಳಿಯು ಎದ್ದಂತೆ ಅರಚುತ್ತ, ಆ ಗದ್ದೆಯ ಮೇಲೆ ಬಿದ್ದು ಹೊರಳುತ್ತಿತ್ತು.

ತನ್ನ ಗದ್ದೆಯಲ್ಲಿ ಗಸ್ತು ತಿರುಗುತ್ತಿದ್ದ ಸಿಂಗಪ್ಪನಿಗೆ ಈ ಹಂದಿಯ ಆರ್ತಸ್ವರ ಕೇಳಿಸಿತು. ಕೂಡಲೇ ಹಿಂದಿನ ಸಾಯಂಕಾಲದ ದೃಶ್ಯ ಹೊಳೆಯಿತು. ಕ್ರೋಧದಿಂದ ನಡುಗುತ್ತ, ಒಂದು ದೊಣ್ಣೆಯನ್ನು ಹಿಡಿದು, ಆ ಹಂದಿಯು ಕೂಗುವ ಕಡೆಗೂ ಹೋಗದೆ, ತಿಮ್ಮಯ್ಯನ ಅಟ್ಟಣಿಗೆಯೆಡೆಗೇ ಓಡಿದನು ಅವನನ್ನೇ ಕೊಂದುಬಿಡುವವನಂತೆ.
"ನನ್ನ ಹಂದಿಯನ್ನು ಹೊಡೆಯಲು ನೀನಾರೋ?"
"ನನ್ನ ಗದ್ದೆಯನ್ನು ಮೇಯಿತು, ಹೊಡೆದೆ." ಇಲ್ಲಿಂದ ಮಾತು ಅಶ್ಲೀಲಕ್ಕಿಳಿಯಿತು. ಹೆಂಡಿರನ್ನು ಮಕ್ಕಳನ್ನು, ಹುಟ್ಟಿದವರನ್ನು, ಹುಟ್ಟದವರನ್ನು ಎಲ್ಲರನ್ನೂ ವಿಧವಿಧವಾಗಿ ಬಯ್ದುಕೊಳ್ಳುತ್ತಾ ಪ್ರಾತರ್ಗಾನ ಸಾಗಿತು. ಕೆಲವೇ ನಿಮಿಷದಲ್ಲಿ ಸಿಂಗಪ್ಪನ ಮಗ – ಹುಡುಗರಕ್ತದ ಗರ್ವದ ಬೆಳ್ಯಪ್ಪನೂ ಅಲ್ಲಿಗೆ ಕತ್ತಿ ಸಮೇತ ಬಂದನು. ಹೊಡೆದಾಟವೋ ಖೂನಿಯೋ ಆಗುವುದರಲ್ಲಿದ್ದುದನ್ನು ನೆರೆಕರೆಯವರು, ಈ ಗಲಾಟೆ ಕೇಳಿ ಸೇರಿದವರು ತಪ್ಪಿಸಿದರು. ಸಿಂಗಪ್ಪನದೇ ತಪ್ಪು. ಅವನು ತಿಮ್ಮಯ್ಯನಿಗೆ ನಷ್ಟದ ಪಾಲೆಂದು ಒಂದು ಬಟ್ಟಿ ಬತ್ತ ತೆರಬೇಕೆಂದು ಅವರು ವಿಧಿಸಿದರು.

"ನಷ್ಟ ಕೊಡೋದಿರಲಿ; ನನ್ನ ಹಂದಿಯನ್ನು ಹೊಡೆದು ಹಾಕಿದ್ದಕ್ಕೆ ನೀನು ಜುಲ್ಮಾನು ತೆರಬೇಕು. ನಾನು ಕೋರ್ಟಿಗೆ ಹೋಗುತ್ತೇನೆ" ಎಂದನು ಯಾಲಕ್ಕಿ ಮದದ ಸಿಂಗಪ್ಪ.
"ಅಷ್ಟೆಲ್ಲ ದೂರ ಹೋಗಬೇಡಿ ಗೌಡ್ರೆ. ಇಷ್ಟು ಚಿಕ್ಕ ವಿಷಯಗಳಿಗೆ ಕೋರ್ಟು ಕಛೇರಿ ಹತ್ತಿ, ದಾವಾ ಜುಲ್ಮಾನು ಎಂದು ಯಾಕೆ ಕೂಗುತ್ತೀರಿ" ಎಂದು ಇತರರು ಬೋಧಿಸಿದರು. ಪ್ರಾತಃಕಾಲದ ತಂಗಾಳಿಯು ಬೀಸಿ, ಈ ಜ್ವಾಲೆಯನ್ನು ಆಗ ಶಾಂತ ಮಾಡಿತು. ಕಾಲು ಮುರಿದ ಹಂದಿಯು ಮಾತ್ರ "ಕಿರ್ರೋ" ಎಂದು ದಿಗ್ಭಿತ್ತಿಗಳನ್ನು ಭೇದಿಸುವಂತೆ ಅರಚುತ್ತಿದ್ದಿತು.
ಬೆಳ್ಯಪ್ಪನಿಗೆ ಈ ಅವಮಾನ ತಡೆಯಲಾಗಲಿಲ್ಲ. ಮಿಲಿಟರಿಗೆ ಹೋಗಿ ಬಂದವನು. ಮುಂದೆ ಒಂದೇ ತಿಂಗಳಲ್ಲಿ ಮದುವೆಯಾಗುವ ಮೀಸೆ ಹೊತ್ತ ಗಂಡು. ಇವನ ಮುಂದೆ ಆ ತಿಮ್ಮಯ್ಯ ಎಷ್ಟರವನು! ಶುದ್ಧ ಪೊರ್ಕಿ. ಇಷ್ಟು ಸೊಕ್ಕಿನಿಂದ ಜಗಳಾಡಿದನಲ್ಲಾ. ಈ ಮೂರು ಕಾಸಿನ ಮನುಷ್ಯನಿಗೆ ಈ ವರ್ಷ ನಾಲ್ಕು ಕಾಳು ಬತ್ತ ಹೆಚ್ಚು ಬಂದಿದೆಯೆಂದು ಪಿತ್ತ ತಲೆಗೆ ಏರಿದೆ. ಇವನಿಗೆ ಹೇಗಾದರೂ ಪಾಠ ಕಲಿಸಬೇಕು ಎಂದು ಯೋಚಿಸುತ್ತ, ಕತ್ತಿ ಬೀಸಿ ಪುಟ್ಟ ಸಸಿಯೊಂದರ ಮೇಲೆ ತನ್ನ ಬಲ ಮತ್ತು ಕೋಪವನ್ನು ವ್ಯಕ್ತಪಡಿಸಿದನು. ಆ ಗಿಡವು ಬಳುಕಿ, ಸರ್ರನೆ ಜಾರಿ ಜೀವ ಉಳಿಸಿಕೊಂಡಿತು. ಮನೆಗೆ ತಂದು ಹಾಕಿದ್ದ, ಬೆಳ್ಯಪ್ಪನ ಮದುವೆಯ ದಿನದ ಔತಣಕ್ಕೆಂದು ಮೀಸಲು ಇಟ್ಟಿದ್ದ ಹಂದಿಯು ಒಂದೇ ಸವನೆ ಕಿರಿಚುತ್ತಿತ್ತು. ಅದು ಒಂದೊಂದು ಸಲ ಅರಚುತ್ತಿದ್ದಂತೆಯೇ ಬೆಳ್ಯಪ್ಪನ ಕ್ರೋಧ ನೂರ್ಮಡಿಯಾಗಿ, ಚಂಡೆಬಡಿದಂತೆ ದೇವರು ಹೊತ್ತವನಿಗೆ ಆವೇಶ ಬರುವಂತೆ ಏರುತ್ತಿತ್ತು.

ಮುಂದೆ ಒಂದು ವಾರದಲ್ಲಿ ತಿಮ್ಮಯ್ಯನ ಗದ್ದೆಯೆಲ್ಲವನ್ನೂ ಕೊಯ್ದಾಯಿತು. ಕೊಯ್ಯುವಾಗ ಇತರ ಗದ್ದೆಗಳವರು ಸಹಾಯಕ್ಕೆ ಬರುವರು. ಹಾಗೆಯೇ ಇವನು ಅವರ ಗದ್ದೆಗಳನ್ನು ಕೊಯ್ಯುವಾಗ ಕೂಡುಗೆಲಸಕ್ಕೆ ಹೋಗಬೇಕು. ಆ ದಿನ ಯಾರ ಗದ್ದೆಯನ್ನು ಕೊಯ್ಯುವರೋ ಅವರ ಮನೆಯಲ್ಲಿ ಬಂದವರಿಗೆಲ್ಲ ಕೋಳಿಯ ಮೇಲೋಗರ ಔತಣ. ದೇವರ ಸಂಪೂರ್ಣ ದಯೆಯಿಂದ, ಮಳೇ ಬರುವುದಿರಲಿ, ಒಂದು ಹೂಮೋಡ ಕೂಡ ಆ ದಿನಗಳಲ್ಲಿ ಆಕಾಶದಲ್ಲಿ ಸುಳಿಯಲಿಲ್ಲ. ಪೈರುಗಳನ್ನು ಕೊಯ್ದಂತೆಯೇ ಒಣಗಲೆಂದು ಗದ್ದೆಗಳಲ್ಲಿ ಗುಂಪುಗುಂಪಾಗಿ ಹರಡುತ್ತಿದ್ದರು. ಒಂದೆರಡು ದಿನ ಈ ರೀತಿ ಒಣಗಿದ ರಾಶಿಗಳನ್ನು ಕಟ್ಟಿ ಹೊತ್ತುಕೊಂಡು ಹೋಗಿ ಮನೆಯ ಅಂಗಳಕ್ಕೆ (ಕಳಕ್ಕೆ) ಹಾಕುತ್ತಿದ್ದರು. ಈ ಹಿಂಡುಗಳನ್ನು ಕಳದಲ್ಲಿ ಆನೆಯಷ್ಟು ಎತ್ತರದ ಮೆದೆಗಳನ್ನಾಗಿ ಒಟ್ಟುತ್ತಾರೆ. ಈ ಕೆಲಸ ಮುಗಿದ ಮೇಲೆ ಒಕ್ಕಲು ಹಾಕಲು ಶುರುಮಾಡುವರು. (ಎಂದರೆ ಬತ್ತದ ಕಾಳುಗಳನ್ನು ಹುಲ್ಲಿನಿಂದ ಬೇರ್ಪಡಿಸಲು ಪೈರನ್ನು ಕಳದಲ್ಲಿ ಸಮವಾಗಿ ಹಾಸಿ, ಅದರ ಮೇಲೆ ಎಮ್ಮೆ ದನಗಳನ್ನು ಬಹಳ ಹೊತ್ತು ಚಲಾಯಿಸುವರು.) ಮೆದೆ ಒಟ್ಟಿ ಆದ ಮೇಲೆ ಮಳೆ ಬಂದರೂ ತೊಂದರೆಯಿಲ್ಲ. ತಿಮ್ಮಯ್ಯನ ಗದ್ದೆಯ ಮುಕ್ಕಾಲು ಅಂಶ ಆ ರಾತ್ರಿಗೆ ಹೊತ್ತು ಮುಗಿಯಿತು. ಇನ್ನುಳಿದ ಭಾಗ ಗದ್ದೆಯಲ್ಲಿಯೇ ಉಳಿಯಿತು. ಕೊಯ್ದಾಗಿದ್ದಿತ್ತು, ಮರುದಿವಸ ಸಾಯಂಕಾಲಕ್ಕೆ ಅವನ ಹೆಚಿಡತಿಯೊಬ್ಬಳಿಂದಲೇ ಎಲ್ಲವೂ ಹೊತ್ತು ಮುಗಿದೀತು. ಮಾರನೆಯ ದಿನ ಅವನು ಕೂಡುಗೆಲಸಕ್ಕೆ ಬೇರೊಬ್ಬರ ಗದ್ದೆಗೆ ಹೋಗಬೇಕಾಗಿತ್ತು. ಮೂರು ದಿವಸಗಳ ಮೇಲೆ ಒಕ್ಕಲು ಹಾಕಲು ಪ್ರಾರಂಭಿಸಬೇಕು. ಆಗ ಸ್ವಾಮಿಯವರಲ್ಲಿಂದ ಯಾರನ್ನಾದರೂ ಬರಹೇಳಲು (ಸೋಮವಾರವಾದುದರಿಂದ) ನಾಡಿದ್ದು ಸಂತೆ ದಿನ ಮಡಿಕೇರಿಗೆ ಹೋಗಬೇಕು ಎಂದು ಯೋಚನೆ ಮಾಡುತ್ತ, ತೃಪ್ತಿಯಿಂದ ತಿಮ್ಮಯ್ಯನು ನಿದ್ರಿಸಿದನು. ಇನ್ನು ಗದ್ದೆಯಲ್ಲಿ ಮರಗಟ್ಟುವ ಆವಶ್ಯಕತೆಯಿರದಿದ್ದುದರಿಂದ ಅವನು ಮನೆಯಲ್ಲಿಯೇ ಮಲಗಿದನು.

ಹಂದಿಯ ಮುರಿದ ಕಾಲು ಕೊಳೆತು, ಅರಚಿ ಬೆಳ್ಯಪ್ಪನ ಕೋಪಾಗ್ನಿಗೆ ಕೊಬ್ಬನ್ನು ಎರಚಿ ಸತ್ತುಹೋಯಿತು. ಬೆಳ್ಯಪ್ಪನಿಗೆ ಕೋಪ ತಡೆಯಲಾಗಲಿಲ್ಲ. ಮಲಗಿದರೆ ನಿದ್ರೆ ಬರಲೊಲ್ಲದು. "ಈ ಭಿಕಾರಿಗೆ ಇಷ್ಟು ಸೊಕ್ಕೇ? ಅವನಿಗೆ ಪಾಠ ಕಲಿಸಲೇಬೇಕು. ಹೇಗೆ, ಹೇಗೆ" ಎಂದು ಯೋಚಿಸುತ್ತ ಹೊರಳುತ್ತಿದ್ದನು. ಪ್ರತಿ ನಿಮಿಷವೂ ಅವನಿಗೆ "ಹೇಗೆ ಹೇಗೆ" ಎಂದು ಮೈಗೆ ಮುಳ್ಳು ಚುಚ್ಚಿದಂತೆ ಎನಿಸುತ್ತಿತ್ತು. ಜತೆಗೆ ಆ ಹಂದಿಯ ಒರಲುವಿಕೆ ಆಗಾಗ ಕಿವಿಯಲ್ಲಿ ಕೇಳಿಸಿದಂತೆ ಆಗಿ, ಅವನಿಗೆ ಶಾಂತಿಯೇ ಇಲ್ಲದಾಯಿತು. ಮದುವೆಗಿಟ್ಟ ಹಂದಿ ಕೊಳೆತು ಸತ್ತಿತಲ್ಲ, ಇನ್ನು ಮಲಗಿದರೆ ಮನೆಯೇ ತಲೆಯ ಮೇಲೆ ಬಿದ್ದೀತು. ಹುಚ್ಚು ಹಿಡಿದೀತು ಎಂದು ಅಂಗಳಕ್ಕೆ ಓಡಿದನು ಬೆಳ್ಯಪ್ಪ. ಚಂದ್ರ ತಲೆಯ ಮೇಲೆ ತೇಲುತ್ತಿದ್ದನು. ಅಂಗಳದಲ್ಲಿದ್ದ ನಾಯಿಯು ಬಾಲ ಅಲ್ಲಾಡಿಸುತ್ತ ಹತ್ತಿರ ಬಂದಿತು. ಚಳಿಯು ರಕ್ತವನ್ನು ಹೆಪ್ಪುಗಟ್ಟಿಸುವಷ್ಟಿತ್ತು. ಆದರೆ ದೇಹದೊಳಗೆ ಕೋಪಾನಲವಿದೆಯಷ್ಟೆ! ಬೆಂಕಿ ಕಡ್ಡಿ ಗೀರಿ ಬೀಡಿ ಹೊತ್ತಿಸಿದರೆ ಅದು ಶಾಖ ಸಾಕಾಗದೆ ತಣ್ಣಗಾಯಿತು. ಬೆಳ್ಯಪ್ಪನು ಅಂಗಳ ಬಿಟ್ಟು ಓಡಿದನು. ನಾಯಿಯು ಹಿಂಬಾಲಿಸಿತು. "ಸೂ" ಎಂದು ಅದಕ್ಕೆರಡು ಒದ್ದು, ಉಗುಳಿ ಮನೆಗೆ ಅಟ್ಟಿದನು. ಅದು "ಕುಂಯ್ ಕುಂಯ್" ಎಂದು ಅರಚುತ್ತ ಹಿಂದಕ್ಕೆ ಜಿಗಿಯಿತು. ಒಂದು ಗುಹೆಯೊಳಗೆ ಹುಗುವವನಂತೆ, ಹುಚ್ಚನಂತೆ ಉದ್ವಿಗ್ನ ಬೆಳ್ಯಪ್ಪನು ತಿಮ್ಮಯ್ಯನ ಕಳದ ಕಡೆಗೆ ಧಾವಿಸಿದನು. ಬೆಂಕಿ ಕಡ್ಡಿಗೀರಿ ಆ ಹುಲ್ಲಿಗೆ ಹಿಡಿದನು. ಅವನ ಬೀಡಿಯನ್ನು ಹೊತ್ತಿಸಲು ನಾಚಿದ ಆ ಬೆಂಕಿಯು ಈಗ ಇಬ್ಬನಿಯಿಂದ ತಣ್ಣಗಾದ ಒಣಹುಲ್ಲಿಗೆ ಕೂಡಲೇ ಹಿಡಿಯಿತು. ಬೆಳ್ಯಪ್ಪನು ಹಿಂದೆ ಹಾರಿದನು, ಓಡಿ ಹೋಗಿ ಪುನಃ ಮಲಗಿದನು. ಆದರೂ ತೃಪ್ತಿಯಿಲ್ಲ; ಅಂತೂ ಬೆಳಗಿನ ಝಾಮಕ್ಕೆ ಸ್ವಲ್ಪ ಜೊಂಪು ಹಿಡಿಯಿತು.

ಆ ಬೆಂಕಿಯು ಹಬ್ಬಿ ಅಲ್ಲಿಂದ ಹಾರಿದ ಒಂದು ಕಿಡಿಯು ತಮ್ಮ ಮನೆಯ ಮಾಡಿನ ಹುಲ್ಲಿಗೆ ಸಿಡಿಯಿತು. ಇಡೀ ಮನೆಯೇ ಉರಿಯುತ್ತಿದೆ. "ಅಯ್ಯೋ ಎಲ್ಲಿಗೆ ಹೋಗಲಿ, ಹೀಗೆ ಆಗಬೇಕೇ?" ಏಳಬೇಕೆಂದು ಪ್ರಯತ್ನಿಸುತ್ತಾನೆ, ಆಗುವುದಿಲ್ಲ. ಕೈಕಾಲುಗಳನ್ನು ಯಾರೋ ಮಂಚಕ್ಕೆ ಕಟ್ಟಿ ಹಾಕಿದ್ದಾರೆ. "ನಾನು ಸುಟ್ಟು ಹೋಗುತ್ತಿದ್ದೇನೆ, ಬದುಕಿಸಿ" ಎಂದು ಕೂಗುತ್ತಾನೆ. ತಿಮ್ಮಯ್ಯನು ಅಲ್ಲಿ ಈ ಸ್ಥಿತಿಯನ್ನು ನೋಡಿ ನಗುತ್ತಾನೆ. "ಅಯ್ಯೋ ಹೀಗೆ ಮಾಡಿದೆನಲ್ಲ, ಹೀಗೆ ಮಾಡಬಹುದೇ" ಗಾಬರಿಯಿಂದಲೂ ಉದ್ವೇಗದಿಂದಲೂ ಹೊದಿಕೆಯನ್ನು ಒದ್ದು ಬೆಳ್ಯಪ್ಪನು ಏಳುತ್ತಾನೆ. ಬೆಳಕು ಹರಿಯುವುದರಲ್ಲಿತ್ತು. ದೂರದಿಂದ ಏನೋ ಒಂದು ಗಲಭೆ ಕೇಳಿಸುತ್ತಿತ್ತು. ಬೆಳ್ಯಪ್ಪನು ಮಂಕನಂತೆ ಕುಕ್ಕರಿಸಿದನು. ಮನೆಯಲ್ಲಿ ಅವನ ಸಣ್ಣ ತಮ್ಮನ ಹೊರತಾಗಿ ಯಾರೂ ಇರಲಿಲ್ಲ.

ಒಣ ಹುಲ್ಲಿಗೆ ಬೆಳ್ಯಪ್ಪ ಹಿಡಿದ ಆ ಬೆಂಕಿಯು, ಒಂದು ಕ್ಷಣದಲ್ಲಿ ಅಗಲಗಲವಾಗಿ ವ್ಯಾಪಿಸಿತು. ಇನ್ನೆರಡು ನಿಮಿಷಗಳಲ್ಲಿಯೇ ಜೋರಾಗಿ ಹಬ್ಬಿತು. ಚಳಿಯೆಂದು ಆ ಹುಲ್ಲಿನ ಬಣವೆಯಲ್ಲಿ ಮುದುರಿ ಮಲಗಿದ್ದ ಹೆಣನಾಯಿಯು ಹೆದರಿ ನೆಗೆಯಿತು, ಅತ್ತಿತ್ತ ಓಡಿತು, ಒಂದೇ ಉಸುರಿಗೆ ಬಗುಳಲು ಹೊರಟಿತು; ಮನೆಯ ಬಾಗಿಲ ಹತ್ತಿರವೇ ನಿಂತು ಬಗುಳಿತು. ಮನೆಯ ಅಂಗಳವೇ ಕಳ. ಪತ್ತಾಯದೊಳಗೆ (ಕಣಜ) ಬತ್ತ ತುಂಬುವುದರವರೆಗೂ ರೈತರಿಗೆ ಸರಿಯಾಗಿ ನಿದ್ರೆಯಿಲ್ಲ. ತಿಮ್ಮಯ್ಯನು ನಾಯಿ ಬಗುಳುವ ಶಬ್ದ ಕೇಳಿ ಕೂಡಲೇ ಎದ್ದು ಹೊರಗೆ ಬಂದನು ದನವೋ ಏನಾದರೂ ಬಂದು ಕಳದಿಂದ ತೆನೆಗಳನ್ನು ತಿನ್ನುತ್ತಿದೆಯೋ ಎಂದು ನೋಡಲು. ಆದರೆ ಭಯಂಕರ ದೃಶ್ಯ. ಈ ಅಗ್ನಿರಾಕ್ಷಸನ ರುದ್ರ ತಾಂಡವ ನೋಡಿ ಅಲ್ಲೇ ಎದೆಯೊಡೆದು ಕುಸಿದು ಬಿದ್ದನು. ಒಂದೊಂದು ಕ್ಷಣವೂ ಬೆಂಕಿಯು ಜೋರುಜೋರಾಗಿ ಹಬ್ಬುತ್ತಿತ್ತು. ಹೆಂಡತಿಯನ್ನು ಬಡಿದು ಎಬ್ಬಿಸಿದನು. ಮಗಳನ್ನು ಕರೆದು ನೆರೆಮನೆಯವರನ್ನು ಕರೆದುಕೊಂಡು ಬರಲು ಅಟ್ಟಿದನು. ಉದ್ದದ ಬಡಿಗೆಯನ್ನು ಹಿಡಿದು, ಇಡೀ ಮೆದೆಯನ್ನು ಮಗುಚಲು ಪ್ರಯತ್ನಿಸಿದನು. ಆದರೆ ಆನೆಯೆತ್ತರದ ಹುಲ್ಲು ರಾಶಿ ಭಾರವಾಗಿಯೇ ಕುಳಿತಿತ್ತು. ಬತ್ತದ ಕಣಗಳು ಬೆಂಕಿ ತಾಕಿದಂತೆ ಅರಳಾಗಿ ನಾಲ್ಕೂ ಕಡೆಗೆ ಚಟ್ ಪಟ್ ಎಂದು ಸಿಡಿಯುತ್ತಿದ್ದುವು. ಬೆಂಕಿಯು ಸುಲಭದಲ್ಲಿ ಹಿಡಿತಕ್ಕೆ ಬರುವ ಹಾಗಿರಲಿಲ್ಲ. ಪೇಟೆ ಪಟ್ಟಣಗಳಲ್ಲಿರುವಂತೆ ಬೆಂಕಿ ನಂದಿಸುವ ಯಂತ್ರ ಅಲ್ಲಿ ಇಲ್ಲ. ಅಂತೆಯೇ ಬೆಂಕಿ ಬಿದ್ದಾಗ ಲಕ್ಷಗಟ್ಟಲೆ ರೂಪಾಯಿ ನಷ್ಟವೂ ಇಲ್ಲ. "ಇನ್ನು ಮನೆಗೆ ಬೆಂಕಿ ಹಿಡಿಯದಿದ್ದರೆ ಸಾಕು ದೇವರೇ" ಎಂದು ಮನೆಯ ಕಡೆಗಿದ್ದ ಹುಲ್ಲನ್ನು ತೆಗೆದು ದೂರ ಎಸೆಯುತ್ತಿದ್ದನು. ಅಷ್ಟರಲ್ಲಿ ನೆರೆಕರೆಯವರು ಅಲ್ಲಿ ಸೇರಿದರು. ಬೊಬ್ಬೆಯೇ ಬೊಬ್ಬೆ. ನೀರು ತಂದು, ಏಣಿ ಹಿಡಿದು ಹತ್ತಿ ಬೆಂಕಿಯ ಮೇಲೆ ಸುರಿದರು. ನೀರಿನಲ್ಲಿ ಅದ್ದಿದ ಹಳೇ ಹುಲ್ಲು ಕಂತೆಗಳನ್ನು ಬೆಂಕಿಯ ಮೇಲೆ ಎಸೆದರು. ಬಾಳೇ ಮರಗಳನ್ನು ಕಡಿದು, ಅವುಗಳ ಸೊಪ್ಪು ರೆಂಬೆಗಳನ್ನೂ (ಪಟ್ಟೆ) ಎಸೆದರು. ಮಣ್ಣನ್ನು ಅಗೆದು ಬೆಂಕಿಯ ಮೇಲೆ ಎರಚಿದರು. ಈ ಹವಿಸ್ಸುಗಳನ್ನೆಲ್ಲ ನುಂಗಿ ಶಿಖಾರಾಕ್ಷಸನು ತನ್ನ ಉದರಂಭರಣೆ ಮಾಡಿಯೇ ಬಿಟ್ಟನು. ಸೂರ್ಯ ಸರಿಯಾಗಿ ಕಾಣುವವರೆಗೂ ಈ ಯುದ್ಧ ನಡೆದೇ ಇತ್ತು. ಆ ಹುಲ್ಲು ಮೆದೆ ಮುಕ್ಕಾಲು ಪಾಲಿಗಿಂತಲೂ ಹೆಚ್ಚು ಬೆಂದು ಹೋಗಿತ್ತು. ಮನೆಗೆ ಮಾತ್ರ ಬೆಂಕಿ ಹಿಡಿದು ಸರ್ವನಾಶವಾಗಲಿಲ್ಲವೆಂಬ ಒಂದೇ ತೃಪ್ತಿ. ಮಣ್ಣು, ಕಸ, ಮಸಿ, ಅರಳು ಇವುಗಳಿಂದ ತುಂಬಿ ಆ ಸ್ಥಳವು ಯುದ್ಧರಂಗದಂತೆ ಭೀಕರವೇ ಆಗಿತ್ತು. ಇನ್ನೂ ನಂದುತ್ತಲಿದ್ದ ಬೆಂಕಿಯು ವಿಷ (ಹೊಗೆ) ಕಾರುತ್ತಿತ್ತು. ತಿಮ್ಮಯ್ಯನು ಹುಚ್ಚು ಹಿಡಿದವನಂತೆ, ದೆವ್ವ ಬಡಿದವನಂತೆ ಮಂಕು ಕವಿದು, ಒಂದು ಮೂಲೆಯಲ್ಲಿ ಕುಕ್ಕರಿಸಿದನು.

"ಏನಾಯಿತು, ಹೇಗಾಗಿರಬಹುದು?" ಎಂದು ಪ್ರತಿಯೊಬ್ಬರೂ ಮಾತಾಡಲು ಪ್ರಾರಂಭಿಸಿದರು. ಸಿಂಗಪ್ಪನೂ ಅವನ ಹೆಂಡತಿಯೂ ಅಲ್ಲಿಗೆ ಬಂದಿದ್ದರು. "ಹೀಗಾಗಬಾರದಿತ್ತು," "ಅಯ್ಯೋ ಪಾಪ, ಒಳ್ಳೇ ಬೆಳೆ," "ಮುಖ್ಯ ದೇವರಿಗೆ ದಯವಿಲ್ಲ" ಎಂದು ಮಾತನಾಡುತ್ತ, ಕೊನೆಗೂ ಕಾಣದ ದೇವರ ಮೇಲೆ ಆ ಬೆಂಕಿಯ ತಪ್ಪನ್ನು ಹೊರಿಸಿದರು. ಹಳ್ಳಿಯಲ್ಲಿ ಒಂದು ಬರೆ (ಕಡಿದಾದ ಸ್ಥಳ) ಜರಿದರೆ, ಒಂದು ಮನೆಗೆ ಬೆಂಕಿ ಬಿದ್ದರೆ, ಒಂದು ಮಗು ಶೀತಜ್ವರದಿಂದ ಸತ್ತರೆ, ಅದಕ್ಕೆ ಕಾರಣವನ್ನು ದೆವ್ವ ಅಥವಾ ದೈವದಲ್ಲಿ ನೋಡುವರೇ ಹೊರತು, ಬೇರೆ ಏನಾದರೂ ಕಾರಣವಿರಬಹುದೆ ಎಂದು ವಿಚಾರಿಸುವುದೇ ಇಲ್ಲ. "ಯಾವುದೋ ಕೊಳ್ಳಿ ದೆವ್ವದ ಕಾಟ ಇದಾಗಿರಬೇಕು" ಎಂದು

ಆ ಮಹಾಸಭೆಯು, ಮಹಾನಿರ್ಧಾರಕ್ಕೆ  ಆ ಅಶುಭ ಪ್ರಾತಃಕಾಲದಲ್ಲಿ ಬಂದಿತು! ಆ ಪೀಡೆಯ ಉಪದ್ರವ ಇನ್ನೂ ಆಗದಂತೆ, ಹಳ್ಳಿಯ ದೈವಕ್ಕೆ ಎರಡೂ ಕಾಣಿಕೆ, ಮತ್ತು ಒಂದು ಹುಂಜದ (ಗಂಡುಕೋಳಿ) ಹರಕೆಯನ್ನು ತಿಮ್ಮಯ್ಯನಿಂದ ಹೇಳಿಸಿದರು.

"ನೋಡಿದೆಯಾ ಬೆಳ್ಳೀ, ತಿಮ್ಮಯ್ಯನಿಗೆ ಹೀಗಾಗಬಾರದಿತ್ತು" ಎಂದಳು ತಾಯಿ ನೀಲವ್ವ. ಬೆಳ್ಯಪ್ಪನಿಗೆ ಚೇಳು ಕಡಿದಂತೆ ಆಯಿತು.
"ಅಯ್ಯೋ ಪಾಪ. ಎಂಥಾ ಮುತ್ತಿನಂತಹ ಬೆಳೆ" ಬೆಳ್ಯಪ್ಪನಿಗೆ ಮೈಯ ಎಲುಬನ್ನೇ ಕುಲುಕಿದಂತೆ ಆಯಿತು.
"ಒಂದಿಷ್ಟಾದರೂ ಉಳಿಯಬೇಡವಾ?" ಎಂದು ಮುಂದುವರಿಸಿದಳು, ಗಂಜಿ ಬೇಯಿಸಲು ಮಡಿಕೆಯನ್ನು ಒಲೆಯ ಮೇಲೆ ಇಡುತ್ತಾ ನೀಲವ್ವ.
ಬೆಳ್ಯಪ್ಪನು ಮಂಚದ ಮೇಲೆ ಕುಳಿತಿದ್ದವನು ಎದ್ದು ಅಂಗಳಕ್ಕೆ ನಡೆದನು. ಸಿಂಗಪ್ಪನು ಗುದ್ದಲಿಯ ಕಾವನ್ನು ಸರಿಮಾಡುತ್ತ ಅಲ್ಲಿ ಬಿಸಿಲು ಕಾಯಿಸುತ್ತಿದ್ದನು.
"ತಿಮ್ಮಯ್ಯನಿಗೆ ಹೀಗಾಗಬೇಕಾ? ಎಂಥಾ ಹೊಡೆತ ಭೂತದ್ದು!" ಎಂದು ಅವನಿಂದಲೂ ಹೊರಟಿತು ಇನ್ನೊಂದು ಚೂಪಾದ ಬಾಣ.

ಬೆಳ್ಯಪ್ಪನು ಅಲ್ಲಿ ನಿಲ್ಲಲೂ ಆಗದೆ, ಕೂರಲೂ ಆಗದೆ ಮಂತ್ರ ಮುಗ್ಧನಂತೆ ಗದ್ದೆಗೆ ಇಳಿದನು. ಆ ಗದ್ದೆಗಳನ್ನು ಕೊಯ್ದು ಪೈರನ್ನು ಸಾಲಾಗಿ ಗದ್ದೆಯಲ್ಲೇ ಹಾಸಿದ್ದರು. ಬೆಳ್ಯಪ್ಪನನ್ನು ನೋಡಿ "ಅಯ್ಯೋ" ಎಂದು ಅವು ಹೆದರಿದುವು. ಅಲ್ಲಿಂದಲೇ ತಿಮ್ಮಯ್ಯನ ಗದ್ದೆ ಕಾಣುತ್ತಿತ್ತು. ಕೊಯ್ದ ಗದ್ದೆ ಸತ್ತ್ವಹೀನವಾಗಿ ನಿಂತಿದೆ. "ನನ್ನ ಹೊಟ್ಟೆಗೆ ಬೆಂಕಿ ಹಾಕಿದೆಯಾ?" ಎಂದು ಅಲ್ಲಿಂದ ಕೇಳಿಸುವುದು! ಈ ಕಡೆಯಿಂದ ಸೂರ್ಯನು ಅಣಕಿಸುತ್ತ ಕಣ್ಣು ಕುಕ್ಕುತ್ತಿದ್ದಾನೆ.  ಗದ್ದೆಯಲ್ಲಿ ನಿಲ್ಲಲು ಸಾಧ್ಯವಿಲ್ಲ. ಭೂಮಿಯೇ ಬಿರಿಯುವಂತೆ ಆಗುತ್ತದೆ. ಬಿರಿದು ಈ ಪಾಪಿಯನ್ನು ನುಂಗಿದ್ದರೆ ಆಗುತ್ತಿತ್ತು. ತರಕಾರಿ ತೋಟಕ್ಕೆ ನುಗ್ಗಿದನು. ಮದುವೆಯ ಊಟಕ್ಕೆಂದು ಬೆಳ್ಯಪ್ಪನೇ ನೆಟ್ಟು ಬೆಳೆಸಿದ ಮೊಟ್ಟೆಗೋಸು, ಅವರೆ, ಚೀನಿ, ಕುಂಬಳ ಮುಂತಾದುವುಗಳು ಸೊಕ್ಕಿ ಬೆಳೆದಿದ್ದುವು. "ಅಯ್ಯೋ, ನಮ್ಮ ಹತ್ತಿರ ಬರಬೇಡಾ" ಎಂದು ಅವು ಮೈಮುದುರಿದುವು. ಸೊಕ್ಕಿ ಬೆಳೆದಿದ್ದ, ಚಪ್ಪರದಿಂದ ನೇಲುತ್ತಿದ್ದ ಚೀನಿಕಾಯಿಯ ತೊಟ್ಟನ್ನೇ ಕಾಗೆಯೊಂದು ಕೊಡವಿ ಕತ್ತರಿಸಿತು. ಅದು ಧಡಾರನೆ ಬಿದ್ದು ರಟ್ಟಿತು. "ಕಾ ಕಾ" ಎಂದು ಕರ್ಕಶವಾಗಿ ಅದು ಕೂಗುತ್ತ ಹಾರಿಹೋಯಿತು. "ಹೀಗೆ ಮಾಡುವುದೇ?" ಎಂದು ತರಕಾರಿ ತೋಟದ ಬೇಲಿ ಕೇಳುತ್ತದೆ. ಅಲ್ಲಿಯೂ ನಿಲ್ಲಲಾರದೆ ಮುಂದೆ ಓಡಿದನು. ಗದ್ದೆ ದಾಟಿ ಗುಡ್ಡ ಹತ್ತಿ ಓಡಿದನು.

"ಬೆಳ್ಳೀ, ಬೆಳ್ಳೀ ತರಕಾರೀ ತೋಟಕ್ಕೆ ಮತ್ತೆ ನೀರು ಹೊಯ್ಯಬಹುದು. ಗಂಜಿ ಉಣ್ಣಕ್ಕೆ ಬಾರೋ" ಎಂದು ಕೂಗುತ್ತಿದ್ದನು ಸಿಂಗಪ್ಪ.
"ಎಂಥ ಬೆಂಕಿ, ವುಯ್. ಇದರ ಸಾವು!" ಎಂದು ಅಲ್ಲೇ ಬೇರೆ ಇಬ್ಬರು ಗೌಡರು ಮಾತಾಡುತ್ತಾ ಸಾಗಿದ್ದರು.
"ಹೀಗೆ ಮಾಡುವುದೇ, ಹೀಗೆ ಮಾಡುವುದೇ?" ಮರಗಳು ಪ್ರಶ್ನಿಸುತ್ತವೆ. ನೆಲದ ಮೇಲೆ ಬಿದ್ದಿದ್ದ ತರಗೆಲೆಗಳು ಗಾಳಿಯಿಂದ ದಿಕ್ಕಾಪಾಲಾಗಿ ಚದರಿ "ನಮ್ಮನ್ನು ಸುಡಬೇಡ. ಹೀಗೆ ಮಾಡುವುದೇ?" ಎನ್ನುತ್ತವೆ. "ಹೀಗೆ ಮಾಡುವುದೇ ಹೀಗೆ ಮಾಡುವುದೇ" ಎಂಬ ಸಾವಿರ ಕಠಾರಿಗಳು ಅವನನ್ನು ಸುತ್ತಲಿಂದಲೂ ಇರಿಯುತ್ತಿದ್ದುವು. "ಈ ಕಡೆ ಬರಬೇಡ, ಈ ಕಡೆ ಬರಬೇಡ" ಎಂದು ಪ್ರತಿಯೊಂದು ವಸ್ತುವೂ ಮೈ ಮುದುರುತ್ತಿತ್ತು. ಬೀಳುತ್ತ, ಏಳುತ್ತ ದಿಕ್ಕು ಗುರಿಯಿಲ್ಲದೇ "ಹೀಗೆ ಮಾಡುವುದೇ?" ಎಂಬ ಪ್ರಶ್ನೆಯು ಕೇಳದ ಶಾಂತಿನಿಲಯದ ಕಡೆಗೆ ಧಾವಿಸಿದನು. ಆದರೆ "ಹೀಗೆ ಮಾಡುವುದೇ?" ಮಾತ್ರ ಅವನ ಬೆನ್ನು ಹಿಡಿದೇ ಇತ್ತು. ರಾತ್ರಿಯಾಯಿತು. ದಣಿವಿನಿಂದ, ಹಸಿವೆಯಿಂದ, ತಾನು ನಡೆಯುತ್ತಿದ್ದ ಹಸಿರು ಬಯಲಿನಲ್ಲಿಯೇ ಕುಸಿದುಬಿದ್ದನು. ಅಲ್ಲೇ ಅವನಿಗೆ ಗಾಢ ನಿದ್ರೆಯು ಹತ್ತಿತು. ಆಗ ಅವನಿಗೆ ಸ್ವಲ್ಪ ಶಾಂತಿ ದೊರೆತಂತಿತ್ತು – ಶಾಂತಿ ಏನು, ಮನಸ್ಸಿನ ಮೇಲೆ ಶ್ರಮದಿಂದಾಗಿ ಒಂದು ಪರೆ ಕವಿದಿತ್ತು.

ಬೆಳಗ್ಗಿನ ತಂಗಾಳಿಗೆ ಅವನಿಗೆ ಎಚ್ಚರವಾಯಿತು. ಹಸಿವು ವಿಪರೀತವಾಗಿತ್ತು. ಮನಸ್ಸು ಸ್ತಿಮಿತಕ್ಕೆ ಬಂದಿತ್ತು. "ಹೀಗೆ ಮಾಡುವುದೇ?" ಆಗ ಇರಿಯುತ್ತಿದ್ದಿಲ್ಲ. ಹಿಂದೆ ನಡೆದುದನ್ನೆಲ್ಲ ಅವನು ಕುಳಿತಲ್ಲಿಯೇ ಚಿಂತಿಸಿದನು "...ತಿಮ್ಮಯ್ಯನಿಗೆ ನನ್ನಿಂದಾಗಿ ಐನೂರು ರೂಪಾಯಿಯಾದರೂ ಲುಕ್ಸಾನಾಗಿದೆ. ನನಗೆ ದೇವರು ಆ ಕೆಟ್ಟ ಯೋಚನೆ ಯಾಕೆ ಕೊಟ್ಟನೋ? ಈಗ ನಾನು ಹೇಗಾದರೂ ಮಾಡಿ ಅದನ್ನು ತೀರಿಸಲೇಬೇಕು. ನಾನು ಆ ಹಣ ಸಂಪಾದಿಸಿಯೇ ಮನೆಗೆ ಹೋಗೋದು...  ಆದರೆ ನನ್ನ ಮದುವೆ... ಮದುವೆಗೆ ಮಣ್ಣು ಹಾಕ! ನಾನು ಐನೂರು ರೂಪಾಯಿ ಸಂಪಾದಿಸಿಯೇ ಮನೆಗೆ ಹೋಗೋದು" ಎಂದು ನಿಶ್ಚೈಸಿ ಎದ್ದನು.

ಸೂರ್ಯನನ್ನು ಮುಚ್ಚಿದ್ದ ಒಂದು ತೆಳು ಮೋಡವು ದೂರ ಸರಿಯಿತು. ಸೂರ್ಯನು ನವಪ್ರಭೆಯಿಂದ ಪ್ರಜ್ವಲಿಸಿದನು. ಹಸುರು ಹುಲ್ಲಿನ ಸಮುದ್ರದ ಮೇಲೆ "ಬಾಲದಿನೇಶನ ಕೋಮಲ ಲೀಲೆ" ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿತ್ತು. ನಾನಾ ವಿಧದ ಮಣಿಗಳ ಬಣ್ಣದಲ್ಲಿ ರಂಜಿಸುತ್ತಿದ್ದ ಇಬ್ಬನಿಗಳು ಆಗ ಆರುತ್ತಿದ್ದುವು. ಒಂದು ತಂಪು, ಒಂದು ಮೃದುವಾದ ಪರಿಮಳ, ಒಂದು ಉಲ್ಲಾಸ ಅಲ್ಲೆಲ್ಲ ತುಂಬಿ ಹರಿಯುತ್ತಿದ್ದಿತು. ಬೆಳಕಿನ ಕಡಲಿನಲ್ಲಿ ಮಿಂದು, ಚೈತನ್ಯದ ಮಡಿ ಬಟ್ಟೆಯನ್ನು ಉಟ್ಟು, ಪ್ರಕೃತಿಯು ದಿನಕರನನ್ನು ಆರಾಧಿಸುತ್ತಿದ್ದಳು. ದನಕಾಯುವ ಹುಡುಗರ "ಓವೋವೋ ಹೋಯ್ ಹೇ..." ಕೂಗು ಕೇಳುತ್ತಿದ್ದಿತು. ದನಗಳ ಕುತ್ತಿಗೆಗೆ ಕಟ್ಟಿದ ತಟ್ಟೆಗಳು (ಮರದಿಂದ ಮಾಡಿದ ಒಂದು ವಿಧವಾದ ಗಂಟೆ) "ತಟಪಟ" ಎಂದು, ದನ ಅತ್ತಿತ್ತ ಓಡಾಡುವಾಗ ಶಬ್ದ ಮಾಡುತ್ತಿದ್ದುವು. ಕರುಗಳ ಕೊರಳಿನ ಕಿರುಗಂಟೆಗಳ ಕಿಂಕಿಣಿನಾದವು ಈ ಸಂಗೀತಕ್ಕೆ ಶ್ರುತಿ ಮಿಡಿಯುತ್ತಿತ್ತು.
ಬೆಳ್ಯಪ್ಪನು ತನ್ನ ದೃಢ ನಿಶ್ಚಯವನ್ನು ನೆರವೇರಿಸಲು ಮುಂದೆ ನಡೆದೇ ಇದ್ದನು!

# ಮುನಿದು ಪೊಡವಿ ನುಂಗುವಡೆ

**(ಮೂರನೇ ಕತೆ – ೧೯೪೫)**

ಬಹಳ ಹಿಂದೆ ಕೊಡಗು ರಾಜರ ಆಳ್ವಿಕೆಯ ಕಾಲದಲ್ಲಿ ಕೊಡವರ ಪೂವಯ್ಯನೆಂಬವನು ಅದ್ವಿತೀಯ ಶೌರ್ಯ ಪ್ರದರ್ಶನ ಮಾಡಿದುದಕ್ಕೆ ಉಂಬಳಿಯಾಗಿ ರಾಜನು ಅಗ್ನಿಕುಂಡದ ಪ್ರದೇಶವನ್ನು ಅವನಿಗೆ ಕೊಟ್ಟಿದ್ದನು. ಸೈನ್ಯದಿಂದ ನಿವೃತ್ತನಾದ ಮೇಲೆ, ಈ ನಿರ್ಜನ ಭಯಂಕರ ಪ್ರದೇಶದಲ್ಲಿಯೇ ನೆಲಸುವ ನಿಶ್ಚಯದಿಂದ ಪೂವಯ್ಯನು ಹೆಂಡತಿ ಮಗನೊಡನೆ ಅಲ್ಲಿಗೆ ಹೋದನು. ಗೇಣಗಲ ಭೂಮಿಯಿಂದಲೂ ಹೊನ್ನಮಳೆ ಕರೆಸಬಹುದೆಂದು ಅವನ ನಂಬಿಕೆಯಾಗಿತ್ತು. ಪೂವಯ್ಯನು ಬಡತನದಲ್ಲಿಯೇ ಬೆಳೆದು ಬಂದುದರಿಂದ ದೈಹಿಕ ಕಷ್ಟಗಳಿಗೆ ಹಿಂಜರಿಯುತ್ತಿರಲಿಲ್ಲ. ಅವನಿಗೆ ಪ್ರಾಯವೂ ಬಹಳವಾಗಿರಲಿಲ್ಲ. ಪ್ರಾಯದ ಒಬ್ಬ ಗಂಡು ಮಗನೂ ಇದ್ದನು. ಇವರು ಆಯಕಟ್ಟು ಪ್ರದೇಶವನ್ನು ಆರಿಸಿಕೊಂಡು ಅಲ್ಲಿ ವಾಸಿಸಲು ಒಂದು ಮನೆಯನ್ನು ಕಟ್ಟಿದರು. ಮತ್ತೆ ದನಕರುಗಳನ್ನು ಅಲ್ಲಿಗೆ ಸಾಗಿಸಿ ಗದ್ದೆ ಮಾಡಲು ಪ್ರಾರಂಭಿಸಿದರು. ಹೊಸತಾಗಿ ಗದ್ದೆಯನ್ನಾಗಲೀ ತೋಟವನ್ನಾಗಲೀ ಮಾಡುವುದು ಸಾಮಾನ್ಯದ ಕೆಲಸವಲ್ಲ. ಪ್ರಾರಂಭದಲ್ಲಿ ಇಲ್ಲಿ ಒಂದು ಕದನವೇ ನಡೆಯಿತು. ಸೈನ್ಯದಲ್ಲಿ ಶೌರ್ಯ ಪ್ರದರ್ಶನ ಮಾಡಿದ ಪೂವಯ್ಯನ ಸತ್ತ್ವಪರೀಕ್ಷೆ ಇಲ್ಲಿ ಆಯಿತು. ದಿನನಿತ್ಯ ನಿಸರ್ಗದೊಡನೆ ಹೋರಾಡಿ, ಕಾದಾಡಿ ಅವನಿಗೆ ಸಾಕಾಯಿತು. ವಿಘ್ನಗಳು ಒಂದೆರಡೇ?

ಗೊಂಡಾರಣ್ಯ, ಸುತ್ತಲೂ ಬೆಟ್ಟಗಳು. ಮಧ್ಯೆ ಇವರ ವಸತಿ ಮಾತ್ರ. ನಡು ಹಗಲಿನಲ್ಲಿಯೇ ಮನೆ ಸೂರೆ ಹೋದರೂ ಬೆಂದು ಹೋದರೂ ನೋಡುವವರಿಲ್ಲ, ಕೇಳುವವರಿಲ್ಲ. ಹುಲಿಗಳು ಆನೆಗಳು ಇತರ ಕ್ರೂರ ಮೃಗಗಳು ಅಸಂಖ್ಯಾತ. ಕೊಟ್ಟಿಗೆಯಿಂದಲೇ ದನಗಳನ್ನು ಹಾರಿಸಿಕೊಂಡು ಹೋಗುವ ಹುಲಿಗಳು. ಮೇಯಲಿಕ್ಕೆ ಹಗಲಿನಲ್ಲಿಯೂ ದನಗಳನ್ನು ನಿಶ್ಚಿಂತೆಯಿಂದ ಹೊಡೆಯುವಂತಿಲ್ಲ. ಸದಾ ಯಾರಾದರೂ ಜೊತೆಯಲ್ಲಿ ಪಹರೆ ಇರಬೇಕು. ಕೋಳಿಗಳನ್ನೂ ಹಂದಿಮರಿಗಳನ್ನೂ ಮಧ್ಯಾಹ್ನದ ಹೊತ್ತಿನಲ್ಲಿಯೇ ಕದ್ದುಕೊಂಡು ಹೋಗುವ ನರಿಗಳು, ನಾಯಿಗಳನ್ನು ಮಲಗಿದಲ್ಲಿಂದಲೇ ಜಾರಿಸಿ ಕೊಂಡು ಹೋಗುವ ನಾಯಿಹುಲಿಗಳು, ಇವನ್ನೆಲ್ಲ ಎದುರಿಸಿ ನಿಂತರೆ ಮತ್ತೆ ಪ್ರಕೃತಿಯ ಪೆಟ್ಟು ಬೇರೆ ತೆರನಾಗಿಯೇ ಬೀಳುವುದು: ಜ್ವರವೋ ಶೀತವೋ ಇತರ ಖಾಯಿಲೆಯೋ. ಈ ವರ್ಷ ಮಾಡಿದ ಹೊಸಗದ್ದೆಗೆ ಮಳೆಗಾಲದಲ್ಲಿ ವಿಪರೀತ ನೀರು ಹರಿದು ಬಂದು ಜೊತೆಯಲ್ಲಿ ಮಣ್ಣೂ ತುಂಬಿ ಮಾಡಿದ ಶ್ರಮವೆಲ್ಲ ವ್ಯರ್ಥವಾಗುವುದು. ಒಂದು ಸಣ್ಣ ಬಾಳೆ ಅಥವಾ ಕಬ್ಬಿನ ತೋಟವನ್ನು ಮಾಡಿದರೆ ಅದು ಬೆಳೆದು ಮೇಲೆ ಬರುವ ಮೊದಲೇ ಕಾಡುಕೋಣ, ಕಾಡು ಹಂದಿ ಅಥವಾ ಆನೆಯ ಬಾಯಿಗೆ ತುತ್ತು. ಆದರೂ ಶೂರ ಪೂವಯ್ಯ, ಅವನ ಮಗ ಧೀರ ಬೋಪಯ್ಯ ಹೆದರಲಿಲ್ಲ, ಅಳುಕಲಿಲ್ಲ. ಕೆಲಸದ ಆಳುಗಳನ್ನು ಕಟ್ಟಿಕೊಂಡು ದುಡಿದರು. ಬಿಲ್ಲು, ಬಾಣ, ಕತ್ತಿ ಭರ್ಚಿಗಳಿಂದ ಕ್ರೂರ ಮೃಗಗಳನ್ನು ಅಟ್ಟಿದರು. ಕಾಡನ್ನು ನಾಡು ಮಾಡಲು ಬದ್ಧ ಕಂಕಣರಾದರು.

ಕೆಲಸ ಮಾಡುವುದಾದರೆ ಎಂದೆಂದೂ ಮುಗಿಯದಷ್ಟು ಸ್ಥಳವಿತ್ತು. ಅಗ್ನಿಕುಂಡವು ಎರಡು ಮೂರು ಬೆಟ್ಟಗಳಿಂದ ಆವೃತವಾದ, ತಗ್ಗಾದ, ವಿಸ್ತಾರವಾದ ಪ್ರದೇಶ. ಅಲ್ಲಿ ನೀರು ವಿಪುಲ, ಎಂತಹ ಬೇಸಗೆಯಲ್ಲಿಯೂ ಸಮೃದ್ಧಿ. ಕಾಡುಗಳು ಶತಮಾನಗಳಿಂದ ಬೆಳೆದು ಸೊಕ್ಕಿ ನಿಂತಿವೆ. ಪೂವಯ್ಯನಿಗೆ ಈ ಸ್ಥಳವು ಉಂಬಳಿ ದೊರೆಯಿತೆಂದಾಗ ನಕ್ಕವರೇ ಹಾಸ್ಯ ಮಾಡಿದವರೇ ಹೆಚ್ಚು. “ರಾಜನಿಗೆ ಆಸೆ; ಚಿನ್ನ, ಫಲವತ್ತಾದ ಭೂಮಿ ಮುಂತಾದವನ್ನು ಕೊಡದೇ ಆ ಗೊಂಡಾರಣ್ಯವನ್ನು ಕೊಟ್ಟಿದ್ದಾನೆ” ಎಂದು ಗೇಲಿ ಮಾಡಿದರು. “ಅಲ್ಲಿಗೆ, ಆ ಕೊಂಪೆಗೆ, ಹೋಗಿ ನೆಲಸುವ ಮೂರ್ಖತನವೇ ಈ ಪೂವಯ್ಯನಿಗೆ” ಎಂದರು ಹಲವರು. “ಯುದ್ಧದಲ್ಲಿ ಶೌರ್ಯ ಪ್ರದರ್ಶನ ಮಾಡಲು ಮಿದುಳು ಬೇಕಾಗಿಲ್ಲ. ಇಲ್ಲವಾದರೆ ಆ ಕಾಡಿನ ನಡುವೆ ಯಾರಾದರೂ ಹೋಗಿ ನೆಲಸುವರೇ ಈ ಪ್ರಾಯದಲ್ಲಿ?” ಎಂದರು ಉಳಿದವರು. ಆದರೆ ಗೇಣಗಲ ಭೂಮಿಯೂ ಸರಿಯಾಗಿ ಉತ್ತು ಬಿತ್ತಲ್ಲಿ ರಾಶಿ ಹೊನ್ನು ಸುರಿಸುವ ಸ್ಥಳವಾಗಬೇಕೆಂಬುದು ಪೂವಯ್ಯನ ದೃಢವಾದ ನಂಬಿಕೆ. ಅವನ ಹೆಂಡತಿಯು ಯಾವ ಕಷ್ಟಕ್ಕೂ ಹೆದರದ ಕೊಡಗಿನ ವೀರಾಂಗನೆಯಾಗಿದ್ದಳು. ಮಗ ಬೋಪಯ್ಯನಂತೂ ಅಧಿಕೋತ್ಸಾಹದಿಂದ ಈ ನವೋದ್ಯಮದಲ್ಲಿ ಧುಮುಕಿದನು. ಹೀಗೆ ಈ ಮೂವರ ಪ್ರಥಮ ಪ್ರಯತ್ನದಿಂದಲೂ ಅತುಲ ವಿಶ್ವಾಸದಿಂದಲೂ ಅಗ್ನಿಕುಂಡದ ಮಹಾರಣ್ಯವು ಉಸಿರಾಡತೊಡಗಿತು. ಆ ಕತ್ತಲೆಯ ಮನೆಗೆ ಇವರ ಕುಟೀರವೇ ಮಣಿದೀಪವಾಯಿತು. ಜನತೀರ್ಥವಿಲ್ಲದೇ ಬತ್ತಿದ ಆ ಅಗ್ನಿಕುಂಡ ಸರೋವರಕ್ಕೆ ಇವರ ಆಗಮನದಿಂದ ನವಜಲವೊದವಿದಂತಾಯಿತು. ಶ್ಮಶಾನಸದೃಶ ಕಾಂತಾರದಲ್ಲಿ ಜೀವಕಳೆ ಸ್ಪಂದಿಸತೊಡಗಿತು. ಕಾಡು ನಾಡಾಯಿತು. ಭೀಕರತೆ ಅಳಿಯುತ್ತಾ ಸೌಂದರ್ಯವು ನೆಲೆಬಿಟ್ಟಿತು.

ಪೂವಯ್ಯನ ಆಶಯ ಮಹತ್ತಾಗಿತ್ತು. ಅವನಿಗೆ ಎದುರಾದ ಕಷ್ಟಗಳು ಅಮಿತ. ಆದರೆ ಅವನ ಉತ್ಸಾಹವೂ ಅಮಿತ. ಇಡೀ ಅಗ್ನಿಕುಂಡವನ್ನೇ ವಾಸಯೋಗ್ಯವಾಗಿ ಮಾಡಿ ಅಲ್ಲಿ ವಿಸ್ತರವಾದ ಗದ್ದೆಗಳನ್ನೂ ಕಿತ್ತಳೆ, ಕಾಫಿ ಮುಂತಾದ ತೋಟಗಳನ್ನೂ ಮಾಡಬೇಕು ಎಂಬುದು ಅವನ ಕನಸು. ಪ್ರಕೃತಿಯೊಂದಿಗಿನ ದಿನದ ಹೋರಾಟ ಮುಗಿದನಂತರ ಮನೆಯ ಸಮೀಪದ ದಿಬ್ಬದ ಮೇಲೆ ಅವನು ಮಗನೊಡನೆ ಹೋಗಿ ಕುಳಿತು ಚಿತ್ರಗಳನ್ನು ಕಟ್ಟುವುದರಲ್ಲಿ ತುಂಬಾ ಸಂತೋಷ ಪಡುತ್ತಿದ್ದನು. ಸುತ್ತಲೂ ಸಸ್ಯಶ್ಯಾಮಲ ಪುಣ್ಯಭೂಮಿ. ಸಂಜೆಯ ನೇಸರು ಮರಗಿಡಗಳ ನಡುವೆ ಅವಿತು ಅವಿತು ಇಳಿಯುತ್ತಿರುವನು. ಆಯಾಸ ಪರಿಹಾರಕ ನವೋತ್ತೇಜಕ ಸಮೀರನು ಮಂದವಾಗಿ ತೀಡುತ್ತಿರುವನು. ಕೆಳಗೆ ನೋಡಿದಲ್ಲಿ ಕಣ್ಣಿಗೆ ಹಬ್ಬವಾಗುವಂತೆ, ಸುವರ್ಣ ವರ್ಷ ಕರೆಯುವಂತೆ ಅವರ ದುಡಿಮೆಯ ಫಲಿತಾಂಶವಾದ ಅದರ ಪ್ರತೀಕವಾದ ಗದ್ದೆಗಳು, ತಿದ್ದಿದ ತೋಡುಗಳು, ಗೊನೆಯಿಟ್ಟು ಬಾಗಿ ನಿಂತಿರುವ ಬಾಳೆಯ ಮರಗಳು ಇವೆಲ್ಲ

ರಾರಾಜಿಸುತ್ತಿರುವುವು. ಇವರ ಗುಡಿಸಲು ಹಸುರು ಸಮುದ್ರ ಮಧ್ಯದ ದ್ವೀಪದಂತೆ, ಸರಸ್ಸಿನಲ್ಲಿ ತೇಲುವ ಅರಸಂಚೆಯಂತೆ ಕಂಗೊಳಿಸುತ್ತಿರುವುದು. ಆ ಗದ್ದೆಯ ಎಡಗಡೆಗೆ ನಿಸರ್ಗದ ಸೈನಿಕರು – ನಿಬಿಡ ತರುನಿಚಯಗಳು ಆಜ್ಞೆ ಕೊಟ್ಟೊಡನೆಯೇ ಮುನ್ನಡೆದು ಧಾಳಿ ಮಾಡಲು ಸಿದ್ಧರಾಗಿ ನಿಂತಂತೆ ಕಿಕ್ಕಿರಿದು ಬೆಳೆದಿರುವುವು.

"ನೋಡು ಬೋಪೂ, ನನಗೆ ಪ್ರಾಯವಾಗುತ್ತಾ ಬಂದಿತು. ಆದರೆ ನೀನು ಈ ಕಾರ್ಯವನ್ನು ಮುಂದುವರಿಸಬೇಕು. ಭೂಮಿತಾಯಿಗೆ ನೋವು ಮಾಡದೇ ಅವಳಿಗೆ ವಿಧೇಯನಾಗಿ ಹೊಂದಿಕೊಂಡು ನಡೆಯಬೇಕು. ಈ ಕಣಿವೆಯು ಯಾಲಕ್ಕಿ ತೋಟಕ್ಕೆ ಅತ್ಯುತ್ಕೃಷ್ಟವಾದುದು. ಮತ್ತೆ ಆ ಬೆಟ್ಟದಲ್ಲಿ ಕಾಫಿಯನ್ನು ಹಾಕಬಹುದು. ಆ ಗದ್ದೆಗಳ ಅಂಚಿನ ಕಾಡನ್ನು ಸವರಿದರೆ ಸೊಗಸಾದ, ದೊಡ್ಡದಾದ ಕಿತ್ತಳೆ ತೋಟವನ್ನು ಬೆಳೆಸಬಹುದು. ಈ ಭಾಗದಲ್ಲೆಲ್ಲ ಒಕ್ಕಲುಗಳಿಗೆ ಮನೆಗಳನ್ನು ಕಟ್ಟಿಸಬಹುದು. ಆಗ ನಮ್ಮ ಮನೆ ನೋಡು, ನಾವು ಕುಳಿತಿರುವ ಈ ಸ್ಥಳದಲ್ಲಿಯೇ ಕಟ್ಟಲ್ಪಡಬೇಕು. ಇಲ್ಲಿ ನೀರಿಗೇನೂ ತೊಂದರೆಯಿಲ್ಲ. ಗಾಳಿ ಬೆಳಕು ಯಥೇಚ್ಛ. ಅಲ್ಲದೇ ಈ ಎಲ್ಲಾ ತೋಟ, ಗದ್ದೆಗಳನ್ನು ಇಲ್ಲಿಂದಲೇ ನೋಡಿ ಆನಂದ ಪಡೆಯಬಹುದು. ಆದರೆ ನಾವು ದುಡಿಯಬೇಕು. ಎಷ್ಟೇ ಧನಿಕರಾದರೂ ದುಡಿದು ಅದನ್ನು ಅನುಭವಿಸುವುದರಲ್ಲಿಯೇ ನಿಜವಾದ ಆನಂದ" ಎಂದು ಮುಂತಾಗಿ ಹೇಳುವನು.

ಬೋಪಯ್ಯನಿಗೆ ಬಡವರ ಮನೆಯಿಂದ, ಕಷ್ಟವರಿತರವರ ಕುಟುಂಬದಿಂದ ಹೆಣ್ಣು ತಂದು ಮದುವೆಯಾಯಿತು. ದೊಡ್ಡವರು ಯಾರೂ ಅಲ್ಲಿಗೆ ಆ ಕಾಡಿನ ನಡುವಿಗೆ ತಮ್ಮ ಬಣ್ಣದ ಬೀಸಣಿಗೆಗಳಂತಹ ಹೆಣ್ಣು ಮಕ್ಕಳನ್ನು ಕೊಡಲು ಒಪ್ಪುತ್ತಿರಲಿಲ್ಲ. ಪ್ರಾಯಕಾಲದಲ್ಲಿಯೇ ಅಲ್ಲಿ ನೆಲಸಿ, ತಂದೆಯಿಂದ ವ್ಯವಸಾಯದ ಸಂಪೂರ್ಣ ಅನುಭವವನ್ನು ಪಡೆದ ಬಲಿಷ್ಠ ಕಾಯದ ಬೋಪಯ್ಯನಿಗೆ ಯೋಗ್ಯೆಯಾದ ಸಹಧರ್ಮಿಣಿಯೇ ದೊರೆತಳು. ಮೂರು ಜನರ ಮನೆಗೆ ನಾಲ್ಕನೆಯವಳು ಬಂದು ಆ ಮನೆಯನ್ನೂ ಕಾಡನ್ನೂ ಬೆಳಗಿದಳು. ಇಷ್ಟರಲ್ಲಿಯೇ ಅಲ್ಲಿಗೆ ಒಂದೆರಡು ಸಂಸಾರಗಳು ಒಕ್ಕಲುಗಳಾಗಿ ಬಂದು ನೆಲಸಿದವು. ಮಲೆಯಾಳದಿಂದ ಅನ್ನವಿಲ್ಲದೆ ಅಲ್ಲಿಗೆ ಬಂದು ಸೇರಿದ ಅಪ್ಪುನಾಯರನೆಂಬವನು ಅವರಲ್ಲಿ ಮುಖ್ಯನಾದವನು. ಅವನೂ ಅವನ ಆರು ವರ್ಷದ ಮಗನೂ ಅಲ್ಲಿಗೆ ಬಂದ ಸಂಗತಿ ವಿಚಿತ್ರವೇ ಇದೆ. ಮಲೆಯಾಳದಲ್ಲಿ ಮಾರಿ ರೋಗ ಬಂದಾಗ, ಬೇಸಾಯಗಾರ ಅಪ್ಪು ನಾಯರನು ತನ್ನ ಹೆಂಡತಿ ಮಕ್ಕಳನ್ನು ಕಳೆದುಕೊಂಡನು. ಉಳಿದವನು ಆರು ವರ್ಷದ ಮಗನೊಬ್ಬನೇ, ಅಲ್ಲಿ ಇನ್ನು ಉಳಿದರೆ ಉಳಿಗಾಲವಿಲ್ಲವೆಂದು ಬಗೆದು ಕಣ್ಣಾನೂರು ಮಾರ್ಗವಾಗಿ ಕೊಡಗಿನ ಗಡಿಯನ್ನು ಸೇರಿದನು. ಅಲ್ಲಿ ಎಲ್ಲಿಯಾದರೂ ಹೋಗಿ ಯಾರ ಒಕ್ಕಲಾಗಿಯಾದರೂ ಸೇರೋಣವೆಂದು. ಒಂದು ರಾತ್ರಿ ನಿದ್ರೆಯಲ್ಲಿ ಇವನಿಗೆ ಒಂದು ಸ್ಥಳ ಬಹಳ ಸ್ಪಷ್ಟವಾಗಿ ಕಂಡಿತಂತೆ. ಅಲ್ಲಿಗೆ ಹೋಗಿ ಸೇರು ಎನ್ನುವಂತೆ ಯಾವುದೋ ಒಂದು ಶಕ್ತಿ ಪ್ರೇರಣೆ ನೀಡಿತಂತೆ. ಅಲ್ಲಿಗೆ ಹೋಗುವ ದಾರಿಯು ಅವನಿಗೆ ಸ್ಪಷ್ಟವಾಗಿ ಕಂಡಿತಂತೆ. ಇದೇನು ಅದ್ಭುತ! ತಾನು ಕಂಡಿರದ, ಕೇಳಿರದ ಸ್ಥಳವೊಂದು ಅದಕ್ಕೆ ಹೋಗಲಿರುವ ದಾರಿಯೂ ಕಣ್ಣ ಮುಂದೆ ವಿವರವಾಗಿ ತೋರುತ್ತಿದೆ. ಹಾಗಾದರೆ ದೇವರ ಇಷ್ಟದಂತೆಯೇ ನಡೆಯಬೇಕು. ಅಲ್ಲಿಗೆ ಹೋಗಬೇಕು ಎಂದು ಕನಸಿನಲ್ಲಿ ಕಂಡ ದಾರಿಯಲ್ಲಿ ಮಗನನ್ನು ಕರೆದುಕೊಂಡು ಮುಂದುವರಿದನು. ಹೋಗಿ ತಲಪಿದುದೇ ಅಗ್ನಿಕುಂಡಕ್ಕಾಗಿತ್ತು. ಪೂವಯ್ಯನಿಗೆ ನಮಸ್ಕರಿಸಿ, ಅಪ್ಪು ನಾಯರನು ತಾನು ಕಂಡ ಸ್ವಪ್ನವನ್ನು ವಿವರಿಸಿದನು. ಈ ಒಂದು ಅಮಾನುಷಕತೆಯನ್ನು ಕೇಳಿ ಪೂವಯ್ಯನಿಗೆ ವಿಸ್ಮಯವಾಯಿತು. ಕಾವೇರಿ ಮಾತೆಯ ಒಲವು ತನ್ನ ಕಡೆಗಿದೆ, ಇಲ್ಲದಿದ್ದರೆ ಅಯಾಚಿತವಾಗಿ ಆ ಶಕ್ತಿ ಹೀಗೆ ಒಬ್ಬನನ್ನು ಇಲ್ಲಿಗೆ ಹೋಗು ಎಂದು ಪ್ರೇರೇಪಿಸುವುದು ಹೇಗೆ ಎಂದು ಅವನು ಯೋಚಿಸಿದನು. ಅಪ್ಪು ನಾಯರನೂ ಅವನ ಮಗ ಕೇಳುವೂ ಅಲ್ಲಿ ನೆಲಸಿದರು ದುಡಿಮೆಗಾಗಿ. ಅಪ್ಪುವು ಧನಿಯ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಹೊಸ ಹುರುಪಿನಿಂದ ತನ್ನ ಸ್ಥಳವೆಂಬ ಅಭಿಮಾನದಿಂದ ಅವನು ಅಲ್ಲಿ ಗೆಯ್ಯಹೊರಟನು. ಪೂವಯ್ಯ, ಬೋಪಯ್ಯ ಅಗ್ನಿಕುಂಡದ ನಿರ್ಮಾಪಕರು ಎಂದರೆ ಅಪ್ಪುನಾಯರನು ಅದಕ್ಕೆ ರೂಪ ಲಾವಣ್ಯಗಳನ್ನು ಇತ್ತವನು ಎನ್ನಬೇಕು. ಈ ವಜ್ರವನ್ನು ಖನಿಗಿಂದ ತೆಗೆದವರು ಅವರಾದರೆ ಇದನ್ನು ಕಂಡರಸಿ ಹೊಳಪನ್ನಿತ್ತವನು ಅಪ್ಪು ನಾಯರನು. ಪೂವಯ್ಯ, ಬೋಪಯ್ಯ ಅಪ್ಪು ಈ ಮೂವರ ಸತತ ಪರಿಶ್ರಮದಿಂದ ಅಗ್ನಿಕುಂಡದ ಭೀಕರ ಅರಣ್ಯವು ಸುಂದರ ನಂದನವನದಂತೆ ಅರಳಿ ಕಂಗೊಳಿಸಲಾರಂಭಿಸಿತು.

ಎಲ್ಲವೂ ಹೀಗೆಯೇ ನಡೆಯುತ್ತಿದ್ದಂತೆ ಎಷ್ಟು ಚೆನ್ನಾಗಿರುತ್ತಿತ್ತು. ಸರ್ವವನ್ನೂ ನುಂಗುವ ಕಾಲನು ಪೂವಯ್ಯನನ್ನೂ ನುಂಗಿದನು. ಆದರೆ ಅವನ ಪ್ರಯತ್ನ ಸರ್ವಸ್ವವನ್ನೂ ಅವನ ಯಶಃಶರೀರವನ್ನೂ ಮಾತ್ರ ಸ್ವಾಹಾಕರಿಸಲಾಗಲಿಲ್ಲ. ಉಳಿದಿಬ್ಬರೂ – ಬೋಪಯ್ಯ, ಅಪ್ಪು ಮಹತ್ಕಾರ್ಯವನ್ನು ಮುಂದುವರಿಸಿದರು. ಪೂವಯ್ಯನ ಮಹತ್ವಾಕಾಂಕ್ಷೆಯನ್ನು, ಕನಸನ್ನು ತನ್ನ ಕಾಲದಲ್ಲಿಯಾದರೂ ನನಸು ಮಾಡಬೇಕು, ನೆರವೇರಿಸಬೇಕು. ಇದೇ ಮೃತನ ಆತ್ಮಕ್ಕೆ ಶಾಂತಿಯನ್ನೀಯಬಲ್ಲುದು ಎಂಬುದು ಬೋಪಯ್ಯನ ದೃಢ ನಂಬಿಕೆ. ಅವರಿಗೆ ಯಾವಾಗಲೂ ತೊಂದರೆಯಿದ್ದುದು ಜನಬಲ. ಕಾಡಿಗೆ ಯಾರೂ ಬರಲೊಪ್ಪಲಾರರು. ಆದರೆ ಕಾಲವೂ ಬದಲಾಗುವುದಷ್ಟೆ? ಮುಂದೆ ಬ್ರಿಟಿಶರು ಕೊಡಗನ್ನು ಆಕ್ರಮಿಸಿ ವಶಪಡಿಸಿಕೊಂಡಾಗ, ನೆರೆ ಊರಿನಿಂದ ಜನರು ಬಂದು ಕೊಡಗಿನಲ್ಲಿ ನೆಲಸಿದರು. ಅಗ್ನಿಕುಂಡಕ್ಕೆ, ಇದೊಂದು ಹೊಸ ಸ್ಥಳ, ನೋಡೋಣವೆಂದು ವಲಸೆ ಹೋದರು. ಬೋಪಯ್ಯನು ಬಂದವರಿಗೆಲ್ಲ ಗುಡಿಸಲನ್ನೂ ಕೆಲಸವನ್ನೂ ಒದಗಿಸುತ್ತಿದ್ದನು. ಆ ವಿಸ್ತಾರ ಪ್ರದೇಶವನ್ನು ರೂಪಿಸಲು ಹೊರಟನು. ಅಪ್ಪು ನಾಯರನಂತೂ ಸತತ ಉತ್ಸಾಹದ ಬುಗ್ಗೆಯಾಗಿದ್ದನು.

ಪೂವಯ್ಯನ ಅನೇಕ ಆಶಯಗಳು ಕೈಗೂಡಿದುವು. ಬೋಪಯ್ಯನಿಗೆ ಐವತ್ತು ವರ್ಷ ಪ್ರಾಯ ದಾಟುವ ವೇಳೆಯಲ್ಲಿ ಕಾಫಿತೋಟವು ವಿಶಾಲವಾಗಿ ಹುಲುಸಾಗಿ ಮೇಲೆ ಬರುತ್ತಿತ್ತು. ಈ ಭಾಗದ ಕಣಿವೆಯಲ್ಲಿ, ತಂಪಾದ ತಗ್ಗಿನಲ್ಲಿ ಯಾಲಕ್ಕಿ ಗಿಡಗಳು ತಲೆಯೆತ್ತಿ ಸುಗಂಧವನ್ನು ಬೀರುತ್ತಿದ್ದುವು. ವರ್ಷಕ್ಕೆ ಒಂದು ಸಾವಿರ ಬಟ್ಟಿ ಬತ್ತ ಬೆಳೆಯುವಷ್ಟು ಗದ್ದೆಯೂ ರೂಪಿತವಾಗಿತ್ತು. ಈ ಗದ್ದೆ, ತೋಟಗಳೆಲ್ಲವನ್ನೂ ನೋಡಿಕೊಳ್ಳಲು ಸಾಗುವಳಿ ಮಾಡಲು ಸಾಕಾಗುವಷ್ಟು ಒಕ್ಕಲುಗಳು ಅಲ್ಲಿ ನೆಲೆವಿಟ್ಟಿದ್ದರು. ಅವರಿಗಾಗಿ ಬೇರೆ ಬೇರೆ

ಭಾಗಗಳಲ್ಲಿ ಗುಡಿಸಲುಗಳು ತಲೆಯೆತ್ತಿದ್ದುವು. ಸಂದರ್ಭವೊದಗಿದಂತೆ ಬೋಪಯ್ಯನು ತೋಟಗಳನ್ನು ವಿಸ್ತಾರಪಡಿಸುತ್ತಿದ್ದನು. ಈ ರೀತಿ ಅಗ್ನಿಕುಂಡವು ಸರ್ವತೋಮುಖವಾಗಿ ಬೆಳೆಯುತ್ತಿತ್ತು. ಭಯಂಕರ ರುದ್ರ ಕಾನನವು ತೋಟಗಳಿಂದಲೂ ಸೊಕ್ಕಿ ಬೆಳೆದು ನಿಂತಿರುವ ಪೈರಿನಿಂದ ತಲೆ ಬಾಗುವ ಬತ್ತದ ತೆನೆಗಳಿಂದಲೂ ಸಂತೃಪ್ತ ಜನಗಳಿಂದಲೂ ಕೂಡಿ ಒಂದು ಸ್ವರ್ಗದಂತೆಯೇ ಇತ್ತು. ಸಂತೋಷ ಸಂತೃಪ್ತಿಗಳು ಅಲ್ಲಿ ಮನೆ ಮಾಡಿದ್ದುವು. ಹಾಗೆಂದು ಬೋಪಯ್ಯನಾಗಲೀ ಅವನ ಅನಂತರದ ಅವನ ಮಕ್ಕಳಾಗಲೀ ಸ್ವತಃ ದುಡಿಯುವುದನ್ನು ಬಿಡಲೇ ಇಲ್ಲ. ಪೂವಯ್ಯನು ಬೋಧಿಸಿದ ವೇದ ಮಂತ್ರ: "ಎಷ್ಟೇ ಧನಿಕನಾದರೂ ದುಡಿದು ಅದನ್ನು ಅನುಭವಿಸುವುದರಲ್ಲಿಯೇ ನಿಜವಾದ ಆನಂದ" ಬೋಪಯ್ಯನು ಅವನ ಮಕ್ಕಳಿಗೂ ಬೋಧಿಸಿದನು. ಇತ್ತ ಅಪ್ಪು ನಾಯರನ ವಂಶಜರೂ ಅಗ್ನಿಕುಂಡದ ಒಡೆಯರಿಗೆ ವಿಧೇಯರಾಗಿಯೇ ನಿಂತರು. ಹೀಗೆ ಈ ಎರಡು ಮೂಲಪುರುಷರ ಸಂತತಿಗಳು ಒಂದು ಪೂವಯ್ಯನದು ಮತ್ತೊಂದು ಅಪ್ಪು ನಾಯರನದು, ಒಂದಕ್ಕೊಂದು ಹೊಂದಿಕೊಂಡು, ಬಳ್ಳಿಗಳಂತೆ ಹೆಣೆದುಕೊಂಡು ಅಗ್ನಿಕುಂಡದಲ್ಲಿ ಬೆಳೆದುವು. ಈ ರೀತಿಯ ಅನ್ಯೋನ್ಯತೆಯಲ್ಲಿ ಆತ್ಮೀಯತೆಯಲ್ಲಿ ಎರಡು ಮೂರು ತಲೆಮಾರುಗಳು ಕಳೆದುಹೋದುವು.

ಬೋಪಯ್ಯನ ಸಂತತಿಯವರು ಕೆಲವರು ಮಕ್ಕಳಿಲ್ಲದೇ ತೀರಿಹೋದರು. ಮತ್ತೆ ಕೆಲವರು ಕಾರಣಾಂತರಗಳಿಂದ ಊರು ಬಿಟ್ಟು ಹೊರಟುಹೋದರು. ಹೀಗಾಗಿ ನಾಲ್ಕನೆಯ ತಲೆಯವನು ಒಬ್ಬನೇ ಅಗ್ನಿಕುಂಡದ ಗದ್ದುಗೆಯನ್ನೇರಿದನು. ಇವನ ಹೆಸರು ಗಣಪತಿ. ಇವನು ೧೯೨೦ರಲ್ಲಿ ಅಗ್ನಿಕುಂಡದ ಗದ್ದುಗೆಯನ್ನೇರಿದನು. ಅಗ್ನಿಕುಂಡವೀಗ ಸಂಪತ್ತಿನ ಮಳೆಯನ್ನು ಕರೆಯುತ್ತಿತ್ತು. ಮೂಲಪುರುಷ ಪೂವಯ್ಯನು ಕನಸು ಕಂಡ ಉನ್ನತ ಸ್ಥಳದಲ್ಲಿ ಗಣಪತಿಯ ತಂದೆಯು ಪ್ರಶಸ್ತ ಸೌಧವನ್ನು ಕಟ್ಟಿಸಿದ್ದನು. ಮನೆಯವರೆಗೆ ಗಾಡಿ ಹೋಗಲು ಏರ್ಪಾಡಾಗಿತ್ತು. ಹುಲ್ಲಿನ ಜೋಪಡಿಗಳೆಲ್ಲವೂ ಮಂಗಳೂರು ಹಂಚು ಹೊದೆಸಿದ ಮನೆಗಳಾಗಿದ್ದುವು. ಅಗ್ನಿಕುಂಡದ ಗೊಂಡಾರಣ್ಯವು ಈಗ ಅಗ್ನಿಕುಂಡ ಎಸ್ಟೇಟ್ ಎಂಬ ವಿಲಾಯಿತೀ ನಾಮಧೇಯದಿಂದ ಮೆರೆಯುತ್ತಿತ್ತು. ಕೊಡಗಿನ ಚೀಫ್ ಕಮಿಷನರ್ ಮುಂತಾದ ಧೊರೆಗಳು ಎಸ್ಟೇಟ್ ವರೆಗೆ ಸವಾರಿಗೈದು ಆದರೋಪಚಾರಗಳನ್ನು ಹೊಂದಿಕೊಂಡು, ತಮ್ಮ ಪಾದ(ಶೂ) ಧೂಳಿಯಿಂದ ಅಲ್ಲಿಯ ಸ್ಥಳವನ್ನು ಪಾವನಗೊಳಿಸಿ, ತಮ್ಮ ಶ್ವೇತ, ವರದ ಹಸ್ತದಿಂದ ಹರಸಿ ಮರಳುತ್ತಿದ್ದರು.



ಆ ತಾನೇ ನವಸಂಸ್ಕೃತಿಯ ಪ್ರತೀಕವಾದ ಆಂಗ್ಲ ವಿದ್ಯಾಭ್ಯಾಸ ಕೊಡಗಿನಲ್ಲಿಯೂ ಹಬ್ಬುತ್ತಿತ್ತು. ಮಡಿಕೇರಿಯಲ್ಲಿ ಮಾತ್ರ ಒಂದು ಇಂಗ್ಲಿಷ್ ಕಲಿಸುವ ಹೈಸ್ಕೂಲ್ ಇತ್ತು. ಕೊಡವರು ತುಂಬ ಆಸಕ್ತಿಯಿಂದ ಸಾಹೇಬೀ ಜನರ ಮರ್ಜಿಯನ್ನು ಅಭ್ಯಸಿಸತೊಡಗಿದ್ದರು. ಫರಂಗಿಯವರ ಜರ್ಬು, ಪೋಷಾಕು, ದೌಲತ್ ಇವನ್ನೆಲ್ಲ ನೋಡಿ ಗಣಪತಿಗೆ ತನ್ನ ಮಗನಿಗೂ ಆ ವಿದ್ಯಾಭ್ಯಾಸ ಕೊಡಿಸಬೇಕೆಂದು ಆಸೆಯಾಯಿತು. ಹೀಗಾಗಿ ಮಡಿಕೇರಿಯಲ್ಲಿ ಮರಿ ಧನಿಗೆ ಒಂದು ಚಿಕ್ಕ ಬಂಗ್ಲೆಯನ್ನು ಕಟ್ಟಿಸಿಕೊಟ್ಟು ಅಲ್ಲಿ ಊಟ ವಸತಿಗೆ ಏರ್ಪಾಡು ಮಾಡಿಸಿ ಶಾಲೆಗೆ ಕಳುಹಿಸಲು ಪ್ರಾರಂಭಿಸಿದನು. ಮರಿ ಧನಿ ಪೂವಯ್ಯನು ಬಿಗಿಯಾದ ಚಡ್ಡಿ ಕೋಟು ಧರಿಸಿ ಕಾಲಿಗೆ ಪಾದರಕ್ಷೆ ತಾಗಿಸಿ ತಲೆಗೆ ತೊಪ್ಪಿ ತೊಡಿಸಿ ಶಾಲೆಗೆ ಹೋಗಿ ಬರುವ ಠೀವಿಯೇ ಠೀವಿ. ಅವನಿಗೆ ಹೋಗುವಾಗ ಪುಸ್ತಕ ಹಿಡಿದುಕೊಳ್ಳಲು ಒಬ್ಬ ಮಲಯಾಳೀ ಹುಡುಗ ಇವನು ಅಪ್ಪುವಿನ ವಂಶಜ. ಮನೆಯಲ್ಲಿಯ ವ್ಯವಹಾರ ನೋಡಿಕೊಳ್ಳಲು ಈ ಹುಡುಗನ ತಂದೆ ಗೋಪಾಲ. ಗೋಪಾಲನಿಗೆ ನಡುಹರಯ ಮೀರಿತ್ತು. ಇವನಿಗೆ ಧನಿಯ ವಂಶದವರಲ್ಲಿ ಅಪಾರ ಭಕ್ತಿ, ವಿಶ್ವಾಸ. ಇವನೂ ಗಣಪತಿಯೂ ಸಾಮಾನ್ಯ ಒಂದೇ ಪ್ರಾಯದವರು. ಅಪ್ಪುನಾಯರನ ಕುಲದಲ್ಲಿ ಅಗ್ನಿಕುಂಡದಲ್ಲಿ ಉಳಿದವನು ಇವನೊಬ್ಬನೆ. ಉಳಿದವರು ಅಡ್ಡ ಹಾದಿ ಹಿಡಿದುದರಿಂದ ಅಲ್ಲಿ ನಿಲ್ಲಲ್ಲಾಗದೇ ಜಾರಬೇಕಾಯಿತು. ಗೋಪಾಲ ಮಾತ್ರ ಸಂಪೂರ್ಣ ವಿಶ್ವಾಸ ನಂಬಿಕೆಗಳಿಗೆ ಪಾತ್ರನಾಗಿ, ವಿಧೇಯನಾಗಿಯೇ ಇದ್ದುದರಿಂದ, ತೀಕ್ಷ್ಣಮತಿ ಗಣಪತಿಯು ಪೇಟೆಯಲ್ಲಿಯ ತನ್ನ ಮನೆಯಲ್ಲಿ ಅವನನ್ನೇ ಇರಲು ನೇಮಿಸಿದನು. ಗೋಪಾಲನು ತನ್ನ ಮರಿಧನಿ ಪೂವಯ್ಯನನ್ನು ಗೌರವದಿಂದ, ಮಮತೆಯಿಂದ, ಭಕ್ತಿಯಿಂದ ಕಾಣುತ್ತಿದ್ದನು. ತಿಂಗಳಿಗೊಂದು ಸಲ ಗಣಪತಿಯು ಬಂದು ಮಗನ ಅಭಿವೃದ್ಧಿಯನ್ನು ನೋಡಿ ಹಿಗ್ಗಿ ಹೋಗುತ್ತಿದ್ದನು. ಮನೆಯಲ್ಲಿ ಬೇರೆ ಯಾರೂ ಸಂಬಂಧಿಕರು ಇಲ್ಲದ ಗಣಪತಿಗೆ ಪೂವಯ್ಯನೇ ಜೀವನ ಸರ್ವಸ್ವನಾಗಿದ್ದನು. ಮಗನು ಇಜಾರು ಹಾಕಿ, ಕೋಟು ಹೇಟು ಧರಿಸಿ ಇಂಗ್ಲಿಷನ್ನು ಲಟಪಟನೆ ಚಟಾಯಿಸುವ ದಿನಗಳನ್ನು ಹಾರೈಸಿ ತಂದೆ ರೋಮಾಂಚನ ಹೊಂದುತ್ತಿದ್ದನು.

ಆದರೆ ಮರಿ ಧನಿಯು ಮಾತ್ರ ಆಂಗ್ಲ ವಿದ್ಯೆಗಿಂತಲೂ ಅದರ ದುರ್ಗಂಧವನ್ನು ಹೆಚ್ಚು ಸೇವಿಸುತ್ತಿದ್ದಂತೆ ತೋರಿತು. ಹಣವಿರುವವನಿಗೆ ಬುದ್ಧಿ ಬಲಿಯದಿರುವವನಿಗೆ ತಪ್ಪು ದಾರಿಯು ಸುಲಭದಲ್ಲಿ ಸಿಕ್ಕುವುದು; ದುಷ್ಟರ ಸಂಗ ಶೀಘ್ರವಾಗಿ ಆಗುವುದು. ಪೂವಯ್ಯನು ತಂದೆಯ ಊಹೆಯಂತೆ ಪ್ರವರ್ಧಮಾನಕ್ಕೆ ಬರಲಿಲ್ಲ. ಹತ್ತು ವರ್ಷಗಳ ಮಡಿಕೇರಿಯ ವಾಸ ಅವನನ್ನು ಲೋವರ್ ಸೆಕೆಂಡರಿ ದಾಟಿಸಲಿಲ್ಲ ಆದರೆ ತಂದೆ ತಾಯಿಗಳ ವಾತ್ಸಲ್ಯದ ಮನಸ್ಸು ಮಕ್ಕಳ ವಿಷಯದಲ್ಲಿ ಕುಸುಮಕೋಮಲ. ಮಕ್ಕಳು ಏನೇ ಮಾಡಿದರೂ

ಬಹುಶಃ ಆ ಪ್ರಾಯದಲ್ಲಿ ಹಾಗೆ ಮಾಡುವರೋ ಏನೋ. ಬಹುಶಃ ನಮ್ಮಲ್ಲಿಯೇ ತಪ್ಪು ಇರುವುದೋ ಏನೋ. ಬಹುಶಃ ನಮಗೆ ಮಾತ್ರ ಹೀಗೆ ಕಾಣುವುದಾಗಿರಬೇಕು ಎಂದು ಮುಂತಾಗಿ ಸಮಾಧಾನಪಟ್ಟುಕೊಳ್ಳುತ್ತಾರೆ. ಹದಿನೆಂಟರ ಗಡಿಯನ್ನು ಪೂವಯ್ಯ ದಾಟಿದ. ಇದೇ ಸಂದರ್ಭದಲ್ಲಿ ದುರ್ದೈವವಶಾತ್ ಗಣಪತಿಯು ಹಠಾತ್ತಾಗಿ ನಾಲ್ಕು ದಿನಗಳ ಜ್ವರದಿಂದ ತೀರಿಹೋದನು. ಪೂವಯ್ಯನ ಭವಿಷ್ಯದ ಹೊಂಗನಸುಗಳು ಮಾಯವಾದುವು. ತಾಯಿಯನ್ನು ಮೊದಲೇ ಕಳೆದುಕೊಂಡ ಅವನು ಬಂಧುಗಳಿಲ್ಲದ ಮನೆಗೆ ಹೋಗಿ ಕಣ್ಣೀರುಗರೆದನು. "ಆಂಗ್ಲ ಭಾಷೆಯಲ್ಲಿ ಒಳ್ಳೆಯ ಪಂಡಿತನಾಗು ಮಗನೇ" ಎಂದು ಗಣಪತಿಯು ಬೋಧತಪ್ಪುವ ಮೊದಲೇ ಹೇಳಿದುದು ಅವನ ಮನಸ್ಸಿನಲ್ಲಿ ನಾಟಿತ್ತು. ಗೋಪಾಲನು ಇತರ ಒಕ್ಕಲುಗಳು ಎಲ್ಲರೂ ಚಿನ್ನದಂತಹ ಧನಿಯನ್ನು ಕಳೆದುಕೊಂಡೆವಲ್ಲ ಎಂದು ದುಃಖಿಸಿದರು. ಕೆಲವು ವಾರಗಳು ಹೀಗೆಯೇ ಸಂದುವು. ಮತ್ತೆ ಆಂಗ್ಲ ಭಾಷಾ ಪಾರಂಗತನಾಗಲು ಪೂವಯ್ಯನು ಬೆಂಗಳೂರಿಗೆ ಹೋಗುವ ನಿರ್ಧಾರದಿಂದ ಹೊರಟನು. ಮಡಿಕೇರಿಯ ಪಂಡಿತರು ಪ್ರಯೋಜನವಿಲ್ಲ ಎಂದು ಅವನ ನಂಬಿಕೆಯಾಗಿತ್ತು. ಮರಿಧನಿಯ ವಿಶೇಷ ಪರಿಚಯವಿಲ್ಲದ ಒಕ್ಕಲುಗಳೆಲ್ಲರೂ ಇವನ ಕಾರಭಾರವನ್ನು ನೋಡಬೇಕೆಂದು ಉತ್ಸುಕತೆಯಿಂದ ಇದ್ದರೆ ಇವನು ಸೀದಾ ಬೆಂಗಳೂರಿಗೆ ತೆರಳಿದನು. "ಇನ್ನು ಇಲ್ಲಿಯೇ ನೆಲಸುವ, ಅಲ್ಲಿಗೆ ಹೋಗಿ ಏನು ಮಾಡುವುದು ಧನಿಗಳೇ?" ಎಂದು ಗೋಪಾಲನು ಬುದ್ಧಿವಾದ ಹೇಳಿದರೂ ಪ್ರಾಯದ ಅಮಲಿನಲ್ಲಿ ಪೂವಯ್ಯನು ಕೇಳಲಿಲ್ಲ. "ಎಲ್ಲವನ್ನೂ ಸರಿಯಾಗಿ ನೋಡಿಕೊಳ್ಳಬೇಕು. ನನಗೆ ಬೇಕಾದಷ್ಟು ಹಣವನ್ನು ಕಳಿಸಿಕೊಡಬೇಕು" ಎಂಬುದೇ ಪೂವಯ್ಯನ ಅಪ್ಪಣೆ ಗೋಪಾಲನಿಗೆ. ಐವತ್ತು ಪ್ರಾಯ ಮೀರಿದ ಗೋಪಾಲನು ಮರುಮಾತಿಲ್ಲದೇ ಸಮ್ಮತಿಯಿಲ್ಲದಿದ್ದರೂ ಈ ಆಜ್ಞೆಯನ್ನು ಒಪ್ಪಿಕೊಂಡನು.

ಬೆಂಗಳೂರಿಗೆ ಹೋದ ಪೂವಯ್ಯನು ಏನು ಮಾಡಿದನೋ ಅಂತೂ ಅವನಿಂದ ಆಗಾಗ ೧೦೦ – ೨೦೦ ರೂಪಾಯಿಗಳನ್ನು ಕಳಿಸಲು ಗೋಪಾಲನಿಗೆ ಹುಕುಂ ಬರುತ್ತಿತ್ತು. ಅವನು ಮೌನವಾಗಿ ಈ ಆಜ್ಞೆಯನ್ನು ಪಾಲಿಸುತ್ತಿದ್ದನು. ಆದರೂ ಅವನಿಗೆ ಪ್ರತಿಸಲವೂ ಹಣವನ್ನು ಕಳಿಸುವಾಗ, ಹಿಂದಿನ ಧನಿ ಗಣಪತಿ "ಗೋಪಾಲ ಪೂವನನ್ನು ಹೂವಿನ ಹಾಗೆ ನೋಡಿಕೋ" ಎಂದ ಮಾತು ನೆನಪಿಗೆ ಬರುತ್ತಿತ್ತು. "ಮನೆಗೆ ಒಂದು ಸಲವಾದರೂ ಪಾದ ಬೆಳೆಸುವ ಕೃಪೆ ಮಾಡಬೇಕು. ಒಕ್ಕಲುಗಳೆಲ್ಲ ತಮ್ಮನ್ನು ನೋಡಬೇಕೆಂದು ಆತುರದಿಂದ ಇದ್ದಾರೆ" ಎಂದು ಏನು ಬರೆದರೂ ಪೂವಯ್ಯನ ಉತ್ತರವಿಲ್ಲ. ಬೇಕಾಗುವ ಹಣ ಮಾತ್ರ ಏರುತ್ತಲೇ ಇತ್ತು. ಒಂದು ವರ್ಷವಾಯಿತು, ಎರಡು ವರ್ಷಗಳಾದುವು. ಪೂವಯ್ಯನು ಈಗಾಗಲೇ ೧೦,೦೦೦ ರೂಪಾಯಿಗಳನ್ನು ಹುಡಿ ಮಾಡಿದ್ದನು. ಲೆಕ್ಕವನ್ನು ನೋಡಿದ ಗೋಪಾಲನಿಗೆ ಮೈ ಬೆವರಿತು. ಏನೋ ಅನಾಹುತವಾಗುತ್ತಿದೆ. ಧನಿ ಕೆಟ್ಟ ಹಾದಿ ಹಿಡಿದಿರಬಹುದೇ? ಈ ಸಲ ಹಣ ಮಾತ್ರ ಖಂಡಿತ ಕಳಿಸಬಾರದು. ಅವರೇ ಇಲ್ಲಿಗೆ ಬರಲಿ ಎಂದು ಅವನು ದೃಢ ನಿಶ್ಚಯ ಮಾಡಿದನು. ತೋಟದ ಒಕ್ಕಲುಗಳು ಧನಿಯು ಇಲ್ಲದೇ ಇರುವಾಗ ಕೋಡು ಬಂದು ಗೋಪಾಲನ ಮಾತನ್ನು ಕೇಳದಂತೆ ಆಗಿದ್ದರು. ಗೋಪಾಲನು ಹೇಳುವುದೊಂದು ಅವರು ಮಾಡುವುದೊಂದು. ಗೇಣಿಯೆಷ್ಟೋ ಬಾಕಿ. ಹೀಗಾಗಿ ಹುಟ್ಟುವಳಿ ಇಳಿಯಲಾರಂಭಿಸಿತ್ತು.

ಸರಿ, ಎಂದಿನಂತೆ ಒಂದು ವಾರದಲ್ಲಿ ೨೦೦ ರೂಪಾಯಿಗಳಿಗೆ ಧನಿಯಿಂದ ಕಾಗದ ಬಂದಿತು. ಗೋಪಾಲನು ಮೊದಲೇ ನಿಶ್ಚಯಿಸಿದಂತೆ ಉತ್ತರ ಬರೆಯದೇ ಹಣ ಕಳಿಸದೇ ಕುಳಿತು ಬಿಟ್ಟನು. ಮತ್ತೆ ಒಂದರ ಬೆನ್ನ ಹಿಂದೆ ಇನ್ನೊಂದೆಂಬಂತೆ ಎರಡು ಪತ್ರಗಳು ಬಂದುವು. ಆದರೂ ಗೋಪಾಲನು ಚಲಿಸಲಿಲ್ಲ. ಮುಂದಿನ ಒಂದು ವಾರದಲ್ಲಿಯೇ ಪೂವಯ್ಯನು ಅಗ್ನಿಕುಂಡಕ್ಕೆ ಧಾವಿಸಿ ಬಂದನು. ಮೊದಲಿನ ಸುಂದರ ಬಲಿಷ್ಠ ರೂಪ ಈಗ ಪ್ರೇತ ಕಳೆಗೆ ಎಡೆ ಕೊಟ್ಟಿತ್ತು. ಗೋಪಾಲನಿಗೇ ಮೊದಲು ಅವನನ್ನು ಗುರುತಿಸಲಾಗಲಿಲ್ಲ. ಹೇಟ್, ಬೂಟ್, ಸಿಗಾರ್ ಇವುಗಳಿಂದಲೂ ಅದೇ ಜಾತಿಯ ಸ್ನೇಹಿತ ಸ್ನೇಹಿತೆಯರಿಂದಲೂ ಒಡಗೂಡಿ ಬಂದ ಪೂವಯ್ಯನ ಪರಿವಾರ ಯಮದೂತರಂತೆ ಒಕ್ಕಲುಗಳಿಗೆಲ್ಲ ಕಾಣಿಸಿಕೊಂಡಿತು. ಅವರಿಗೆಲ್ಲ ದಿಗ್ಭ್ರಮೆಯಾಯಿತು. ಬಂದೊಡನೆಯೇ ಗೋಪಾಲನಿಗೆ ಮನಬಂದಂತೆ ಬೈದು "ಮೂರ್ಖ, ನಿನಗೆ ಮೂರು ಪತ್ರ ಬರೆದರೂ ಹಣ ಕಳಿಸಲು ಸೊಕ್ಕೇ? ನಿನ್ನಪ್ಪ ಮಾಡಿಟ್ಟ ಹಣವೇ? ನಾನಿಲ್ಲವೆಂದು ಎಷ್ಟೆಲ್ಲ ತಿಂದು ತೇಗಿ ಹಾಳು ಮಾಡಿದೆಯೋ? ಇನ್ನು ನೀನಿಲ್ಲಿರಬೇಡ, ನಡೆ" ಎಂದು ಪೂವಯ್ಯನ ಆರ್ಡರ್ ಆಯಿತು. ಮತ್ತೆ ಇಂಗ್ಲಿಷಿನಲ್ಲಿ ಸ್ನೇಹಿತರೊಡನೆ ಮಾತು ನಡೆಯಿತು. ಕಟ್ಟಡ ಹಾರುವಂತೆ ಅವರು ಹಾರಿ ಹಾರಿ ನಗುತ್ತಿದ್ದರು. ಮತ್ತೇನು ನಡೆಯಿತೋ ತಿಳಿಯದು, ಮರುದಿವಸ ಒಬ್ಬ ಕರಿ ಧೊರೆಯ ಹೊರತು ಎಲ್ಲರೂ ಅಲ್ಲಿಂದ ಹಿಂದೆ ಹೊರಟರು. ಪೂವಯ್ಯನೂ ಹೊರಟು ಹೋದ. ಗೋಪಾಲನು ಆ ಹಿರಿಯರ ಬಂಗ್ಲೆಯಿಂದ ಹೊರದೂಡಲ್ಪಟ್ಟವನಾಗಿ ತೋಟದ ಒಕ್ಕಲುಗಳಲ್ಲಿ ಹೋಗಿ ಸೇರಿಕೊಂಡನು. ಜನ್ಮ ಕೊಟ್ಟು ಅನ್ನವಿತ್ತ ಆ ಸ್ಥಳದ ಋಣವನ್ನು ತೀರಿಸಲು ದುಡಿಯುತ್ತಿದ್ದನು. ಆದರೆ ಈಗ ಮೊದಲಿನ ಉತ್ಸಾಹವಿಲ್ಲ. ಹೊಂದಿಕೊಂಡು ಬಂದ ಬಳ್ಳಿಗಳು ಈಗ ಬೇರೆಯಾದುವು. ಒಂದು ಕತ್ತಲೆಯ ಹಾದಿಯನ್ನು ಹಿಡಿಯಿತು, ಇನ್ನೊಂದು ಮುರುಟಿತು. ಗೋಪಾಲನ ಮಗ ಮಡಿಕೇರಿಯ ಸರಕಾರಿ ಖಚೇರಿಯಲ್ಲಿ ಜವಾನನಾಗಿ ಸೇರಿಕೊಂಡನು.

ಹೊಸ ಕರಿಧೊರೆ ಅಗ್ನಿಕುಂಡದ ಮೆನೇಜರಂತೆ. ಅವನ ನಾಯಕಸಾನಿಯರು, ಇವರ ಹೊಲಸು ಶೃಂಗಾರ, ಆಳುಗಳಲ್ಲಿ ಇವರ ಕಠಿಣತೆ, ನಿರ್ದಾಕ್ಷಿಣ್ಯ ವರ್ತನೆ ಇವುಗಳಿಂದ ಒಕ್ಕಲುಗಳೆಲ್ಲ ಬಹಳ ರೋಸಿ ಹೋದರು, ನೊಂದರು, ಸಿಟ್ಟಿಗೆದ್ದರು. ಮತ್ತೆ ಹಣಕಾಸಿನ ವಹಿವಾಟು ಏನಾಯಿತೆಂದು ಗೊತ್ತಿಲ್ಲ. ಆದರೆ ಒಂದು ತಿಂಗಳಿಗೊಂದು ಸಲ ಪೂವಯ್ಯನ ಹಾಜರಿ ಇರುತ್ತಿತ್ತು. ಪ್ರತಿಸಲವೂ ಸಿಗಾರಿನ ಕೃಷ್ಣ ಧೂಮದಿಂದಲೂ ಕರಿ ಬಿಳಿ ಸ್ನೇಹಿತ ಸ್ನೇಹಿತೆಯರಿಂದಲೂ ಆವೃತನಾಗಿರುತ್ತಿದ್ದನು. ಕಾರಿನಲ್ಲಿಯೇ ಇವರು ಅಲ್ಲಿಗೆ ಬಂದು ಹೋಗುವುದು. ಕೆಲವು ವರ್ಷಗಳಲ್ಲಿಯೇ ಅನೇಕ ಕಾಡುಗಳನ್ನು ಕಡಿದು ಮರಗಳನ್ನು ಲಾರಿಗಟ್ಟಳೆ ಸಾಗಿಸಿದರು. ಒಂದು ಸಲ ಪೂವಯ್ಯ ಬಂದವನು ಅವನ ಪರಿವಾರ ಸಮೇತ ಬಂಗ್ಲೆಯ ಹಿಂದಿರುವ ಬೆಟ್ಟವನ್ನು (ಇಲ್ಲಿ ಗೊಂಡಾರಣ್ಯ) ಏರಿ ಹೋದರು. ಮತ್ತೆ ಸ್ವಲ್ಪ ಹೊತ್ತಿನ

ಅನಂತರ ಹಿಂತಿರುಗಿದರು. ಮುಂದೆ ಒಂದು ವಾರದಲ್ಲಿಯೇ ಮರ ಕೊಯ್ಯುವವರು, ಹೊರುವವರು, ಆಳುಗಳು ಮುಂತಾದವರ ಒಂದು ಸೈನ್ಯವೇ ಆ ಕಾಡನ್ನು ಧಾಳಿಮಾಡಿತು. ಲಾರಿಗಳೂ ಒಂದರ ಹಿಂದೆ ಇನ್ನೊಂದು ಭುಸುಗುಟ್ಟುತ್ತ ಬಂದುವು. ಅನೇಕ ಶತಮಾನಗಳಿಂದ ಬೆಳೆದು ಬಂದ ಇಡೀ ಕಾಡು ಎರಡು ವರ್ಷಗಳಲ್ಲಿಯೇ ಬೋಳಾಯಿತು, ಸೂರೆಯಾಯಿತು, ನಿಸರ್ಗ ಬರಡಾಯಿತು. ಮರದ ತೊಲೆಗಳನ್ನು ನೋಡಿ ಪ್ರತಿ ಒಕ್ಕಲೂ ಸುಯ್ಯಿಗುಟ್ಟುವವನೇ. ಗೋಪಾಲನು ಮೂಕಾಶ್ರುಗಳನ್ನು ಸುರಿಸಿದುದು ಸುರಿಸಿದುದೇ. ಒಂದೊಂದು ವೃಕ್ಷವೂ ಚಟಚಟಾರನೆ ಉರುಳಿಬಿದ್ದಂತೆ ಹಳಬರಿಗೆಲ್ಲ ಉಸಿರು ಕಟ್ಟಿದಂತೆ, ಬೆಂಕಿಯನ್ನು ಮೈಮೇಲೆ ಸುರಿದಂತೆ ಆಗುತ್ತಿತ್ತು. ಬೆಂಕಿಯ ಹೊಗೆ, ಧೂಳು ಆಕಾಶದವರೆಗೆ ಏರುತ್ತಿದ್ದುವು. ಮಧ್ಯಾಹ್ನದ ಸೂರ್ಯನೂ ಈ ಅನ್ಯಾಯ ವಸನದಿಂದ ಆಚ್ಛಾದಿತನಾಗಿ ಮಬ್ಬಾಗುತ್ತಿದ್ದನು. ಆದರೆ ಪ್ರಕೃತಿಯ ಕೊಲೆ – ಸ್ಟೀಮ್ ರೋಲ್ಲರ್ ಕ್ರಮವಾಗಿ ರಸ್ತೆಯ ಎಲ್ಲ ಕಲ್ಲುಗಳನ್ನೂ ಹುಡಿ ಮಾಡಿ ಸಮ ಮಾಡುವಂತೆ ದಬ್ಬಾಳಿಕೆಯು ನಡೆಯಿತು. ಬೇಸಿಗೆ ಕಾಲದಲ್ಲಿಯೂ ತಂಪಾಗಿ ಹಿತಕರವಾಗಿ ಇರುತ್ತಿದ್ದ ಅಗ್ನಿಕುಂಡವು ಸೆಕೆಯ ತಾವಾಯಿತು. ಅಗ್ನಿಯೇ ಉರಿಯುತ್ತಿರುವನೋ ಎಂದಾಯಿತು. ಬುಡದ ಕಣಿವೆಯಲ್ಲಿನ ಯಾಲಕ್ಕಿ ಪೈರುಗಳು ಒಣಗಿದುವು. ಕಾಫಿಯ ಗಿಡಗಳು ನೆರಳಿಲ್ಲದೇ ಸಾಯತೊಡಗಿದುವು. ವನ್ಯಜಂತುಗಳ ಲೂಟಿ ಹೇರಳವಾಯಿತು. ಅವುಗಳಿಗೆ ವಾಸಸ್ಥಾನವಿಲ್ಲದೆ ನಿತ್ಯವೂ ನೆಟ್ಟು ಬೆಳೆಸಿದ ತೋಟಗಳಿಗೆ ನುಗ್ಗಿ ವಿಪರೀತ ಹಾನಿಮಾಡಲಾರಂಭಿಸಿದುವು. ಎಂದೂ ಆರದೇ ಇದ್ದ ಬಾವಿಗಳು, ತೋಡುಗಳು ಮಾರ್ಚ್ ತಿಂಗಳ ಅಂತ್ಯಕ್ಕಾಗುವಾಗ ನೀರಿನ ಪಸೆಯೂ ಇಲ್ಲದೆ ಧೂಳೆಬ್ಬಿಸುತ್ತಿದ್ದುವು. ಅಗ್ನಿಕುಂಡದ ದೊಡ್ಡ ಬೆಟ್ಟ ಬೋಳಾಯಿತು, ಸಾಣೆ ಹೋದವರ ಮಂಡೆಯಂತಾಯಿತು. ಧೂಳು ಹಾರಿಸುತ್ತ ಹಾಳು ಕರೆಯಿತು. ಪ್ರಕೃತಿಯೊಡನೆ ಅನಾವಶ್ಯಕವಾಗಿ ಕದನವೆಸಗಿ ನಿಷ್ಠುರವನ್ನು ಕಟ್ಟಿಕೊಂಡನು ಪೂವಯ್ಯ. ಹಣಕಾಸಿಗಾಗಿ ಮಿತಿಯಿಲ್ಲದೆ ದುರ್ವ್ಯಸನಗಳಿಗಾಗಿ ನಿಸರ್ಗದ ದ್ವೇಷ ಸಂಪಾದಿಸಿದನು; ಬೊಕ್ಕಸವನ್ನು ಬರಿದು ಮಾಡಿದನು. ಆದರೂ ಅವನ ಹಸಿವೆ ಹಿಂಗಲಿಲ್ಲ. ಕುಳಿತು ತಿನ್ನುವವನಿಗೆ ಕೊಪ್ಪರಿಗೆ ಹೊನ್ನು ಸಾಲದು. ಇದು ಕುಳಿತು ತಿನ್ನುವುದೂ ಅಲ್ಲ! ಓಡಾಡುತ್ತ ಹಣ ಚೆಲ್ಲುವುದು, ದುರ್ವ್ಯಯ ಮಾಡುವುದು. ಈ ತರಹದವನಿಗೆ ಕುಬೇರನ ಭಂಡಾರವೂ ಸಾಲದು.

ಪೂವಯ್ಯನ ದುಷ್ಕಾರ್ಯಗಳಿಗೆ ಹಣ ಹೇಗೂ ಸಾಕಾಗಲಿಲ್ಲ. ಈ ಕೊಪ್ಪರಿಗೆಯೂ ಬರಿದಾಯಿತು. ಪೂರಾ ಹಣ ಅವನಿಗೆ ದೊರೆಯಲಿಲ್ಲ. ಅವನ ಹಿಂಬಾಲಕರು ಅದನ್ನು ಗಾಳಿಸಿಯೇ ಅವನಿಗೆ ಹಣವನ್ನು ಕೊಟ್ಟರು. ಇನ್ನು ಕೊನೆಗೆ ಅವನಿಗೆ ಉಳಿದಿರುವುದು ಒಂದೇ ಮಾರ್ಗ ಅಗ್ನಿಕುಂಡವನ್ನೇ ವಿಕ್ರಯಿಸುವುದು. ಈ ವಿಷಯವನ್ನು ಅವನು ಈಗ ಒಂಬತ್ತು ವರ್ಷಗಳ ಹಿಂದೆಯೇ ಜಾಹೀರಾತು ಮಾಡಿದ್ದನು. ಪೂವಯ್ಯನ ಅವನತಿಯನ್ನು ನೋಡುತ್ತಿದ್ದ ಸ್ಥಳಿಕರು ಇದು ಹೀಗೆಯೇ ಪರ್ಯವಸಾಯಿಯಾಗಬೇಕು ಎಂದು ನಿಟ್ಟುಸಿರ್ಗರೆದರು. ಆದರೆ ಅಂತ್ಯವು ಅತಿ ಭಯಂಕರವಾಗಿ ಹಿಂದೆಂದೂ ಕೇಳದಂತೆ ನಡೆದು ಹೋಯಿತು. ಅಗ್ನಿಕುಂಡದ ಮಾರಾಟದ ವಿಷಯವನ್ನು ತಿಳಿದು ಒಕ್ಕಲುಗಳು ಕೆಲವರು ದುಃಖಿಸಿದರು. ಕೆಲವರು ಈ ನಿರಂಕುಶ ಪ್ರಭುತ್ವ ಅಳಿದು ಹೊಸತು ಯಾವುದೇ ಆದರೂ ಬಂದೀತಲ್ಲ ಎಂದು ಕುತೂಹಲದಿಂದಿದ್ದರು. ಉಳಿದವರು ಯಾರು ಬಂದರೂ ತಮಗೆ ದುಡಿಯುವುದು ತಪ್ಪಿದ್ದಲ್ಲ, ಏನು ಬೇಕಾದರೂ ಆಗಲಿ ಎಂದು ನಿರುತ್ಸಾಹದಿಂದ ಇದ್ದರು. ಇವರೆಲ್ಲರಿಗಿಂತಲೂ ಹೆಚ್ಚಿನ ದುಃಖ ಗೋಪಾಲನಿಗೆ. ಅಗ್ನಿಕುಂಡದ ಮಾರಾಟದ ವಿಷಯ ತಿಳಿದೊಡನೆಯೇ ಅವನು ಗೋಳಾಡಿದನು. ಮುದುಕನಾಗಿ ತ್ರಾಣವಿಲ್ಲದೆ ಬೇರೆಯವರಲ್ಲಿ, ಹಂಗಿಗನಾಗಿ ಇದ್ದವನು ತಾನು ಇನ್ನು ಬದುಕಬಹುದೇ ಎಂದು ಬಹುವಾಗಿ ಕೊರಗಿದನು. ಆದರೆ ವಿಧಿ ಲಿಖಿತ ಬೇರೇ ಇತ್ತು.

ಮುಂದಿನ ಜುಲೈ ತಿಂಗಳ ಮಧ್ಯಭಾಗದಲ್ಲಿ ಜಡಿಮಳೆಯ ಸಮಯದಲ್ಲಿ ಒಂದು ಕಾರು ನಾಪೋಕ್ಲಿಗಾಗಿ ಓಡಿತು. ಅದರಲ್ಲಿ ಪೂವಯ್ಯ ಮತ್ತು ಯಾರೋ ಬಿಳಿಯರು ಇದ್ದರು. ಬಹುಶಃ ಅಗ್ನಿಕುಂಡವನ್ನು ನೋಡಲು ಹೋಗುವವರಾಗಿರಬಹುದೆಂದು ನಾಪೋಕ್ಲು ಷಹರಿನ ನಾಗರಿಕರು ನಿಶ್ಚೈಸಿದರು. ಆ ಹೊನ್ನಿನ ಗಣಿಯನ್ನು ಕೊಳ್ಳುವವರು ವಿಲಾಯಿತಿಯಿಂದ ಬಂದವರೇ ಆಗಬೇಕಷ್ಟೇ ಎಂದು ಅವರು ಮಾತಾಡಿಕೊಂಡರು. ನಿಜವಾಗಿಯೂ ಆ ಫರಂಗಿಯವರು ಅಗ್ನಿಕುಂಡದ ಕ್ರಯಚೀಟಿಗಾಗಿ ಅಲ್ಲಿಗೆ ಹೋದವರು. ಕತ್ತಲೆ ಕಟ್ಟಿಕೊಂಡು ಎಡೆಯಿಲ್ಲದೇ ಮಳೆ ಸುರಿಯುತ್ತಿತ್ತು. ಅವರೆಲ್ಲರೂ ಆ ಸಾಯಂಕಾಲ ಬಂಗ್ಲೆಯಲ್ಲಿ ಬೀಡು ಬಿಟ್ಟರು. ಮರು ದಿವಸ ಮಳೆಯಲ್ಲಿಯೇ ಎಸ್ಟೇಟನ್ನು ನೋಡಿ ೫೦೦೦೦ ರೂಪಾಯಿಗಳಿಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ಗೋಪಾಲನು ಕೊನೆಯಸಲವೆಂದು ಧೈರ್ಯ ಮಾಡಿ ಬಂಗ್ಲೆಗೆ ನಡೆಯಲಾರದೇ ನಡೆದು ಹೋದನು. ಅವರು ಆಗ ಕ್ರಯಚೀಟಿನ ವಿಲೆವಾರಿಯಲ್ಲಿದ್ದರು. "ಧನಿಗಳೇ ಈ ಮುತ್ತಿನಂತಹ ಸ್ಥಳವನ್ನು ಮಾರಬೇಡಿ, ಮಾರಬೇಡಿ" ಎಂದು ಅತ್ತನು. ಅವನನ್ನು ಅನಿಷ್ಟ, ವಂಚಕನೆಂದು ಬೈದು ಆ ಸ್ಥಳದಿಂದಲೇ ನೂಕಿಸಿದನು ಪೂವಯ್ಯ. ದುಃಖಿಸುತ್ತ ಗೋಪಾಲನು ಅಲ್ಲಿಂದ ಹಿಂತಿರುಗಿದನು. ಆ ಬಂಗ್ಲೆಯ ಹತ್ತಿರವೆಲ್ಲಿಯೂ ಅವನ ಗಾಳಿ ಕೂಡ ಸೋಂಕ ಕೂಡದೆಂದು ಪೂವಯ್ಯನ ಆಜ್ಞೆಯಾಯಿತು. ಮತ್ತೆ ಕ್ರಯಚೀಟು ಮುಂದುವರಿಯಿತು. ಅಗ್ನಿಕುಂಡವು, ನಿರ್ಜನಪ್ರದೇಶದಲ್ಲಿ ನಿರ್ಮಿತವಾದ ಆ ಪುಣ್ಯಭೂಮಿಯು, ಮೂಲ ಪುರುಷ ಪೂವಯ್ಯನ ಅಭಿಮಾನದ ಹೆಗ್ಗುರುತಾದ ಆ ಸಸ್ಯ ಶ್ಯಾಮಲ ನಂದನವನವು ಮ್ಲೇಚ್ಛರ ಕೈಗೆ ದಾಟಿತು. ಭೀಕರ ಕಾನನಾಂತರದಲ್ಲಿ ಉದ್ಯಾನವನವನ್ನು ಸೃಜಿಸಿದ, ವಿಶಾಲ ಸಮುದ್ರ ಮಧ್ಯದಲ್ಲಿ ಸುಂದರ ದ್ವೀಪವನ್ನು ನಿರ್ಮಿಸಿದ, ಮರುಭೂಮಿಯ ನಡುವೆ ತಂಪಾದ ಫಲವತ್ತ್ರದೇಶವನ್ನು ವಿರಚಿಸಿದ ಆ ಪೂವಯ್ಯನೆಲ್ಲಿ? ಒಂದು ನಿಮಿಷದಲ್ಲಿ ಅದನ್ನೆಲ್ಲ ಹಾಳು ಮಾಡಿದ ಈ ಮೂರ್ಖ ಪೂವಯ್ಯನೆಲ್ಲಿ? ಅಗ್ನಿಕುಂಡವನ್ನು ಮಾರಿದ ಸಮಾರಂಭವನ್ನು ಅದರ ಪೂರ್ಣಾಹುತಿಯ ಪ್ರಸಾದ ಸ್ವೀಕಾರವನ್ನು ವಿಜೃಂಭಣೆಯಿಂದಲೇ ನೆರವೇರಿಸಲು ಪೂವಯ್ಯ, ಧೊರೆಗಳು ಮೆನೇಜರ್, ನಾಯಕಸಾನಿಯರು ಎಲ್ಲರೂ ಹೊರಟರು. ಹೊರಗೆ ನೋಡುವಂತೆ ಸಹ ಇಲ್ಲ. ಈ ಅನ್ಯಾಯ ನೋಡಲಾರದೆ ಎಂಬಂತೆ ವಿಪರೀತ ಮಳೆಯು ಸುರಿಯುತ್ತಿತ್ತು. ಬಾನು ಹರಿಯಿತೋ ಸಮುದ್ರ ಗಗನಕ್ಕೆ ನೆಗೆದು ಅಲ್ಲಿಂದ ಭೂಮಿಯ ಮೇಲೆ ತುಳುಕಿತೋ ಎಂಬಂತೆ ನಿರರ್ಗಳ ವರ್ಷದ ಮುಸಲಾಘಾತವು

ನಡೆಯಿತು. ಹೀಗಾಗಿ ಇವರ ಅಟ್ಟಹಾಸ, ಆನಂದ ಸಂಭ್ರಮಗಳು ಆ ಬಂಗ್ಲೆಗೇ ಪರಿಮಿತವಾದುವು. ಹೊರಗಿನವರಿಗೆ ಯಾರಿಗೂ ಇವರ ಅಬ್ಬರ ಬೊಬ್ಬೆಗಳು ಮಳೆಯ ದೆಸೆಯಿಂದ ಕೇಳುತ್ತಿರಲಿಲ್ಲ. ವಿದೇಶೀ ಪಾನೀಯಗಳು, ವಿದೇಶೀ ಡಬ್ಬಾ ತಿಂಡಿಗಳು ಖರ್ಚಾದುದಕ್ಕೆ ಲೆಕ್ಕವೇ ಇಲ್ಲ. ಸಿಗಾರ್, ಸಿಗರೇಟ್ ಇವುಗಳ ಬೂದಿಯೇ ಬೆಟ್ಟದಷ್ಟಾಯಿತು. ಇಸ್ಪೀಟ್, ಡ್ಯಾನ್ಸ್ ಎಲ್ಲವೂ ಮೆರೆದುವು. ಹೊರಗೆ ಮಳೆಗಾಳಿಗಳ ತೀಕ್ಷ್ಣತೆ ಪ್ರತಾಪ ನಿಮಿಷ ನಿಮಿಷಕ್ಕೆ ಏರುತ್ತಲೇ ಇದ್ದುವು. ಅಷ್ಟರಲ್ಲಿಯೇ ಭೋ ಎಂದು ವಿಕಟವಾಗಿ ಧಮನಿಗಳು ಬಿರಿಯುವಂತೆ ತಲೆಬುರುಡೆಯೇ ಒಡೆಯುವಂತೆ ಶಬ್ದ ಕೇಳಿಸಿತು. ಏನೆಂದು ಯಾರಿಗೂ ತಿಳಿಯಲಿಲ್ಲ. ಸುರಾಪಾನದ ಅಮಲಿನಲ್ಲಿದ್ದರೂ ಬಡಿದೆಬ್ಬಿಸಿದವರಂತಾಗಿ ಅವರು ಏನಾಯಿತು ಎಂದು ತಿಳಿಯಲಾರದೇ ದಿಕ್ಕು ಕಾಣದವರಾದರು. ಅವರಿಗೆ ಉಸಿರು ಕಟ್ಟುವಂತಾಯಿತು. ಬಂಗ್ಲೆಯೊಳಗೇ ಸಿಕ್ಕಿದ ಕಡೆಗೆ ಓಡಿ ಬಾಗಿಲು ತೆರೆಯಲು ಎಳೆದರು. ಅಷ್ಟರಲ್ಲಿಯೇ ಅವರೆಲ್ಲರನ್ನೂ ಅವರ ಬಂಗ್ಲೆಯನ್ನೂ ನುಂಗಿಕೊಂಡು ಬೆಟ್ಟವು ಉರುಳಿತು. ಈ ತೀಕ್ಷ್ಣ ಶಬ್ದ ಹಿಂದೆಂದೂ ಕೇಳಿಸದಂತಹ ಗಡಸಿನಿಂದ, ಕಠಿಣತೆಯಿಂದ, ವಿಕಟತೆಯಿಂದ ಅನೇಕ ಮೈಲುಗಳವರೆಗೆ ಮೊಳಗಿ ಅನುರಣಿತವಾಯಿತು. ನಾಪೋಕ್ಲು, ಕಕ್ಕಬೆ ಪೇಟೆಯವರೂ ಸಮೀಪದ ಗ್ರಾಮವಾಸಿಗಳೂ ಎಲ್ಲಿ ಪ್ರಳಯ ಸಂಭವಿಸಿತೋ ಏನು ಉತ್ಪಾತವಾಯಿತೋ ಎಂದು ಆ ಅಪರಾತ್ರಿಯಲ್ಲಿ ಹೊರಗೆ ಓಡಿದರು. ಅಗ್ನಿಕುಂಡದ ಒಕ್ಕಲುಗಳು ಗುಡಿಸಲುಗಳಿಂದೆದ್ದು, ಏನಾಯಿತೆಂದು ಗೊತ್ತಾಗದೇ ಏನು ಮಾಡುವುದೆಂದು ತಿಳಿಯದೇ ಜೀವದಾಸೆಗಾಗಿ ಮಕ್ಕಳು ಮರಿಗಳನ್ನು ಎತ್ತಿಕೊಂಡು ಆ ಸಿಕ್ಕಾಬಟ್ಟೆ ಮಳೆಯಲ್ಲಿ ಅಮಾವಾಸ್ಯೆಯಂತಹ ರಾತ್ರಿಯಲ್ಲಿ ಓಡಿದರು. ಅನೇಕರನ್ನು ವಿಲಯರುದ್ರನು ಪುರುಷಾಮೃಗದ ವೇಗದಿಂದ ಬೆನ್ನಟ್ಟಿ ಮುಗಿಸಿಬಿಟ್ಟನು. ಆ ರುದ್ರಭಯಂಕರ ಕಾಳರಾತ್ರಿಯ ಕ್ರೂರ ದಂಷ್ಟ್ರಗಳಿಂದ ಪಾರಾಗಿ ಉಳಿದವರು ಈಗಲೂ ಆ ಸನ್ನಿವೇಶವನ್ನು ವರ್ಣಿಸುವಾಗ ನಡುಗುತ್ತಾರೆ.



ಬೆಳಗಾದ ಮೇಲೆ ನೋಡುವುದೇನನ್ನು? ಅಗ್ನಿಕುಂಡದ ಗಿರಿಶಿಖರವೇ ಕಳಚಿ ಅದರ ಅರ್ಧ ಮೈಯನ್ನು ಕೆತ್ತಿಕೊಂಡೇ ನೆಲಸಮವಾಗಿತ್ತು. ಬಂಗ್ಲೆ, ಕಾಫಿ ಯಾಲಕ್ಕಿ ತೋಟಗಳು, ಎಷ್ಟೋ ಒಕ್ಕಲು ಮನೆಗಳು, ಗದ್ದೆ ಎಲ್ಲವೂ ಈ ಮಣ್ಣಿನ ರಾಶಿಯ ಗರ್ಭದೊಳಗೆ! ಆ ಬೆಟ್ಟದ ಉಳಿದ ಭಾಗವು ಏರು ತಗ್ಗಾಗಿ ರಕ್ತವರ್ಣದಿಂದ ಭಯೋತ್ಪಾದಕವಾಗಿತ್ತು. ಕೆಸರು ನೀರು ಹರಿದು ಹರಿದು ಎಲ್ಲ ಕಡೆಯಲ್ಲೂ ಕೆಂಪು. ದಿಗಂತವು ರಕ್ತರಾಗದಿಂದ ಇದೇ ಕೆನ್ನೀರು ಅಲ್ಲಿಗೆ ಸಿಡಿಯಿತೋ ಎಂಬಂತೆ ಇತ್ತು. ಸಿಕ್ಕಾಬಟ್ಟೆ ಮರಗಳು ಬಿದ್ದಿದ್ದುವು. ಭಾರಿ ಭಾರಿ ಬಂಡೆಗಳು ಬುಡ ಕಳಚಿ ನೂರಿನ್ನೂರು ಗಜ ದೂರ ಉರುಳಿ ನೆಲಕಚ್ಚಿದ್ದುವು. ಅಳಿದುಳಿದ ಒಕ್ಕಲುಗಳೆಲ್ಲ ನೀರವ. ಗೋಪಾಲನು ಮಾತ್ರ "ಅಯ್ಯೋ ನನ್ನನ್ನು ತೆಗೆದುಕೊಂಡು ಹೋಗದೆ ಇಂತಹ ಅನ್ಯಾಯ ಮಾಡಿದೆಯಾ ದೇವರೇ" ಎಂದು ಅಳುತ್ತ ಈ ದೃಶ್ಯವನ್ನು ನೋಡಲಾರದೇ ಕುಕ್ಕರಿಸಿದನು. ಬೇರೆಯವರು ಅವನನ್ನು ಅಲ್ಲಿಂದ ದೂರ ಸಾಗಿಸಿದರು. ಮಳೆ ಮಾತ್ರ ಇದೊಂದೂ ತಿಳಿಯದಂತೆ ಅಥವಾ ಇನ್ನೂ ಹಗೆತನ ಉಳಿದಿರುವಂತೆ ದ್ವಿಗುಣಿತ ರಭಸದಿಂದ ಬಡಿಯತೊಡಗಿತ್ತು. "ನನ್ನ ಒಡಲಿಗೆ ಘಾಸಿಮಾಡಿದುದಕ್ಕೆ ನೋಡು ಪ್ರತಿಫಲ" ಎಂದು ಆ ಕೆಂಪು ಮೈ ಗಹಗಹಿಸಿ ನಗುವಂತೆ ಕಾಣುತ್ತಿತ್ತು.

ಸಿಡಿಲು ಹೊಡೆವೊಡೆ ಹಿಡಿದ ಕೊಡೆ ಕಾವುವೇ
ಮುನಿದು ಪೊಡವಿನುಂಗುವಡೆ ಮನೆ ತಾಂಗುವುದೆ
ಕವಿದು ಹೆಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡ ಬಹವೇ...
– ರಾಘವಾಂಕ

# ಪಂಜರದ ಅರಗಿಳಿ

## (ನಾಲ್ಕನೇ ಕತೆ –೧೯೪೮)



ಈಗ ಸುಮಾರು ನೂರೈವತ್ತು ವರ್ಷಗಳ ಹಿಂದಿನ ಸಂಗತಿ ಕಾವೇರಿಯಿಂದಮಾ ನೇತ್ರಾವತಿವರಮಿರ್ದ ನಾಡದಾ ಕೊಡಗು. ಇದರ ಅಧಿಪತಿ ವೀರಶೈವ ಪಂಥದ ಲಿಂಗರಾಜನು. ಇವನು ಎಷ್ಟು ಕ್ರೂರಿಯೋ ಅಷ್ಟೇ ಉದಾರಿಯೂ ಹೌದು. ಕೇವಲ ಸಣ್ಣಪುಟ್ಟ ತಪ್ಪುಗಳಿಗೂ ಮರಣ ದಂಡನೆಯನ್ನು ವಿಧಿಸಿ, ಆ ಶಿಕ್ಷೆಯನ್ನು ಅತಿ ಭೀಷಣ ರೀತಿಯಿಂದ ನೆರವೇರಿಸಿ ಅದನ್ನು ನೋಡಿ ಆನಂದಿಸುತ್ತಿದ್ದನು. ರಾಜಾಸೀಟಿನ ಬಂಡೆಗಳ ಮೇಲಿಂದ ನೂಕಿಸುವುದು, ಆನೆಯಿಂದ ತಲೆ ತುಳಿಸುವುದು, ಸೆಳವಿರುವ ಹೊಳೆಯ ಮಡುವಿಗೆ ಕೈಕಾಲು ಕಟ್ಟಿ ಎಸೆಯುವುದು ಇವೇ ಮುಂತಾದ ಅಮಾನುಷ ರೀತಿಗಳಿಂದ ತಪ್ಪಿತಸ್ಥರನ್ನು ಕೊಲ್ಲಿಸುತ್ತಿದ್ದನು. ಹಾಗೆಯೇ ಅಲ್ಪೋಪಕಾರಗಳಿಗೆ ಅವನಿಗೆ ಮೆಚ್ಚಿಗೆಯಾದರೆ ಜಹಗೀರು, ಉಂಬಳಿ, ಜಮ್ಮಗಳಿಂದ ಜನರನ್ನು ಗೌರವಿಸುತ್ತಿದ್ದನು. ಆಗಿನ ಕಾಲದ ಎಲ್ಲಾ ರಾಜರಂತೆ ವೈಭವಶಾಲಿಯೂ ನಿರಂಕುಶ ಪ್ರಭುವೂ ಉದಾರಿಯೂ ಆದವನು ಲಿಂಗರಾಜ. ಪ್ರಜಾಪ್ರಭುತ್ವವಿಲ್ಲದಿದ್ದರೂ ಪ್ರಜೆಗಳು ಸುಖ ಸಂತುಷ್ಟಿಯಿಂದಲೇ ಇರುತ್ತಿದ್ದರು. ರಾಜನ ಕಠಿಣ ಶಿಕ್ಷೆಗೆ ಹೆದರಿ ಜನರು ಸದಾ ಸನ್ಮಾರ್ಗದಲ್ಲಿಯೇ ನಡೆಯುತ್ತಿದ್ದರು. ಆದರೂ ದೊಡ್ಡವರ ಮನಸ್ಸೂ, ಸಮುದ್ರದ ಅಲೆಗಳೂ ತೀರ ಅಸ್ಥಿರ. ಹಾಗಾಗಿ ಆಗಾಗ್ಗ ಅನೇಕರು ರಾಜನ ಕ್ರೂರ ಶಿಕ್ಷೆಗೆ ಈಡಾಗುತ್ತಿದ್ದರು.

ಲಿಂಗರಾಜನ ರಾಜಧಾನಿ ಮಡಿಕೇರಿ. ಪುರ ಮಧ್ಯದ ಉನ್ನತ ಪ್ರದೇಶದಲ್ಲಿ ರಾಜವೈಭವಕ್ಕೊಪ್ಪುವ ಅರಮನೆ. ಇಲ್ಲಿ ರಾಜನ, ಅವನ ಅಂತಃಪುರದವರ, ಪರಿವಾರದವರ ವಾಸ. ಕೋಟೆಯ ಪ್ರಾಕಾರಗಳಿಂದ ನೋಡಿದರೆ ಇಡೀ ಮಡಿಕೇರಿಯು ಸುತ್ತಲೂ ಹಬ್ಬಿರುವುದು, ಒಂದು ಚಿತ್ರಪಟದಲ್ಲಿ ಚಿತ್ರಿಸಿದಂತೆ, ಸುಂದರವಾಗಿ ತೋರುವುದು. ರಾಜಾಸೀಟು ಅವನ ಕೇಳೀ ಶೈಲ. ಬೆಟ್ಟದ ಅಂಚಿನಲ್ಲಿ ಪ್ರತಿ ಸಾಯಂಕಾಲವೂ ರಾಜನು ಬಂದು ಕುಳಿತುಕೊಳ್ಳುತ್ತಿದ್ದುದರಿಂದ ಆ ಸ್ಥಳಕ್ಕೆ (ಫರಂಗಿ ವಿದ್ಯೆ ಕೊಡಗಿಗೆ ಬಂದ ಅನಂತರ) ರಾಜಾಸೀಟು ಎನ್ನುವ ಪವಿತ್ರ ನಾಮಧೇಯ ದೊರೆಯಿತು. ಮಡಿಕೇರಿಯಲ್ಲಿರುವಾಗ ಪಟ್ಟಣದ ಎಲ್ಲಾ ಭಾಗಗಳಲ್ಲಿಯೂ ಅವನಿಗೆ ಸಂಚರಿಸಬೇಕು. ಚೆನ್ನಾಗಿ ಸಿಂಗರಿಸಿಕೊಂಡು, ಸೊಕ್ಕಿ ಬೆಳೆದ ಬಿಳಿ ಕುದುರೆಯ ಮೇಲೆ ಕುಳಿತು, ಠೀವಿಯಿಂದ ಮಡಿಕೇರಿಯ ಯಾವ ಮೂಲೆಗೂ ಅವನು ಹೋಗುತ್ತಿದ್ದನು. ಸಮೀಪದ ಹಳ್ಳಿಗಳವರೆಗೂ ಹೋಗಿ ಬರುವುದಿತ್ತು. ಈ ವಾಯುವಿಹಾರಾನಂತರ ರಾಜಾಸೀಟಿಗೆ ಹೋಗಿ ಅಲ್ಲಿ ಒಂದು ಅರ್ಧ ಗಂಟೆ ಕುಳಿತು ಹುಕ್ಕಾ ಸೇದಿ ಹಿಂತಿರುಗುವುದು ವಾಡಿಕೆ. ಪೇಟೆಯಲ್ಲಿ ಹೋಗುವಾಗ ರಾಜನ ಸಮೀಪ ಯಾರು ಬೇಕಾದರೂ ಹೋಗಿ ತಮ್ಮ ಅಹವಾಲುಗಳನ್ನೂ ಕಷ್ಟಗಳನ್ನೂ ಹೇಳಿಕೊಳ್ಳಬಹುದಾಗಿತ್ತು. ಅವನು ಇವನ್ನೆಲ್ಲ ಸಹನೆಯಿಂದ ಕೇಳಿ ಸರಿಪಡಿಸುತ್ತಿದ್ದನು. ಜತೆಗಲ್ಲಿ ಬರುತ್ತಿದ್ದ ಕಾರಕೂನನಿಗೆ ಇವುಗಳನ್ನು ಪಟ್ಟಿ ಮಾಡಿಕೊಳ್ಳುವುದೇ ಕೆಲಸ. ರಾಜಾಸೀಟಿನಲ್ಲಿ ರಾಜನು ಸಂಜೆಯ ತಂಗಾಳಿಯನ್ನು ಯಥೇಚ್ಛವಾಗಿ ಸೇವಿಸಿ, ಹುಕ್ಕಾದ ಹೊಗೆಯನ್ನು ಅದಕ್ಕೆ ಸುಳಿಸುಳಿಯಾಗಿ ಮಿಶ್ರಿಸಿ, ಪ್ರಕೃತಿಯೊಡನೆ ತನ್ಮಯನಾಗುತ್ತಿದ್ದನು. ರಾಜ್ಯದ ಹೊಣೆಗಾರಿಕೆಯನ್ನೂ ಶತ್ರುಗಳ ಕೀಟಲೆಯನ್ನೂ ಆ ಹೊತ್ತು ಮರೆತು, ಮನಸ್ಸನ್ನು ಸ್ವಚ್ಛಂದವಾಗಿ ತರಂಗ ತರಂಗವಾಗಿ ಹಬ್ಬಿರುವ ಬೆಟ್ಟ ಕಣಿವೆಗಳಲ್ಲಿ ಹರಿಯಲು ಬಿಡುತ್ತಿದ್ದನು. ರಾಜಾಸೀಟಿನ ದೃಶ್ಯ ಅನುಪಮ ಅದ್ವಿತೀಯ. ದೇವ ಶಿಲ್ಪಿ ತನ್ನ ಸಕಲ ಶಕ್ತಿ ಸಾಮರ್ಥಗಳನ್ನೂ ಈ ಒಂದು ಅದ್ಭುತ ದೃಶ್ಯವನ್ನು, ಪವಾಡವನ್ನು ನಿರ್ಮಿಸಲು ವೆಚ್ಚಿಸಿದನೋ ಕೃತಿ ಸಾಫಲ್ಯವನ್ನು ಪಡೆದನೋ ಎಂಬಂತೆ ಇದೆ ಇಲ್ಲಿಯ ಮನೋಹರ ದೃಶ್ಯ, ಸೃಷ್ಟಿ ಸೌಂದರ್ಯದ ಬೆರಗು.

ಒಂದು ದಿವಸ ಲಿಂಗರಾಜನು ಎಂದಿನಂತೆ ಸಂಜೆಯ ಹೊತ್ತು ಕುದುರೆ ಸವಾರಿ ಮಾಡುತ್ತಾ ಬ್ರಾಹ್ಮಣರ ಅಗ್ರಹಾರದ ಕಡೆಗಾಗಿ ಹೋಗುತ್ತಿದ್ದನು. ಅಲ್ಲೇ ಸಮೀಪದಲ್ಲಿ ಹುಲ್ಲುಗಾವಲಿನಲ್ಲಿ ಆಡುತ್ತಿದ್ದ ಸಣ್ಣ ಮಕ್ಕಳು ರಾಜನು ಬರುತ್ತಿದ್ದುದನ್ನು ನೋಡಿ ಆಟವಾಡುವುದನ್ನು ಬಿಟ್ಟು ಸಾಲಾಗಿ ನಿಂತು ನೋಡತೊಡಗಿದರು. ರಾಜನು ಮಡಿಕೇರಿಯಲ್ಲಿರುವಾಗ ಸಾಧಾರಣ ವಾರಕ್ಕೊಂದಾವರ್ತಿ ಆ ಕಡೆ ಬರುತ್ತಿದ್ದರೂ ಮಕ್ಕಳಿಗೆ ಈ ದೃಶ್ಯ ಆಕರ್ಷಣೀಯವಾಗಿತ್ತು. ಅಲಂಕಾರ ಪುರುಷ, ವೈಭವದಿಂದ ರಾಜನು ಕುದುರೆಯ ಮೇಲೇರಿ ಜಬರದಸ್ತಿನಿಂದ ದೌಲತ್ತಿನಿಂದ ಹಾಗೆ ಅಡ್ಡಹಾಯುವಾಗ ದೊಡ್ಡವರೇ ಬೆರಗಾಗಿ ನಿಂತು ನೋಡುತ್ತಿದ್ದರು. ಹಾಗಿರುವಾಗ ಮಕ್ಕಳು ಆಟ ನಿಲ್ಲಿಸಿ ನೋಡಿದುದರಲ್ಲಿ ಆಶ್ಚರ್ಯವೇನು? ರಾಜನು ನಾಲ್ಕು ಕಡೆಗೂ ದೃಷ್ಟಿ ಬೀರುತ್ತಿದ್ದನು. ಪ್ರಜೆಗಳು ಅರ್ಪಿಸುವ ವಂದನೆಗಳನ್ನು ದರ್ಪದಿಂದಲೂ ಠೀವಿಯಿಂದಲೂ ಸ್ವೀಕರಿಸುತ್ತಿದ್ದನು. ಈ ಮಕ್ಕಳು ನಿಂತು ನೋಡುತ್ತಿದ್ದರು. ರಾಜನೂ ಅವರನ್ನು ನೋಡಿದನು. ನೋಡುತ್ತಿದ್ದ ಹಾಗೆಯೇ ಒಬ್ಬಳು ಸಣ್ಣ ಹುಡುಗಿಯು ರಾಜನ ದೃಷ್ಟಿಯನ್ನು ಆಕರ್ಷಿಸಿದಳು. ರಾಜನು ಕುದುರೆಯನ್ನು ನಿಲ್ಲಿಸಿ ಆ ಹುಡುಗಿಯನ್ನು ತನ್ನ ಬಳಿಗೆ ಬರುವಂತೆ ಕರೆದನು. ಅವಳು ಹೆದರಿಕೊಂಡು ಮಕ್ಕಳ ಹಿಂದೆ ಅಡಗಿದಳು. ರಾಜನು ಮುಗುಳ್ನಗುತ್ತ

ತಾನೇ ಕುದುರೆಯಿಂದ ಇಳಿದುಕೊಂಡು ಹೋಗಿ, "ನನ್ನ ಜತೆಯಲ್ಲಿ ಬರುವೆಯಾ ಮಗೂ?" ಎಂದು ಮೃದುವಾಗಿ ಕೇಳಿದನು. ಎಂಟು ವರ್ಷದ ಹುಡುಗಿಯ ಮುಖ ಕೆಂಪಾಯಿತು. ಉಳಿದ ಹುಡುಗಿಯರು, ಹುಡುಗರು ದೂರ ಸರಿದು ಏನೆಂದು ತಿಳಿಯದೆ ಏನಾಗುವುದೆಂದು ಗೊತ್ತಾಗದೆ ಕಣ್ಣರಳಿಸಿ ನಿಂತರು. ಹುಡುಗಿಯು ಮಾತಾಡಲಿಲ್ಲ. "ನಿನಗೆ ಒಳ್ಳೆಯ ಮಿಠಾಯಿ ಕೊಡುತ್ತೇನೆ, ಚಂದದ ಬೊಂಬೆಗಳನ್ನು ಕೊಡುತ್ತೇನೆ. ಬಾಮ್ಮಾ ಬಾ!" ರಾಜನು ನಸುನಗುತ್ತಾ ನುಡಿದನು. ಹುಡುಗಿಯು ಕಣ್ಣನ್ನು ಅಗಲವಾಗಿ ಬಿಟ್ಟಳು. ತಿಂಡಿಗಳು ಆಟದ ಬೊಂಬೆಗಳು, ರಾಜನು ತನ್ನ ಹತ್ತಿರ ಬಂದು ಹಸನ್ಮುಖದಿಂದ ಮಾತನಾಡುವುದು ಇವೆಲ್ಲ ಅವಳಿಗೆ ಒಂದು ಸಂತೋಷಕರ ಸ್ವಪ್ನದಂತೆ ತೋರಿದುವು. ಅಷ್ಟರಲ್ಲಿಯೇ ಅಲ್ಲಿ ಸಮೀಪದಲ್ಲಿ ಸೇರಿದ್ದವರು ಆ ಬೀದಿಯ ಜನರು, ಅಲ್ಲಿ ಬಂದು ಸುದೂರದಲ್ಲಿ ಆಶ್ಚರ್ಯದಿಂದ ನಿಂತರು. ಹುಡುಗಿಯ ಮುಖಭಾವದಿಂದ ಅವಳು ಬರಲು ಒಪ್ಪಿದಳೆಂದು ರಾಜನು ಅರಿತನು. ಅಲ್ಲಿ ಸೇರಿದ್ದ ಬ್ರಾಹ್ಮಣರೊಡನೆ "ಈ ಹುಡುಗಿ ಯಾರು?" ಎಂದು ಕೇಳಿದನು. "ಅವಳು ಹುಜೂರರ ಕರಣೀಕರ ಮಗಳು" ಎಂದನು ಅಲ್ಲಿದ್ದ ವಿಪ್ರ ಮಹಾಶಯನೊಬ್ಬನು. "ಓಹೋ ನಮ್ಮ ಸುಬ್ಬಯ್ಯನವರ ಮಗಳೇ? ಉತ್ತಮವಾಯಿತು. ಬಾಮ್ಮಾ ನಾವು ಹೋಗೋಣ" ಎಂದು ರಾಜನು ಆ ಹುಡುಗಿಯನ್ನು ಕೈ ಹಿಡಿದು ಕರೆದುಕೊಂಡು ಹೋದನು. ತನ್ನ ಕುದುರೆಯ ಮೇಲೆ ಕುಳ್ಳಿರಿಸಿ ಅರಮನೆಗೇ ಸೀದಾ ಹೋದನು. ಹುಡುಗಿಗಂಭೀರವಾಗಿ, ಅಲುಗಾಡದೇ, ಕುದುರೆಯ ಮೇಲೆ ರಾಜನ ಮುಂದೆ ಕುಳಿತುಕೊಂಡು ಹೋದಳು. ಉಳಿದವರು ರಾಜನು ಮರೆಯಾಗುವವರೆಗೂ ಎವೆಯಿಕ್ಕದೇ ನಿಂತು ನೋಡುತ್ತಿದ್ದರು. "ದೇವಿ ಎಂತಹ ಅದೃಷ್ಟವಂತೆ" ಎಂದಳು ಒಬ್ಬಳು. "ಈ! ಅಲ್ಲ ಕಣೇ! ರಾಜರು ಅವಳನ್ನು ಆ ಕಾಳಿಕಾ ದೇವಿಗೆ ಬಲಿಕೊಡಲು ಕರೆದುಕೊಂಡು ಹೋಗಿರಬೇಕು." "ಅವರು ನಗುತ್ತಿರಲಿಲ್ಲವೇ! ಹಾಗೆ ಬಲಿಕೊಡಲು ಆಗಿದ್ದರೆ ಕೈ ಹಿಡಿದು ಮೆಲ್ಲನೆ ಕರೆದುಕೊಂಡು ಹೋಗುತ್ತಿದ್ದರೇ?" ಹೀಗೆ ತಮಗೆ ಬೇಕಾದ ಹಾಗೆ ಹುಡುಗರೂ ಹುಡುಗಿಯರೂ ವ್ಯಾಖ್ಯಾನ ಮಾಡಿದರು. ಹಲವರಿಗೆ ಈ ಘಟನೆಯಿಂದ ಒಂದು ಅವ್ಯಕ್ತ ಅಸೂಯೆ ಮೂಡಿತು. ಆದರೆ ಕಾಳಿಗೆ ಬಲಿಕೊಡಲು ದೇವಿಯನ್ನು ರಾಜನು ಕರೆದುಕೊಂಡು ಹೋದನೆ ಎಂಬ ಊಹೆಯಿಂದ ಒಂದು ಬಗೆಯ ಕ್ರೂರಾನಂದವೂ ಆಯಿತು. ದೊಡ್ಡವರು "ಇದೇನಪ್ಪಾ! ರಾಜನ ದೃಷ್ಟಿ ಈ ಸಣ್ಣ ಹುಡುಗಿಯ ಮೇಲೆ ಬಿತ್ತು! ರಾಜನಿಗೆ ಮಕ್ಕಳಿದ್ದಾರೆ. ಆದರೆ ದೇವಿಯು ಸೌಂದರ್ಯದ ಗಣಿಯಂತೆ ಈ ಸಣ್ಣ ಪ್ರಾಯದಲ್ಲಿಯೇ ಇದ್ದಾಳೆ. ಇಂಥವಳು ತನ್ನ ಅರಮನೆಯಲ್ಲಿ ಬೆಳೆಯಲಿ ಎಂದು ರಾಜನ ಉದ್ದೇಶವಾಗಿರಬೇಕು" ಎಂದರು. "ಬ್ರಾಹ್ಮಣ ಸುಬ್ಬಯ್ಯನವರ ಮನೆಯಲ್ಲಿ ಹುಟ್ಟಿದ್ದರೂ ವಸಂತ ಕಾಲೇ ಸಂಪ್ರಾಪ್ತೇ ಕಾಕಃ ಕಾಕಃ ಪಿಕಃ ಪಿಕಃ" ಎಂದು ಸೇರಿಸಿದನು ಇನ್ನೊಬ್ಬ ಬುಧವರೇಣ್ಯ. "ಶೂದ್ರ ರಾಜನು ಬ್ರಾಹ್ಮಣರ ಹುಡುಗಿಯನ್ನು ಈ ರೀತಿ ಕರೆದೊಯ್ಯುವುದು ನಮ್ಮ ಕುಲಕ್ಕೇ ಅಮಂಗಳ"ವೆಂದು ಹೇಳಲು ಹೆದರಿದರೂ ದೃಷ್ಟಿ ಚಾಂಚಲ್ಯದಿಂದಲೂ ಭ್ರೂಭಂಗಿಯಿಂದಲೂ ಹಾಗೆ ಸೂಚಿಸಿದನು ಇನ್ನೊಬ್ಬ ಭೂಸುರೋತ್ತಮನು.

ಈ ಚುಚ್ಚು ಸುದ್ದಿಯು ಸುಬ್ಬಯ್ಯನವರ ಕಿವಿಗೆ ಮುಟ್ಟಲು ಬಹಳ ಹೊತ್ತು ಹಿಡಿಯಲಿಲ್ಲ. ಅಲ್ಲೇ ಸಮೀಪದಲ್ಲಿ ಅವರ ಮನೆಯಿತ್ತು. ದಿನ ನಿತ್ಯದ ರಾಜ್ಯದ ಕಾರ್ಯಗಳನ್ನು ಮುಗಿಸಿ ಬಂದು ಬ್ರಾಹ್ಮಣರ ಗುರುಮಠಕೆ ಸಂಬಂಧಿಸಿದ ಲೆಕ್ಕಪತ್ರ ಮುಂತಾದವುಗಳಲ್ಲಿ ಮಗ್ನರಾಗಿದ್ದ ಅವರಿಗೆ ತನ್ನ ಮಗಳನ್ನು ರಾಜನು ಕರೆದೊಯ್ದನು ಎನ್ನುವ ಸುದ್ದಿ ಸಿಡಿಲು ಬಡಿದಂತೆ, ಮನೆಯ ಮಾಡು ತನ್ನ ಮೇಲೆ ಕಳಚಿ ಬಿದ್ದಂತೆ ಆಯಿತು. ಒಂದು ನಿಮಿಷ ಮನೆಯೇ ಸ್ತಬ್ಧವಾಯಿತು. ಮಹಾವರ್ಷಾಘಾತದ ಮೊದಲು ಪ್ರಕೃತಿ ಶಾಂತವಾಗಿರುವಂತೆ, ಸುಬ್ಬಯ್ಯನವರ ಮನೆಯಿಡೀ ನಿಶ್ಶಬ್ದವಾಯಿತು. ಅವರ ಮನೆಯ ನೆರೆಹೊರೆಯವರು ಎಲ್ಲರೂ ಈಗಾಗಲೇ ಅಲ್ಲಿ ಸೇರಿದ್ದರು. ಯಾರೂ ಏನೂ ಹೇಳುವಂತಿಲ್ಲ. ಸುಬ್ಬಯ್ಯನವರ ಹುಲಿಮೀಸೆಗಳು ತಕಪಕನೆ ಕುಣಿದುವು. ಕಣ್ಣುಗಳು ಕೆಂಡವನ್ನು ಕಾರುವಂತೆ ಗರಗರನೆ ತಿರುಗಿದುವು. ಪೂರ್ವ ಕಾಲದ ಋಷಿಗಳ ಸಾಮರ್ಥ್ಯ ಪ್ರಭಾವಗಳು ಇದ್ದಿದ್ದರೆ ಇಷ್ಟರಿಂದಲೇ ಲಿಂಗರಾಜನು ಉರಿದು ಹೋಗುತ್ತಿದ್ದನು. ಸುಬ್ಬಯ್ಯನವರು ತಿಳಿಗೇಡಿಯಲ್ಲ, ದುಡುಕುವವರಲ್ಲ. ಆದರೂ ಅವರ ಬಾಯಿಯಿಂದ "ಅಯ್ಯೋ ಮೂರ್ಖ, ಏನನ್ನು ಮಾಡಿದೆ" ಎಂಬ ಉದ್ಗಾರಗಳು ಹೊರಟವು. ಆದರೆ ಅಷ್ಟರಲ್ಲಿಯೇ ಅವರಿಗೆ ತಾನು ಹೇಳಿದ ಮಾತುಗಳು ಕಟುತ್ವದ ಅರಿವಾಗಿ ನಾಲಗೆಯನ್ನು ಬಿಗಿಹಿಡಿದರು. ಲಿಂಗರಾಜನ ಆಳ್ವಿಕೆಯಲ್ಲಿ ಗೋಡೆಗಳಿಗೂ ಕಿವಿಯಿದ್ದುವು ಎಂದು ಜನರು ಆಡಿಕೊಳ್ಳುತ್ತಿದ್ದರು. ಹಿಂದೆ ಅನೇಕ ಜನರಿಗೆ ಈ ರೀತಿ ಮನೆಯಲ್ಲಿಯೇ ಆದರೂ ಹಿಡಿತ ತಪ್ಪಿ, ರಾಜವಿರುದ್ಧೋಕ್ತಿಗಳನ್ನು ಆಡಿದುದರ ಫಲಿತಾಂಶವಾಗಿ ಕ್ರೂರ ಶಿಕ್ಷೆಗಳು ವಿಧಿಸಲ್ಪಟ್ಟಿದ್ದುವು. ಸುಬ್ಬಯ್ಯನವರ ಒಂದು ಮಾತಾಗಲೀ ಅವರ ಕೋಪದ ಸುಳಿವಾಗಲೀ ರಾಜನಿಗೆ ತಲಪಿದರೆ ಮತ್ತೆ ಅವರ ಗತಿ ರಾಜಾಸೀಟಿನ ಪಾತಾಳ ಗಹ್ವರ ಚುಂಬನವೇ. ಬೇರೆ ಯಾರಿಗೂ ಬಾಯಿಬಿಡಲು ಧೈರ್ಯವಿಲ್ಲ. ಹೀಗೆ ಎಲ್ಲರೂ ಕಳವಳದಿಂದ ಕುಳಿತಿದ್ದರು. ಸಂಜೆ ಮಸಕಾಗಿ ಕತ್ತಲಾಯಿತು. ಸುಬ್ಬಯ್ಯನವರ ಪತ್ನಿ ಗೌರಮ್ಮನವರು ಒಂದು ಮಿಣುಕು ಹಣತೆಯನ್ನು ತಂದು ಚಾವಡಿಯಲ್ಲಿಡುವುದೂ ರಭಸದ ಗಾಳಿ ಬೀಸಿ ಅದು ಆರಿ ಹೋಗುವುದೂ ಸಮವಾಯಿತು. ಆಗಲೇ ರಾಜನ ಓಲೇಕಾರನು ಧಾವಿಸಿ ಕರಣೀಕರ ಮನೆಯನ್ನು ಪ್ರವೇಶಿಸಿದನು. ಗೌರಮ್ಮನವರ ಎದೆ ಬಿರಿಯುವಂತಾಯಿತು; ಆಕಾಶವೇ ಕವಿದು ಬಿದ್ದಂತೆ ಅನ್ನಿಸಿತು – ಸಂಜೆಯ ಹೊತ್ತು ಅಪಶಬ್ದಗಳು ಯಜಮಾನರ ಬಾಯಿಯಿಂದ ಹೊರಟಿರುವುವು, ದೀಪ ನಂದಿ ಹೋಯಿತು. ಆಗಲೇ ಯಮರಾಜನ ಕರೆಯಂತೆ ರಾಜದೂತನ ಆಗಮನ. ಅಪಶಕುನ ಪರಂಪರೆ, ಮನೆಯ ಮುಂದೆ ಬೆಕ್ಕುಗಳೆರಡು ಜಗಳವಾಡಿ ವಿಕಾರ ಭಯಂಕರ ಆರ್ತನಾದ ಮಾಡಿ, ಯಾರಿಂದಲೋ ಅಟ್ಟಲ್ಪಟ್ಟು ದೂರ ಓಡಿ, ಅಲ್ಲಿಂದ ಗುರುಗುಟ್ಟುತ್ತಿದ್ದುವು. ಕಠಿಣ ದುಃಖ ಪ್ರಸಂಗಗಳಲ್ಲಿ ಮನಸ್ಸು ತಳಮಳಗೊಂಡಿರುವಾಗ, ಈ ತರಹದ ಯಃಕಶ್ಚಿತ್ ವಿಷಯಗಳೂ ಸಾಗರ ವೈಶಾಲ್ಯವನ್ನೂ ದಂಡಕಾರಣ್ಯ ಭೀಕರತೆಯನ್ನೂ ತಾಳಿ ಕಾಡುವುವು. ದೂತನು "ತಾವು ಈಗಿಂದಲೇ ಅರಮನೆಗೆ ಹೊರಟು ಬರಬೇಕೆಂದು ಮಹಾಪ್ರಭುಗಳವರು ಅಪ್ಪಣೆ ಮಾಡಿದ್ದಾರೆ" ಎಂದನು. ಏಕೆ, ಏನು ಎನ್ನುವ ಪ್ರಶ್ನೆಗಳಿಗೆ ಉತ್ತರವೀಯಲು ಅವನಿಗೆ ತಿಳಿದಿರಲಿಲ್ಲ. ಸುಬ್ಬಯ್ಯನವರು ಕೂಡಲೇ ಸ್ತಿಮಿತಮನಸ್ಕರಾಗಿ, ಎಂದಿನ ಉಡುಪನ್ನು ಧರಿಸಿ, ಜರಿ ರುಮಾಲು, ಪೋಷಾಕುಗಳಿಂದ ಅಲಂಕೃತರಾಗಿ ರಾಜಾಸ್ಥಾನದ ಕಡೆಗೆ ರಭಸದಿಂದ ತೆರಳಿದರು.

ತಾಬೇದಾರಿಕೆಯಲ್ಲಿ ಒಂದೊಂದು ವರ್ತನೆಯೂ ಸರಿಯಾಗಿಯೇ ನಡೆಯಬೇಕು. ಗೌರಮ್ಮನವರು ತನ್ನ ಮಾಂಗಲ್ಯದ ಉಳಿವಿಗೆ, ಯಜಮಾನರ ರಕ್ಷಣೆಗೆ, ಮಗಳ ಅಭ್ಯುದಯಕ್ಕೆ ಎಲ್ಲದಕ್ಕೂ ಎಲ್ಲಾ ದೇವ ದೈವಗಳಿಗೆ ಹರಕೆ ಹೇಳಿಕೊಂಡರು. ಸುಬ್ಬಯ್ಯನವರು ಹೋದ ಮೇಲೆ ನೆರೆಕರೆಯವರು ಒಬ್ಬೊಬ್ಬರೇ ಪಿಸು ಮಾತಾಡುತ್ತಾ ಜಾರಿದರು. ಮನೆಯವರು  ತಾಯಿ ಮತ್ತು ಮಗ, ಇತರ ಆಳುಗಳು  ಚಾವಡಿಯಲ್ಲಿಯೇ ಏನು ಮಾಡುವುದೆಂದು ತಿಳಿಯದೇ ಉಳಿದರು.

ಸುಬ್ಬಯ್ಯನವರ ಬರವನ್ನೇ ಎದುರು ನೋಡುತ್ತಾ ರಾಜನು ಅರಮನೆಯ ಹೊರ ಪ್ರಾಕಾರದಲ್ಲಿ ನಿಂತಿದ್ದನು. ಉದ್ವಿಗ್ನತೆಯನ್ನುಳಿದು ಎಂದಿನಂತೆ ಸುಬ್ಬಯ್ಯನವರು ಮುಖ ಮಾಡಿಕೊಂಡು, ರಾಜನಿಗೆ ನಮಿಸಿದರು. ಅವರಿಗೆ ಆಶ್ಚರ್ಯ, ಸಂಭ್ರಮ, ಸಂತೋಷಗಳಾಗುವಂತೆ ನಂಬಲೂ ಆಗದಿರುವಂತೆ, ರಾಜನೆಂದನು, “ಬರಬೇಕು, ಬರಬೇಕು, ಕರಣೀಕರು!” ಎಂದು ಭುಜದ ಮೇಲೆ ಕೈಹಾಕಿಕೊಂಡೇ ಕರೆದುಕೊಂಡು ಒಳ ಹೊಕ್ಕನು. ಬಲಿಕೊಡುವ ಮೊದಲು ಕುರಿಯನ್ನು ಅಲಂಕಾರ ಮಾಡಿ, ಪ್ರೀತಿಯಿಂದ ಮೈದಡವುತ್ತಾರಲ್ಲವೇ, ಹಾಗಾಯಿತು ಕರಣೀಕರಿಗೆ. ಒಳಗಿನ ವಿಶಾಲ ಸಾಲೆಯಲ್ಲಿ ಅವರು ಮಂಡಿಸಿದರು. ರಾಜನೇ ಮಾತನ್ನು ಪ್ರಾರಂಭಿಸಿದನು. “ಕರಣೀಕರೇ, ಈ ಅವೇಳೆಯಲ್ಲಿ ನಿಮ್ಮನ್ನು ಏಕೆ ಬರಹೇಳಿದೆನೆಂದು ನಿಮಗೆ ತಿಳಿದಿರಲೇಬೇಕು. ನಿಮ್ಮ ಮಗಳಂತೆ ಅವಳು, ನಾನು ಈ ಸಂಜೆ ಅಗ್ರಹಾರದ ಕಡೆಗೆ ಹೋಗಿದ್ದಾಗ ಕಂಡೆನು. ಅವಳು ತನ್ನ ರೂಪದಿಂದಲೂ ವರ್ಚಸ್ಸಿನಿಂದಲೂ ನನ್ನ ಸಂಪೂರ್ಣ ವಿಶ್ವಾಸವನ್ನು ಸೆಳೆದಿದ್ದಾಳೆ. ಇಂಥ ಯೋಗ್ಯತೆ ಇರುವ ಹುಡುಗಿ ನಿಮ್ಮ ಮಗಳು ಎಂದು ಕೇಳಿ ತುಂಬಾ ಸಂತೋಷವಾಯಿತು.” ಸುಬ್ಬಯ್ಯನವರು ಕಣ್ಣೇ ಸರ್ವಸ್ವವಾಗಿ ನೋಡುತ್ತಿದ್ದರು. “ಅವಳು ನಮ್ಮ ಅರಮನೆಯಲ್ಲಿ ಬೆಳೆಯಲಿ. ರಾಜರ ಅಂತಃಪುರವನ್ನು ಸೇರಲು ಯೋಗ್ಯಳಾದ ಕನ್ಯೆ ಅವಳು. ನನ್ನ ಮಗ ವೀರನು ಈಗ ಇನ್ನೂ ಹುಡುಗ.  ಇಬ್ಬರೂ ಪ್ರಾಪ್ತ ವಯಸ್ಕರಾದಾಗ ಅವರಲ್ಲಿ ವಿವಾಹವೆಸಗಬೇಕೆಂದೇ ನನ್ನ ಇಚ್ಛೆ” ಎಂದನು. ರಾಜನ ಇಚ್ಛೆ ಎಂದರೆ ದಂಡದ ಆದೇಶ ಎಂಬ ಧ್ವನಿ ಕರಣೀಕರಿಗೆ ಗೊತ್ತಿತ್ತು.

ಸುಬ್ಬಯ್ಯನವರು ಮಾತಾಡಲಿಲ್ಲ. ಆದರೆ ಚಾಣಾಕ್ಷನಾದ ರಾಜನಿಗೆ ಈ ಬ್ರಾಹ್ಮಣನ ಮುಖಭಂಗಿಗಳಿಂದಲೇ ಅವರ ಅಸಮಾಧಾನ ಅರಿಯಲು ಕಷ್ಟವಾಗಲಿಲ್ಲ.

“ನಿಮ್ಮ ಅಸಂತುಷ್ಟಿ ಏನು? ಬ್ರಾಹ್ಮಣರ ಹುಡುಗಿ ನಮ್ಮೊಡನೆ ಸಂಬಂಧವೆಸಗುವುದು, ಮಠಾಧಿಕಾರಿಗಳಾದ ನಿಮಗೆ ಸಮ್ಮತವಿಲ್ಲವಲ್ಲವೇ? ಆದರೆ ನಿಮ್ಮ ಹುಡುಗಿಗೇ ಅದು ಇಷ್ಟವಿದ್ದರೆ? ನಿಮಗೆ ನಿಮ್ಮ ಮಗಳ ಮೇಲೆ ತುಂಬಾ ಪ್ರೇಮವಿದೆ. ಅವಳನ್ನೇ ಕೇಳೋಣ. ಅವಳಿಗೆ ಇಲ್ಲಿ ಇರಲು ಇಷ್ಟವೇ ಅಥವಾ ನಿಮ್ಮೊಡನೆ ಹಿಂತಿರುಗಿ ಬರಲು ಇಷ್ಟವೇ ಎಂದು. ಆಗಬಾರದೇ?” ರಾಜನು ಹಸನ್ಮುಖಿಯಾಗಿಯೇ ಇದ್ದನು. ಸುಬ್ಬಯ್ಯನವರ ಮುಖದಲ್ಲಿ ಆಶೋಜ್ಯೋತಿಯೊಂದು ಮಿಂಚಿತು. ಆ ಕ್ಷಣದಲ್ಲಿ ತನ್ನ ಮಗಳು ದೇವಿಯನ್ನು ತಾನು ಮುದ್ದಿಸಿದುದು, “ಅಪ್ಪಾ, ಅಪ್ಪಾ ಕಥೆ ಹೇಳಿ” ಎಂದು ಅವಳು ಯಾವಾಗಲೂ ಕಥೆ ಕೇಳಲು ತನ್ನ ಹತ್ತಿರ ಬರುತ್ತಿದ್ದುದು, ಹಿಂದೊಮ್ಮೆ ಅವಳು ಸಣ್ಣ ಮಗುವಾಗಿರುವಾಗ ಅವಳು ಏನೋ ಒಂದು ಹಠದಿಂದ ಅತ್ತು ಅತ್ತು ಯಾರು ಏನು ಹೇಳಿದರೂ ಸಮಾಧಾನವಾಗದೇ ಇದ್ದಾಗ, ತಾನು ಕಚೇರಿಯಿಂದ ಬಂದು ಎರಡು ಸಲ ಎತ್ತಿ ಆಡಿಸುವಾಗ ಸುಮ್ಮನಾದುದು  ಈ ಮುಂತಾದ ಚಿತ್ರಗಳು ವಿದ್ಯುತ್ತಿನ ವೇಗದಿಂದ ಮಿಂಚಿ ಮಾಯವಾದುವು. “ಆಗಬಹುದು, ಪ್ರಭುಗಳೇ” ಎಂದು ನಮ್ರತೆಯಿಂದ ಬಿನ್ನೈಸಿದರು.

ರಾಜನೇ ಎದ್ದು ದೇವಿಯನ್ನು ಕರೆದು ತರಲು ಒಳಗೆ ಹೋದನು. ಅವಳಾಗಲೇ ಹೊಸ ಉಡುಗೆಗಳಿಂದ ಅಲಂಕೃತಳಾಗಿ ಸುರಕನ್ನೆಯಂತೆ ಶೋಭಿಸುತ್ತಿದ್ದಳು. ಬಡ ಬ್ರಾಹ್ಮಣ ಹುಡುಗಿಯಂತೆ ಜಿಡ್ಡು ಹಿಡಿದ ಹಣೆಯಿಂದಲೂ, ಸಿಕ್ಕಾದ ಹರಡಿದ ಕೂದಲುಗಳಿಂದಲೂ, ಮಾಸಿಮಲಿನವಾದ ಬಟ್ಟೆಯಿಂದಲೂ ಅಳುವಂತಿರಲಿಲ್ಲ. ಕೈಯಲ್ಲಿ ಬೊಂಬೆಗಳೇನು, ಉಡುಪಿನ ಸೌಂದರ್ಯವೇನು, ನೋಟದಲ್ಲಿ ಸಂತೋಷವೇನು! ಎಂತಹ ಬದಲಾವಣೆ ಮೂರು ನಾಲ್ಕು ತಾಸುಗಳಲ್ಲಿ. ಆ ಪ್ರಾಂಗಣಕ್ಕೆ ಬೆಳಕೇ ಬಂದಂತೆ ನಗುನಗುತ್ತಾ ದೇವಿಯು ಬಂದಳು. ತಂದೆಯನ್ನು ನೋಡಿ “ಅಪ್ಪಾ ನೀವು ಇಲ್ಲಿಯೇ ಇರುತ್ತೀರಾ? ಎಂಥಾ ಚಂದದ ಮನೆ ಇದು. ಎಷ್ಟು ದೊಡ್ಡದು! ನನಗೆ ಆಟವಾಡಲು ಬೇಕಾದಷ್ಟು ಬೊಂಬೆಯಿದೆ, ಒಂದು ದೊಡ್ಡ ಕೋಣೆ ತುಂಬಾ ಬಟ್ಟೆ ನನ್ನದೇ ಆಗಿದೆ. ನೀವೂ, ಅಣ್ಣ, ಅಮ್ಮ ಎಲ್ಲರೂ ಇಲ್ಲಿಗೇ ಬಂದುಬಿಡಬೇಕು” ಎಂದಳು. ಮುಂದೆ ಪ್ರಶ್ನೆಯೇ ಉಳಿಯಲಿಲ್ಲ. ಸುಬ್ಬಯ್ಯನವರ ಮುಖ ಮುದುರಿತು. ರಾಜನೇ ಮುಂದುವರಿಸುತ್ತ “ಮಗೂ, ನೀನು ಅಪ್ಪಯ್ಯನೊಡನೆ ಹೋಗುತ್ತೀಯಾ? ಅಥವಾ ನಿನ್ನದೇ ಆದ ಈ ದೊಡ್ಡ ಮನೆಯಲ್ಲಿ ಇರುತ್ತೀಯಾ?” ಎಂದು ಕೇಳಿದನು. “ನಾನು ಇಲ್ಲಿಯೇ ಇರುತ್ತೇನೆ. ಅವರೇ ಇಲ್ಲಿಗೆ ಬಂದಿರಲಿ” ಎಂದಳು ಹುಡುಗಿ ಮುಗ್ಧತೆಯಿಂದ, ಚಪಲತೆಯಿಂದ. ರಾಜನು ಹುಡುಗಿಯನ್ನು ಹಿಂದಕ್ಕೆ ಕಳಿಸಿದನು.

“ಕರಣೀಕರೇ ಹುಡುಗಿಯ ಇಷ್ಟ, ನಮ್ಮ ಇಷ್ಟ ಎಲ್ಲ ಹೀಗೆಯೇ ಇವೆ. ನೀವು ಇನ್ನು ಈ ವಿಷಯವನ್ನು ಮರೆಯಬೇಕು. ನಿಮ್ಮ ಮಗಳನ್ನು ನಾವು ಅತ್ಯಂತ ವಿಶ್ವಾಸದಿಂದ, ಪ್ರೇಮದಿಂದ ನೋಡಿಕೊಳ್ಳುತ್ತೇವೆ. ನಮಗೆ ಈ ಹುಡುಗಿ, ಉತ್ತಮ ಕುಲಸಂಭೂತೆ ದೊರಕಿದುದು ಹೆಮ್ಮೆಯ ವಿಷಯ. ರಾಜಕುಲದೊಡನೆ ಸಂಬಂಧ ಬೆಳೆಸುವುದು ನಿಮಗೂ ಗೌರವದ ವಿಷಯವಲ್ಲವೇ? ನಿಮ್ಮ ಮನೆಯವರೆಲ್ಲರೂ ಯಾವಾಗ ಬೇಕಾದರೂ ಇಲ್ಲಿಗೆ ಬಂದು ಈ ನಿಮ್ಮ ಮುದ್ದು ಮಗಳನ್ನು ಕಂಡು ಮಾತಾಡಿಕೊಂಡು ಹೋಗಬಹುದು, ಆಗಬಹುದಲ್ಲವೇ?” ರಾಜನು ಎದ್ದನು. ಕರಣೀಕರು ವಿಷಯವನ್ನರಿತವರು, ತಾನು ಪ್ರತಿಭಟನೆಯನ್ನು ವ್ಯಕ್ತಪಡಿಸಿದರೆ ಆಗುವ ಪರಿಣಾಮವನ್ನು ತಿಳಿದವರು. ಮೌನವಾಗಿಯೇ ರಾಜನಿಗೆ ನಮಸ್ಕಾರ ಮಾಡಿ ಅಲ್ಲಿಂದ ಹೊರಟರು. ಹೊರಟರೋ

ಹೊರಡಿಸಲ್ಪಟ್ಟರೋ ಅಂತೂ ಮನೆ ಕಡೆಗೆ ಅರಿವಿಲ್ಲದೇ ನಿದ್ರೆಯಲ್ಲಿ ನಡೆಯುವವರಂತೆ ಸಾಗಿದರು. ಚಾವಡಿಯಲ್ಲಿ ಕಾದು ಕಾದು ಬೇಸತ್ತ ಗೌರಮ್ಮ ಅವರ ಮಗ ಮತ್ತು ಇತರ ಸಂಬಂಧಿಕರು ಯಜಮಾನರು ಹಿಂತಿರುಗಿದುದನ್ನು ನೋಡಿ ನಿಟ್ಟುಸಿರು ಬಿಟ್ಟರು ಅಷ್ಟು ಹೊತ್ತೂ ಉಸಿರನ್ನು ಹಿದಿದುಕೊಂಡೇ ಇದ್ದರೋ ಎಂಬಂತೆ. ಹೋದ ಉದ್ದೇಶವೇನು, ಪರಿಣಾಮವೇನು ಎಂದು ಗೌರಮ್ಮನವರ ಚಿಂತೆಯಲ್ಲ, ಮಾಂಗಲ್ಯಸೂತ್ರ ಕಡಿಯದೇ ಉಳಿಯಿತಲ್ಲ ಎಂದೇ ಸಂತೋಷ. ಸುಬ್ಬಯ್ಯನವರು ನಿಧಾನವಾಗಿ ಮನದ ದುಗುಡವನ್ನು ಮನೆಯವರ ಮುಂದೆ ಹೊರಗೆಡವಿದರು. ಭಾರವಾದ ಹೊರೆಯನ್ನು ಮೆಲ್ಲನೆ ಕೆಳಗಿಳಿಸುವಂತೆ "ರಾಜನು ಆಸೆ ತೋರಿಸಿ, ಬಣ್ಣ ಬಣ್ಣದ ಬೊಂಬೆಗಳನ್ನಿತ್ತು ನಮ್ಮ ಮಗಳನ್ನು ವಶಪಡಿಸಿಕೊಂಡಿರುವನು. ಇನ್ನು ಏನು ಮಾಡುವುದೂ ಸಾಧ್ಯವಿಲ್ಲ" ಎಂದು ಮುಕ್ತಾಯಗೊಳಿಸಿದರು. ಆಗಲೇ ಕಂಬನಿಯ ಬಿಂದುವೊಂದು ಅವರರಿವಿಲ್ಲದೇ ಜಗುಳಿತು. ಹಣದ ರಾಶಿಯನ್ನೇ ಲೀಲಾಜಾಲವಾಗಿ ಲೆಕ್ಕಿಸಿ ಅಂಕಿತದಲ್ಲಿಡುವ ಕರಣೀಕರಿಗೆ ಈ ಹಸುಳೆಯನ್ನು ತನ್ನೆಡೆಗೆ ಬರುವಂತೆ ಮಾಡಲಾಗಲಿಲ್ಲವಲ್ಲಾ ಎಂದು ತುಂಬ ವ್ಯಥೆಯಾಯಿತು. ರಾಜನು "ನಿಮ್ಮ ಮಗಳನ್ನೇ ಬೇಕಾದರೆ ಕೇಳೋಣ" ಎಂದು ಮುಂತಾಗಿ ಹೇಳಿದಾಗ ತಾನು ಆಗಬಹುದು ಎಂದದ್ದೇ ಮೋಸವಾಯಿತು. ಮತ್ತೆ ರಾಜನು ಒಳಗೆ ಹೋಗಿ ಹುಡುಗಿಯನ್ನು ಕರೆದುಕೊಂಡು ಬರುವಾಗ ಆಕೆಗೆ ಚೆನ್ನಾಗಿಯೇ ಬೋಧಿಸಿ ಕರೆದು ತಂದಿರಬೇಕು. ಅಥವಾ ತಾನು ಹಿಂದಿನ ದಿವಸ ಏನೋ ಕ್ಷುದ್ರ ಕಾರಣಕ್ಕಾಗಿ ಸಿಟ್ಟಾದುದನ್ನು ನೆನೆದು ಅವಳು ಹಾಗೆ ಹೇಳಿದಳೇ? ಅಂತೂ ಕನ್ನಡಿ ಒಡೆದು ಹೋದದ್ದೇ; ಹಾಲು ಚೆಲ್ಲಿ ಹೋದದ್ದು ಇನ್ನು ದೊರೆಯುವಂತಿಲ್ಲ. ಸಂದರ್ಭ ಕೈ ಮೀರಿತು ಎಂದು ದುಃಖಿಸಿದರು ಕರಣೀಕ ದಂಪತಿಗಳು. ಮಠಾಧಿಕಾರಿ ಕರಣೀಕರು, ಸಿಂಹವಾಣಿಯಿಂದ ಅಧರ್ಮ ಮಾರ್ಗಿಗಳನ್ನು ಶಿಕ್ಷಿಸುವ ಧೀರೋದಾತ್ತ ಕರಣೀಕರು, ರಾಜನ ಮುಂದೆ ತಲೆಬಾಗಬೇಕಾಯಿತು, ಮನಸ್ಸಿಗೆ ಒಪ್ಪಿಗೆಯಿಲ್ಲದಿದ್ದರೂ ರಾಜವಾಣಿಗೆ ತಥಾಸ್ತು ಎನ್ನಬೇಕಾಯಿತು.

ಮುಂದೆ ಅನೇಕ ದಿವಸಗಳು ಸಂದುವು. ಸುಬ್ಬಯ್ಯನವರು ತಮ್ಮ ಕೆಲಸದಲ್ಲಿ ನಿರತರಾಗಿದ್ದರು. ರಾಜನ ಹೆದರಿಕೆಗಾಗಿ ಅವನು ಅನ್ಯಥಾ ಭಾವಿಸಬಾರದಲ್ಲಾ ಎಂಬ ಅಂಜಿಕೆಯಿಂದ ಮಗಳನ್ನು ನೋಡಿಬರಲು ಒಂದೆರಡು ಸಲ ಅವರೂ ಅವರ ಹೆಂಡತಿಯೂ ಅರಮನೆಗೆ ಹೋಗಿದ್ದರು. ದೇವಿಗೆ ಅಲ್ಲಿ ಯಾವ ಕೊರತೆಯೂ ಇರಲಿಲ್ಲ. ಹೆಸರಿಗನುಗುಣವಾಗಿ ದೇವಿಯಂತೆಯೇ ಅಲ್ಲಿ ಅವಳು ಮೆರೆಯುತ್ತಿದ್ದಳು, ಬೆಳೆಯುತ್ತಿದ್ದಳು. ಕರಣೀಕ ದಂಪತಿಗಳನ್ನು ರಾಜಕುಟುಂಬದ ಭಾವೀ ಸಂಬಂಧಿಕರನ್ನು, ರಾಜ ಪರಿವಾರದವರು ಬಹಳ ವಿಜೃಂಭಣೆಯಿಂದ, ಮರ್ಯಾದೆಯಿಂದ ಎದುರುಗೊಂಡು ಉಪಚರಿಸಿ ಮನ್ನಣೆ ಮಾಡಿ ಕಳುಹಿಸುತ್ತಿದ್ದರು. ಆದರೆ ಭಾರದ ಮನಸ್ಸಿಗೆ ಈ ಬಾಹ್ಯೋಪಚಾರಗಳು ಇನ್ನೂ ಭಾರವನ್ನೇ ಹೊರಿಸಿದಂತೆ ಆಗುವುವು. ಬೇಕೆಂದೇ ಗಾಯವನ್ನು ಮಾಡಿ ಮತ್ತೆ ನೋವಾಯಿತೇ ಎಂದು ಉಪಚಾರ ಮಾತು ಆಡಿದರೆ ಹೇಗಾಗಬಹುದು? ನಿರ್ವಾಹವಿಲ್ಲ.

ಸುಬ್ಬಯ್ಯನವರಿಗೆ ಇನ್ನೊಂದು ಯೋಚನೆ ಹೊಳೆಯಿತು. ಅರಮನೆಯಲ್ಲಿ ಜೋಯಿಸರೂ ಪೂಜಾರಿಗಳೂ ರಾಜನಿಗೆ ಪುರೋಹಿತರೂ ಆದ ಗಣಪತಿ ಭಟ್ಟರನ್ನು ಹಿಡಿದು ಪ್ರೇರೇಪಿಸಿದರೆ ಈ ಕಾರ್ಯವಾಗಬಹುದು ಎಂದು ಚಿಂತಿಸಿದರು. ಸುಬ್ಬಯ್ಯನವರಿಗೆ ಗಣಪತಿ ಭಟ್ಟರು ನೆಂಟರು ಮತ್ತು ಚಿರಪರಿಚಿತರು. ಭಟ್ಟರಿಗೆ ಕರಣೀಕರಲ್ಲಿ ಭಕ್ತಿ ಗೌರವ ಅಪಾರ ಇವರು ಹಿರಿಯರು, ಉಚ್ಚ ಉದ್ಯೋಗದಲ್ಲಿರುವವರು, ಅಲ್ಲದೇ ಗುರುಮಠದ ಪ್ರತಿನಿಧಿಗಳು. ಜೋಯಿಸರಿಗೆ ಅರಮನೆಯಲ್ಲಿ ಅಧಿಕ ಪ್ರಭಾವವಿತ್ತು. ಆದ್ದರಿಂದ ದೇವಿಗೆ ಇವರ ಮುಖಾಂತರ ಬಹಳ ಗುಟ್ಟಾಗಿ ಬುದ್ಧಿ ಹೇಳಿಸಿ, ಹಿಂತಿರುಗುವಂತೆ ಪ್ರಯತ್ನಿಸಬಾರದೇ ಎಂದು ಹಂಬಲಿಸಿದರು ಕರಣೀಕರು. ಭಟ್ಟರು ಈ ಕೆಲಸವನ್ನು ದಕ್ಷತೆಯಿಂದ ನೆರವೇರಿಸಿದರೆ ಆಗ ತನ್ನ ಮಗಳು ತಂದೆಯಲ್ಲಿಗೇ ಹೋಗಬೇಕೆಂದು ಹಠ ಹಿಡಿದರೆ, ರಾಜನಿಗೆ ಅದನ್ನು ಅಲ್ಲಗಳೆಯುವುದು ಸಾಧ್ಯವಾಗಲಾರದು. ದೇವಿಯು ಹಿಂತಿರುಗಿ ಬರಬಹುದು. ಇದು ಕರಣೀಕರ ತೆಳುಮೋಡದಂತಹ ಆಶಯ. ಹಂಬಲ, ದುಃಖ ಪ್ರಸಂಗಗಳಲ್ಲಿ ಒಂದೇ ಆಶಾಕಿರಣವನ್ನು ಬೃಹದೀಕರಿಸಿ ಸೂರ್ಯರೂಪಕ್ಕೆ ತರುವ ಶಕ್ತಿ ಮನಸ್ಸಿಗಿದೆ. ಸುಬ್ಬಯ್ಯನವರು ಇದು ಹೀಗೇ ಆಗುವುದು ಖಂಡಿತ ಎಂದು ನಂಬಿದರು. ಒಂದೆರಡು ದಿವಸ ತಲೆ ತಿರುಗಿ ಹಾಗಿದ್ದರೂ ಮಗಳು ತಂದೆ ತಾಯಿಯ ಮನೆಗೆ ಬಾರದೆ ಇನ್ನೆಲ್ಲಿ ಉಳಿದಾಳು? ಆದರೆ ಜೋಯಿಸರು ಈ ಪ್ರಸ್ತಾಪಕ್ಕೆ ಪ್ರೋತ್ಸಾಹವನ್ನೇ ನೀಡಲಿಲ್ಲ. ಸಿಂಹದ ಬಾಯಿಯಿಂದ ಬಿಡಿಸಿಕೊಂಡು ಬರಬಹುದು, ಕೈಲಾಸ ಪರ್ವತವನ್ನು ಅಲುಗಾಡಿಸಿ ಅದರ ತಳದಿಂದ ನಿಧಿಯ ಕಸಿದುಕೊಂಡು ಬರಬಹುದು, ಘೋರ ಸಮುದ್ರ ಗರ್ಭದಿಂದ ರತ್ನವನ್ನು ಎಳೆದುಕೊಂಡೇ ಬರಬಹುದು. ಆದರೆ ಲಿಂಗರಾಜನೊಡನೆ ಜ್ವಾಲಾಮುಖಿಯೊಡನೆ – ಸೆಣಸಾಟ ಬೇಡ, ಬೇಡವೆಂದು ಜೋಯಿಸರು ಬಹುವಾಗಿ ಹೇಳಿದರು. ಹಿತವಾಕ್ಯಗಳನ್ನು ನುಡಿದರು. ಈ ಎಲ್ಲ ಕಾರಣಗಳೂ ಪ್ರಬಲವೆಂದೇ ಕರಣೀಕರಿಗೆ ಅರಿವಾಗಿದ್ದರೂ ತಮ್ಮ ಊಹೆ, ಕಾರಣ ಇದಕ್ಕಿಂತ ತ್ರಿಗುಣಿತ ಪ್ರಬಲವೆಂದು ದೃಢವಾಗಿ ನಂಬಿದ್ದರು. "ಇದೊಂದು ನನ್ನ ದೂರದ ಆಸೆ. ದೇವಿಯು ಅಲ್ಲೇ ಉಳಿದು ಶೂದ್ರ ಕುಲದ ಸಂಬಂಧವಾದರೆ ನಾನು ಉಳಿಯುವಂತೆಯೇ ಇಲ್ಲ. ಜಾಗರೂಕತೆಯಿಂದ ನೀವು ನಡೆಸಿದರೆ ಜಯವು ಖಂಡಿತ. ದೇವಿಯ ಮನೋಗುಣ ನನಗೆ ಗೊತ್ತಿದೆ. ಒಂದು ವೇಳೆ ನೀವು ಈ ಉದ್ಯಮದಲ್ಲಿ ಯಶಸ್ವಿಗಳಾಗದೇ ಇದ್ದರೂ ರಾಜನಿಗೆ ಈ ವಿಷಯವು ತಿಳಿಯುವುದಿಲ್ಲ." ಕೊನೆಗೆ ಗಣಪತಿ ಭಟ್ಟರು ಕಠಿಣಾಪಾಯ ಸನ್ನಿವೇಶಕ್ಕೆ – ಹಿಮಾಲಯ ಪ್ರಪಾತದಲ್ಲಿ ಕಾಲಿಡಲು ಒಪ್ಪಿದರು.

ಅರಮನೆಯಲ್ಲಿ ಮರುದಿವಸ ಗಣಪತಿ ಭಟ್ಟರು ದೇವರ ಪೂಜೆಗೆ ಹೋಗುವಾಗ, ಯಾರಿಗೂ ಸಂಶಯ ಬಾರದಂತೆ ದೇವಿಯನ್ನು ಕರೆದುಕೊಂಡು ಹೋದರು. ದೇವರಮನೆಗೆ ಹೋಗುವಾಗ, ಯಾರಿಗೂ ಸಂದೇಹ ಬರಲು ಅವಕಾಶವಿಲ್ಲ. ಅಲ್ಲಿ ಮೈಯೆಲ್ಲ ಕಿವಿಯಾಗಿ, ಕಣ್ಣಾಗಿ ಅತಿ ಜಾಗರೂಕತೆಯಿಂದ ಸುಬ್ಬಯ್ಯನವರು ಹೇಳಿದ ಮಾತನ್ನು ಹೇಳಲು ಹೊರಟು ಹಿಂಜರಿದರು; ನಡುಗಿದರು. ಆ ಕಡೆಗೆ ರಾಜನ ಮಗಳೊಬ್ಬಳು ಓಡಿ ಬಂದಳು, ಹೀಗೆ ಆ ದಿವಸ ಕಾರ್ಯ ನೆರವೇರಲಿಲ್ಲ. ಆತುರದಿಂದ ಎದುರು ನೋಡುತ್ತಿದ ಕರಣೀಕರಿಗೆ

ಭಟ್ಟರು ಅನಿವಾರ್ಯ ಪ್ರಸಂಗವನ್ನು ವಿವರಿಸಿದರು. ಮರುದಿವಸ ಕಾರ್ಯವನ್ನು ನೆರವೇರಿಸುವುದಾಗಿ ಭರವಸೆಯಿತ್ತರು. ಮುಂದಿನ ದಿನ ಹಿಂದಿನ ದಿವಸದಂತೆಯೇ ಸಂದರ್ಭ. ಪುರೋಹಿತರು ಜಾಗರೂಕತೆಯಿಂದ ದೇವಿಗೆ ಬೋಧಿಸಿದರು. ಪೂರ್ಣ ಬೋಧಿಸಿದರೋ ಇಲ್ಲವೋ ಹುಡುಗಿಯ ಪ್ರತಿಕ್ರಿಯೆಯನ್ನು ನೋಡಲು ಸಹ ಸಮಯವಿರಲಿಲ್ಲ. ರಾಜನು ಪೂಜೆಯನ್ನು ನೋಡಲು ಆಕಸ್ಮಿಕವಾಗಿ ಬಂದೇ ಬಿಟ್ಟನು. ಬಂದನೋ ಜೋಯಿಸರಿಗೆ ಯಮನನ್ನೇ ತಂದನೋ! ಗಡಗಡನೆ ನಡುಗಿದರು ಭಟ್ಟರು. ದೇವಿಯು ಲಿಂಗರಾಜನನ್ನು ನೋಡಿಕೊಂಡು ತಾನು ಹೇಳುವುದರ ಅರಿವಿಲ್ಲದೇ, ಬಾಲಿಶ ಸ್ವಭಾವದಿಂದ, "ದೊಡ್ಡಪ್ಪಾ, ನಾನು ಹೋಗೋದಿಲ್ಲ ಇಲ್ಲೇ ಇರ್ತೇನೆ" ಎಂದಳು. ಶಿವಲಿಂಗವೊಡೆದು ಪ್ರಳಯ ರುದ್ರನು ಅವತರಿಸಿದನೋ ಎಂದು ಎದೆಯೊಡೆದು ಗಣಪತಿ ಭಟ್ಟರು ನಿಂತರು, "ಏನು ಮಗಳೇ ಅವರು ಹೇಳಿದ್ದು?" ಎಂದು ಲಿಂಗರಾಜನು ಪ್ರಶ್ನಿಸಿದನು. ಹುಡುಗಿ ಸಂದರ್ಭದ ಗಭೀರತೆಯನ್ನು ಅರಿಯದೇ "ದೊಡ್ಡಪ್ಪ, ನನ್ನನ್ನು ಅಪ್ಪನ ಮನೆಗೆ ಹೋಗು ಎಂದು ಇವರು ಹೇಳುತ್ತಾರೆ. ನಾನು ಇಲ್ಲಿಯೇ ಇರುತ್ತೇನೆ. ನನಗೆ ಇಲ್ಲಿಯೇ ಇರಲು ಸಂತೋಷ" ಎಂದು ಹೇಳಿದಳು. ಗಣಪತಿ ಭಟ್ಟರು ಕುಸಿದು ಕುಕ್ಕರಿಸಿದರು ತಮ್ಮ ಮನಸ್ಸಿನ ಭಾರಕ್ಕೆ. ತಲೆಭಾರವಾದ ಹುಲ್ಲು ಮುಂಡ ಕುಸಿಯುವಂತೆ ಕುಸಿದರು. ಆಗಿನ ಅವರ ಮುಖದ ದೈನ್ಯಭಾವ, ಅಸಹಾಯ ಸ್ಥಿತಿ, ಕಣ್ಣುಗಳಲ್ಲಿ ಕರುಣಾಜನಕ ದುಃಖಸೂಚಕ ಚಿಹ್ನೆಗಳೆಲ್ಲ ರಾಜನ ರೌದ್ರತೆ, ಕ್ರೋಧೋದ್ದೀಪಿತಾಕ್ಷುಗಳಿಗೆ ಬದ್ಧ ವಿರೋಧವಾಗಿದ್ದುವು. ರಾಜನು ಗುಡುಗಿದನು "ಓಹೋ ಮೂರ್ಖ ಬ್ರಾಹ್ಮಣಾ! ನೀನು ಈ ಕೆಲಸವನ್ನೂ ಮಾಡಲು ಹೊರಟಿರುವೆಯಾ? ನನ್ನ ಅನ್ನ ಉಂಡು ನನ್ನ ವಿರುದ್ಧ ಒಳಸಂಚು. ಕರಣೀಕರಿಗಿಲ್ಲದ ಪರಿವೆ ನೀನಗೇಕಯ್ಯಾ? ನಿನ್ನಂಥ ಅಪಾಯಕಾರಿ ಹಾರುವ ಬದುಕಿರುವುದು ಸಲ್ಲದು." ರಾಜಸೇವಕರು ಅಲ್ಲೇ ಸಿದ್ಧವಾಗಿದ್ದರು. ಜೋಯಿಸರನ್ನು ಆಗಲೇ ತುರಂಗದೆಡೆಗೆ ಒಯ್ಯಲಾಯಿತು. ದೇವಿಯು ಒಳ ಸಾರಿದಳು, ಏನಾಯಿತು, ಏಕೆ ಹಾಗಾಯಿತು ಎಂದು ತಿಳಿಯದೇ. ಹಣತೆಯನ್ನು ಮನೆಯ ಹುಲ್ಲು ಮಾಡಿಗೆ ಹಿಡಿದು ಮುಗ್ಧತೆಯಿಂದ ಮಗು ನೋಡುವ ಸ್ಥಿತಿ ಅವಳದಾಯಿತು. ರಾಜನಿಗೆ ಆ ಸಂಜೆ ಒಂದು ರುದ್ರಾನಂದದ ದೃಶ್ಯ ಸನ್ನಿಹಿತವಾಯಿತು.

ಸಾಯಂಕಾಲ ರಾಜಾಜ್ಞೆಯನ್ನು ನೆರವೇರಿಸಿಯೇ ಬಿಟ್ಟರು, ಪುರೋಹಿತರು ಎಂದು ಹಿಂಜರಿಯಲಿಲ್ಲ. ರಾಜನ ಕೋಪ, ನೆರೆಯ ನೀರು, ಕಾಳ್ಗಿಚ್ಚು ಇವೆಲ್ಲ ತುಂಬ ಅಪಾಯಕಾರಿಗಳು. ರಾಜಾಸೀಟಿನ ಶಿಖರದಿಂದ ಕೆಳಗಿನ ಪಾತಾಳಕ್ಕೆ ಜೋಯಿಸರನ್ನು ತಳ್ಳಲಾಯಿತು. ಮುದಿ ಬ್ರಾಹ್ಮಣ ಮೊದಲೇ ಜೀವಚ್ಛವದಂತೆ ಆಗಿದ್ದವರು ರಾಜನ ಹೂಂಕಾರದಿಂದಲೇ ಪೂರ್ಣ ಜೀವ ಕಳೆದುಕೊಂಡಿದ್ದರು. ಮತ್ತೆ ಶವಸದೃಶ ದೇಹವನ್ನು ಅಲ್ಲಿದ ನೂಕುವುದೊಂದೇ ಆ ರಾಜಭಟರಿಗೆ ಇದ್ದ ಕೆಲಸ. ರಾಜನಿಗೆ ಈ ವಿಷಯದಲ್ಲಿ ಯಾರೂ ಏನೂ ಪಿಟ್ ಅನ್ನುವಂತಿರಲಿಲ್ಲ. ಹೇಳಿದವರಿಗೂ ಅದೇ ದುರ್ಗತಿ. ಕರಣೀಕರಿಗೆ ಈ ಭಯಂಕರ ಪರಿಣಾಮ ತಿಳಿಯುವಾಗ ಭಟ್ಟರ ಹತ್ಯೆಯಾಗಿ ಹೋಗಿತ್ತು. ಅವರು ಆ ದಿವಸ ಮಠದ ಸಂಬಂಧವಾಗಿ ವಿಚಾರಣೆಗಳನ್ನು ಮಾಡಲು, ಹಣ ಕೂಡಿಸಲು ಸಮೀಪದ ಗ್ರಾಮಗಳಿಗೆ ಹೋಗಿದ್ದರು. ಹಿಂತಿರುಗುವಾಗ ಮಡಿಕೇರಿಯ ಜನರೆಲ್ಲರೂ ಈ ಸಂಗತಿಯನ್ನೇ ಗುಜುಗುಜು ಮಾತಾಡಿಕೊಳ್ಳುತ್ತಿದ್ದರು. ಅವರಿಗೆಲ್ಲ ಬಗೆಹರಿಯುವ ಸಮಸ್ಯೆಯೆಂದರೆ ಆ ಮುದುಕ ಬ್ರಾಹ್ಮಣನು ಏನು ರಾಜದ್ರೋಹವನ್ನು ಬಗೆದಿರಬಹುದೆಂದು. ವಜ್ರಾಘಾತದಂತೆ ಈ ವಿಷಯ ಸುಬ್ಬಯ್ಯನವರಿಗೆ ತಿಳಿಯಿತು. ಭೂಮಿ ತನ್ನನ್ನು ಏಕೆ ನುಂಗಲೊಲ್ಲದು, ಆಕಾಶದ ಒಂದು ನಕ್ಷತ್ರ ತನ್ನ ಮೇಲೆ ಕಳಚಿಬಿದ್ದು ಏಕೆ ನಾಶಮಾಡಲೊಲ್ಲದು, ಎಂತಹ ದುರ್ಘಟನೆ ಸಂಭವಿಸಿ ಹೋಯಿತು. ತಾನು ಮಡಿಕೇರಿಯಲ್ಲಿದ್ದಿದ್ದರೆ ರಾಜನ ಬಳಿಗೆ ಹೋಗಿ ಅಡ್ಡ ಬಿದ್ದು ನಿಜ ಸಂಗತಿಯನ್ನುರುಹಿ, ತಾನೇ ಬಲಿಯಾಗಬಹುದಾಗಿತ್ತು. ಈಗ ತನ್ನ ತಪ್ಪಿಗೆ ಆ ವೃದ್ಧ ಬ್ರಾಹ್ಮಣನು ಬಲಿಯಾಗುವಂತೆ ಆಯಿತಲ್ಲಾ ಎಂದು ಪರಿಪರಿಯಾಗಿ ಪರಿತಪಿಸಿದರು, ದುಃಖಿಸಿದರು. ಮುಂದೆ ಯಾಂತ್ರಿಕವಾಗಿ ರಾಜಾಸೀಟಿನ ಕಡೆಗೆ ಯಾವ ಉದ್ದೇಶವೂ ಇಲ್ಲದೇ ನಡೆಯಹೊರಟರು. ಆದರೆ ದಾರಿಯಲ್ಲಿಯೇ ಅವರ ಮನೆಯ ಕೆಲಸದಾಳುಗಳು ಅವರ ಬೆನ್ನಟ್ಟಿ ಬಂದಂತೆ ಬಂದು ಮನೆಯ ಕಡೆಗೆ ಎಳೆದುಕೊಂಡು ಹೋದಂತೆ ಹೋದರು. ಸಂದರ್ಭದ ಭೀಕರತೆಯನ್ನೂ ಉದ್ವಿಗ್ನತೆಯನ್ನೂ ಅರಿತ ಗೌರಮ್ಮನವರು ಪತಿದೇವರು ಮನೆಗೆ ಬರುವಾಗ ಈ ದುಷ್ಟ ಘಟನೆಯ ವಿಷಯ ತಿಳಿದು ಅನಾಹುತವಾಗಬಾರದಲ್ಲ ಎಂದು ಸೇವಕರನ್ನು ಅವರು ಬರುವ ದಾರಿಯ ಕಡೆಗೆ ಅಟ್ಟಿದ್ದರು. ಸುಬ್ಬಯ್ಯನವರ ಕಠಿಣಾಜ್ಞೆಗಳೆಲ್ಲವನ್ನೂ ಅಲಕ್ಷಿಸಿ ಆಳುಗಳು ಅವರನ್ನ ಮನೆ ಕಡೆಗೆ ಎಳೆದುಕೊಂಡು ಹೋದರು. ಗೌರವಮ್ಮನವರ ದೂರದೃಷ್ಟಿ ಇಲ್ಲದಿದ್ದರೆ ಪರಿಸ್ಥಿತಿ ಬಹುಶಃ ಭೀಕರವಾಗುತ್ತಿತ್ತು, ಅಪಾಯದ್ದಾಗುತ್ತಿತ್ತು.

ಮುಂದೆ ಕರಣೀಕರು ಸುಖವಿಲ್ಲವೆಂದು ಒಂದು ತಿಂಗಳು ರಜೆ ತೆಗೆದುಕೊಂಡು ಪುತ್ತೂರು ಸಮೀಪದ ಅವರ ಆಸ್ತಿಗೆ ಹೋದರು. ರಜೆಯನ್ನು ಕೊಡುವ ಮೊದಲು, ಇವರ ಮಗನನ್ನು ಮಡಿಕೇರಿಯಲ್ಲಿಯೇ ಬಿಟ್ಟುಹೋಗಬೇಕೆಂದು ರಾಜಾಜ್ಞೆಯಾಯಿತು. ಚಾಣಾಕ್ಷ ರಾಜನು ಕರಣೀಕರು ಎಲ್ಲಿಯಾದರೂ ತನ್ನ ರಾಜ್ಯವನ್ನೇ ಬಿಟ್ಟು ಹೋದಾರೋ ಎಂದು ಶಂಕಿಸಿದ್ದನು. ಅವರಂತಹ ಬುದ್ಧಿವಂತರನ್ನೂ ತೀಕ್ಷ್ಣಮತಿಗಳನ್ನೂ ಕಳೆದುಕೊಳ್ಳಲು ರಾಜನಿಗೆ ಇಷ್ಟವಿರಲಿಲ್ಲ. ಸುಬ್ಬಯ್ಯನವರಿಗೆ ಮನಸ್ಸಿನಲ್ಲಿಲ್ಲದ ಶಾಂತಿ ಹೊರಗೆಲ್ಲಿ ದೊರೆಯುವುದು? ಗಿರಿಸಾಲುಗಳು, ಗದ್ದೆ ಬಯಲುಗಳು, ಹೊಳೆ ಕೊಳಗಳು ಇವೆಲ್ಲವುಗಳೂ ನಮ್ಮ ಮನಸ್ಸಿನಲ್ಲಿರುವ ಸಂತೋಷ ಸಂತೃಪ್ತಿಗಳನ್ನು ದ್ವಿಗುಣಿತ ತ್ರಿಗುಣಿತವಾಗಿ ಅನುರಣನೆ ಮಾಡಲು ಶಕ್ತಿಯುಳ್ಳವು. ಮೂಲತಃ ಅತ್ಯಾವಶ್ಯಕವಾದ ಶಾಂತಿ ತೃಪ್ತಿಗಳು ನಮ್ಮೊಳಗೆ ಇಲ್ಲದಿದ್ದಲ್ಲಿ ಇವೆಲ್ಲ ಕೃತಕವಾಗುವುವು. ಹಾಲಿನ ಹೊಳೆ ಹರಿದರೂ ಜೇನಿನ ಮಳೆಗರೆದರೂ ಜಿಹ್ವೇಂದ್ರಿಯವೇ ಇಲ್ಲದವನಿಗೆ ಇವುಗಳಿಂದ ಪ್ರಯೋಜನವೇನು? ಬದಲು ಇವು ಉಸಿರು ಕಟ್ಟಿಸಬಹುದು, ಗದ್ದೆಗಳ ಏರಿಯಲ್ಲಿ ಅಲೆದರೂ ಒಂದೇ ಅಡಿಕೆ ತೋಟದ ತಂಪಿನಲ್ಲಿ ತಿರುಗಿದರೂ ಒಂದೇ. ಬಲ್ಲೇರಿ ಬೆಟ್ಟವನ್ನು ಹತ್ತಿ ಇಳಿದರೂ ಒಂದೇ. ಎಲ್ಲಿಯೂ ಶಾಂತಿಯಿಲ್ಲ. ಹೇಗೆ ಬರಬೇಕು? ಗಣಪತಿ ಭಟ್ಟರು

ಶಾಂತಿಯ ಕಲಶವನ್ನೇ ಸೆಳೆದುಕೊಂಡು ಹೋಗಿದ್ದರು. ಜೋಯಿಸರ ಕೊಲೆ ಬೇರೆ ಕಾರಣಗಳಿಂದಾಗಿರಬಹುದೇ ಎಂದು ಕರಣೀಕರಿಗೆ ಒಮ್ಮೊಮ್ಮೆ ಸಂದೇಹ ಮೂಡುತ್ತಿತ್ತು. ದೇವಿಯು ಆ ತಪ್ಪನ್ನು ಮಾಡಿರಬಹುದೆಂದು ಅವರಿಗೆ ಊಹಿಸಲು ಸಾಧ್ಯವಾಗಲಿಲ್ಲ.

ಎಂತೆಂತಹ ಭೂಕಂಪನದ, ನೆರೆಯ, ಯುದ್ಧದ ಉದ್ರೇಕ, ಉತ್ಪಾತ, ಸೂರೆಗಳನ್ನು ಮರೆಮಾಡುವ, ಮಾಸಿ ಅದರ ಮೇಲೆ ಹೊಸ ಚಿತ್ರ ಬರೆಯುವ ನಿತ್ಯ ಕುಶಲಿ, ಅನುಪಮ ಕಲಾವಂತ ಕಾಲನ ಪ್ರಭಾವಕ್ಕೆ ಕರಣೀಕರೂ ಹೊರಗಾಗಲಿಲ್ಲ. ದುರ್ಧರ ಪ್ರಸಂಗವೊಂದರ ಉದ್ವಿಗ್ನತೆಯಲ್ಲಿ ಮನಸ್ಸು ಏನನ್ನು ಬೇಕಾದರೂ ತ್ಯಾಗಮಾಡಲು ಸಿದ್ಧವಾಗುವುದು. ಆದರೆ ದಿನವಳಿದಂತೆ ಈ ಅಭಿಪ್ರಾಯ ಬದಲಾಗಿ, ಬಹುಶಃ ಅದು ಹಾಗೇ ಆಗಬೇಕಾಗಿದ್ದಿರಬಹುದು, ಬ್ರಹ್ಮಸಂಕಲ್ಪ ಹಾಗಿದ್ದರೆ ನಾವೇನು ಮಾಡಲಾಗುವುದು ಎಂದು ಮುಂತಾಗಿ ರೂಪಾಂತರ ಹೊಂದುವುದು. ಈ ರೀತಿಯ ಒಂದು ಪ್ರಕೃತಿ ನಿಯಮಿತ ಭಾವನೆ ಮನುಷ್ಯರಲ್ಲಿಲ್ಲದಿದ್ದರೆ ಯಾರಿಗೂ ಬದುಕುವುದು ಸಾಧ್ಯವಾಗುತ್ತಿರಲಿಲ್ಲ.

ಸುಬ್ಬಯ್ಯನವರು ಒಂದು ತಿಂಗಳ ರಜೆಯನ್ನು ಎರಡು ತಿಂಗಳುಗಳಿಗೆ ಮುಂದುವರಿಸಿ ಅದೂ ಮುಗಿದ ಅನಂತರ ಮಡಿಕೇರಿಗೆ ಹಿಂತಿರುಗಿದರು. ಸಮಾಧಾನವಾಗಿಯೇ ಇದ್ದರು. ನಿತ್ಯಕಾರ್ಯಗಳನ್ನು ಎಂದಿನಂತೆಯೇ ನೆರವೇರಿಸಲಾರಂಭಿಸಿದರು. ರಾಜಾಸೀಟಿನ ಕಡೆಗೆ ಮಾತ್ರ ಹೋಗುವ ಧೈರ್ಯಮಾಡಲಿಲ್ಲ. ರಾಜನು ಎಂದಿನಂತೆಯೇ ಮೃದು ಭಾಷಿಯಾಗಿದ್ದನು, ಕಠೋರ ಕ್ರೂರಿಯೂ ಆಗಿದ್ದನು. ಕರಣೀಕರು ಮಾತ್ರ ರಾಜನನ್ನು ಕಂಡಾಗ ವಿಷ ಸರ್ಪದಂತೆ ಹೆದರುತ್ತಿದ್ದರು. ಯಾರೇ ಅಲ್ಲಿದ್ದರೂ ಆ ಸ್ಥಾನಕ್ಕೆ ಮನ್ನಣೆ ಸಲ್ಲಬೇಕಷ್ಟೆ!

ಹೀಗೆ ಒಂದು ವರ್ಷವೇ ಕಳೆಯಿತು. ಒಂದು ದಿವಸ ರಾಜನು ತನ್ನ ಪ್ರಮುಖಾಧಿಕಾರಿಗಳ ಸಭೆಯನ್ನು ಕರೆದನು. ಕರಣೀಕರೂ ಅದಕ್ಕೆ ಆಮಂತ್ರಿಸಲ್ಪಟ್ಟಿದ್ದರು. ರಾಜನ ಮುಖದ ಮಂದಹಾಸ ಆಗ ಕೆಲವು ತಿಂಗಳುಗಳಿಂದ ಮಾಯವಾಗಿತ್ತು. ಅದೇ ಹಿಂದಿನ ಒಂದು ತಿಂಗಳಿನಲ್ಲಂತೂ ಅವನು ಹತ್ತು ವರ್ಷ ಪ್ರಾಯವೇರಿದವನಂತೆ ಕಾಣುತ್ತಿದ್ದನು. ರಾಜ್ಯಕ್ಕೆ ಯಾವ ತೊಂದರೆಯಿರಲಿಲ್ಲ. ಶತ್ರುಗಳಿಂದ ಏನೂ ಬಾಧೆಯಿರಲಿಲ್ಲ.

ತೋರುವಂತೆ ರಾಜನಿಗೆ ಆರೋಗ್ಯವೂ ಚೆನ್ನಾಗಿತ್ತು, ಇನ್ನೇಕೆ ಹೀಗೆ ಚಿಂತೆ ಎಂದು ರಾಜನನ್ನು ನೋಡಿದವರು ಆಲೋಚಿಸುತ್ತಿದ್ದರು. ಆದ್ದರಿಂದ ಈ ಸಭೆಗೆ ಎಲ್ಲರೂ ಏನೋ ವಿಶೇಷ ವಿಷಯವಿರಬೇಕು ಎಂದು ಶಂಕೆ ಕುತೂಹಲಗಳಿಂದ ಹೋದರು. ಇವರ ಊಹೆ ಸರಿಯಾಗಿತ್ತು. ರಾಜನು ಗಂಭೀರವಾಗಿ ಸೂಕ್ಷ್ಮವಾಗಿ ಪ್ರಸಂಗವನ್ನು ವಿವರಿಸಿದನು. "ಈಗ ನಾಲ್ಕೈದು ತಿಂಗಳುಗಳಿಂದ ನನಗೆ ಶಾಂತಿಯಿಲ್ಲ, ಊಟಮಾಡುವಾಗ ಅನ್ನವೆಂದು ಬಾಯಿಗೆ ತೆಗೆದರೆ ಅದು ಸೆಗಣಿಯಾಗುವುದು. ಆದರೆ ಬೇರೆಯವರು ಅದು ಅನ್ನವೆಂದೇ ಹೇಳುವರು. ಮನಸ್ಸಿಗೆ ಹಗಲಿನಲ್ಲಿಯೂ ಒಂದು ವಿಧವಾದ ಭಯ, ಯಾರೋ ನನ್ನನ್ನು ಎಳೆಯುವುದು, ಗುದ್ದುವುದು, ಒದೆಯುವುದು ಎಲ್ಲಾ ಮಾಡಿದ ಹಾಗಾಗುವುದು. ರಾತ್ರಿ ಪಲ್ಲಂಗದ ಮೇಲೆ ಪವಡಿಸಿದರೆ ಬೆಳಗಾಗೇಳುವಾಗ ಬಚ್ಚಲ ಮನೆಯಲ್ಲಿ ನೆಲದ ಮೇಲೆ ಬಿದ್ದಿರುತ್ತೇನೆ. ಇನ್ನೂ ಈ ತರಹದ ಉದಾಹರಣೆಗಳು ಹಲವಾರು. ಇದರಿಂದ ನನಗೆ ಸಮಾಧಾನ ಶಾಂತಿಯೆಂಬುದೇ ಇಲ್ಲ. ಯಾವುದರಲ್ಲಿಯೂ ಸುಖವಿಲ್ಲ ಎಂದಾಗಿದೆ" ಎಂದು ಹೇಳಿದನು. ಕಲ್ಲುರುಟಿ, ಮೋಹಿನಿ, ಪಿಶಾಚಿ ಮುಂತಾದ ದುಷ್ಟ ಶಕ್ತಿಗಳ ಪೀಡನೆಯಿಂದ, ಮಾಟ ಛಿದ್ರಗಳ ದೋಷದಿಂದ ಈ ರೀತಿ ಆಗುವುದನ್ನು ಕೇಳಿದ, ಕಂಡ ಕರಣೀಕರು ಮಾಂತ್ರಿಕರನ್ನು ಕರೆಸಿ ವಿಚಾರ ಮಾಡಬೇಕೆಂದು ಸೂಚಿಸಿದರು. ಎಲ್ಲರೂ ಇದನ್ನು ಸರಿಯೆಂದು ಸಮ್ಮತಿಸಿದರು. ಆಗಿಂದಾಗಲೇ ಮಲೆಯಾಳದ ಪ್ರಸಿದ್ಧ ಮಂತ್ರವಾದಿಗಳಾದ ನೀಲೇಶ್ವರ ತಂತ್ರಿಗಳಿಗೆ ಕರೆಹೋಯಿತು. ಅವರು ಬರುವವರೆಗೂ ರಾಜನಿಗೂ ಈ ಪ್ರಮುಖರಿಗೂ ತೃಪ್ತಿಯಿಲ್ಲ. ಒಂದು ವಾರದಲ್ಲಿಯೇ ತಂತ್ರಿಗಳ ಆಗಮನವಾಯಿತು. ಅವರು ರಾಜನ ಜಾತಕವನ್ನು ತೆಗೆದುಕೊಂಡು, ಎಲ್ಲಾ ಸ್ಥಿತಿಗಳನ್ನು ಕೂಲಂಕಷವಾಗಿ ವಿಚಾರಮಾಡಿ, ಮಂತ್ರವೆಸಗಿ, ಕವಡೆಗಳನ್ನೆಣಿಸಿ ಒಂದು ನಿರ್ಧಾರಕ್ಕೆ ಬಂದರು. ಮಂತ್ರವಾದಿಗಳ ಮಾತು: "ಪ್ರಭುಗಳು ಈಗ ಎರಡು ವರ್ಷಗಳ ಅವಧಿಯಲ್ಲಿ ಒಂದು ಬ್ರಹ್ಮ ಹತ್ಯೆಯನ್ನು ಮಾಡಿಸಿದ್ದಾರೆ. ಆ ಬ್ರಾಹ್ಮಣನು ಈಗ ಬ್ರಹ್ಮರಾಕ್ಷಸನಾಗಿದೆದ್ದಾನೆ." ರಾಜನು ಮೌನ, ಪ್ರಮುಖರು ಮೌನ, ಕರಣೀಕರ ದೃಷ್ಟಿ ಚಂಚಲವಾಯಿತು. ತಂತ್ರಿಗಳು ಮುಂದುವರಿಸಿದರು "ಇದನ್ನು ಗತಿಗಾಣಿಸದೇ ಬಿಟ್ಟರೆ ತುಂಬ ಹಾನಿಯುಂಟು."

"ಹಾಗಾದರೆ ಏನು ಮಾಡಬೇಕು?" ರಾಜನ ಮಾತು.

"ಈ ಬ್ರಹ್ಮ ರಾಕ್ಷಸನಿಗೆ ಸ್ಥಾನವನ್ನು ಕಲ್ಪಿಸಿ ಅಲ್ಲಿ ಅದನ್ನು ಪ್ರತಿಷ್ಠಾಪಿಸಬೇಕು. ಅಲ್ಲಿ ಈಶ್ವರಾರಾಧನೆಯನ್ನು ಮಾಡುತ್ತಾ ಈ ರಾಕ್ಷಸನು ಇರುವನು. ಮತ್ತೆ ಪ್ರಭುಗಳಿಗೆ ಉಪದ್ರವವು ತಪ್ಪುವುದು."

"ಅದನ್ನು ಮಾಡಿಸುವೆವು. ಅಲ್ಲಿಯವರೆಗೂ ಬ್ರಹ್ಮರಾಕ್ಷಸನ ತೊಂದರೆಯನ್ನು ತಾಳುವುದು ಹೇಗೆ?"

"ಪ್ರಭುಗಳು ಇಷ್ಟಪಟ್ಟರೆ ಇಂದು ಮಂತ್ರದ ತಾಯಿತ ಕಟ್ಟಿ ತಾತ್ಕಾಲಿಕವಾಗಿ ಬ್ರಹ್ಮರಾಕ್ಷಸನಿಂದ ಉಪದ್ರವವಿಲ್ಲದಂತೆ ಮಾಡಬಹುದು. ಆದರೆ ಇದು ಶಾಶ್ವತವಾದ ರಕ್ಷೆಯಲ್ಲ." ರಾಜನು ಇದಕ್ಕೆ ಸಮ್ಮತಿಯಿತ್ತನು.

ಮುಂದೆ ಒಂದು ವರ್ಷದಲ್ಲಿಯೇ ಗಣಪತಿ ಭಟ್ಟರ ಮನೆಯಿದ್ದ ಸ್ಥಳದಲ್ಲಿ, ತಂತ್ರಿಗಳ ಸೂಚನೆಯಂತೆ ಒಂದು ಸುಂದರ ಭವ್ಯ ಈಶ್ವರ ಮಂದಿರ ನಿರ್ಮಿತವಾಯಿತು. ದೇಶದ ನಾನಾ ಭಾಗಗಳಿಂದ ಉತ್ತಮ ಶಿಲೆಗಳನ್ನು ತರಿಸಿ ದೇವನಿಲಯವನ್ನು ಕಟ್ಟಿದರು. ರಾಜನು ಪ್ರತಿ ದಿವಸ ಸ್ವತಃ ಅಲ್ಲಿಗೆ ಹೋಗಿ ಮೇಲ್ವಿಚಾರಣೆ ನಡೆಸುತ್ತಿದ್ದನು. ಉನ್ನತ ಪ್ರದೇಶದಲ್ಲಿ ಪ್ರಾಕಾರದಿಂದಾವೃತವಾಗಿ, ನಾಲ್ಕು ದಿಕ್ಕುಗಳನ್ನೂ

ದಿಟ್ಟಿಸಿ ನೋಡುವಂತಹ ಮುಗಳಿಯಿಂದಲಂಕೃತವಾದ ದೇವಾಲಯ. ಎದುರಿನಲ್ಲಿ ವಿಶಾಲವಾದ ಕೊಳ. ಅದರ ಮಧ್ಯದಲ್ಲಿ ಒಂದು ಮಂಟಪ. ಎಲ್ಲವೂ ಕಲೆಯ ಪ್ರತೀಕಗಳಾಗಿದ್ದುವು. ದೇವಾಲಯದ ಹೊರಗಿನ ಚಾವಡಿ, ಕೆರೆ ಕಟ್ಟೆ ಎಲ್ಲದಕ್ಕೂ ಮುರಕಲ್ಲು ಹಾಸಿದರು. ಶಿವಲಿಂಗವನ್ನು ಕಾಶಿಯಿಂದ ರಾಜನ ಪ್ರತಿನಿಧಿಗಳು ಭಕ್ತಿಯಿಂದ ತಂದರು. ಒಂದು ಶುಭ ದಿವಸದಲ್ಲಿ ಈಶ್ವರ ಲಿಂಗ ಪ್ರತಿಷ್ಠಾಪನೆಯನ್ನು ಅಲ್ಲಿ ಮಾಡಿ, ಶ್ರೀ ಓಂಕಾರೇಶ್ವರನೆಂದು ಅದಕ್ಕೆ ನಾಮಕರಣ ಮಾಡಿದರು. ಸಕಲ ಕಾರ್ಯಗಳೂ ಶಾಸ್ತ್ರೋಕ್ತವಾಗಿ ವೇದಾಗಮಗಳಲ್ಲಿ ನಿರೂಪಿತವಾಗಿರುವಂತೆ ನಡೆದುವು. ಲಿಂಗ ಸ್ಥಾಪನೆಯಾದನಂತರ ಒಂಬತ್ತನೇ ದಿನದಲ್ಲಿ ಬ್ರಹ್ಮರಾಕ್ಷಸನನ್ನು ಅಲ್ಲಿ ಪ್ರತಿಷ್ಠೆ ಮಾಡಿ ದೇವಾಲಯದ ಮುಖ್ಯ ದ್ವಾರದಲ್ಲಿ ನುಗ್ಗುವಾಗ ಎಡಗಡೆಯ ಸ್ಥಾನವನ್ನು ಕೊಟ್ಟರು. ರಾಜನ ಮನಸ್ಸು ಹಗುರವಾಯಿತು. ಶಾಂತಿಯನ್ನು ಹೊಂದಿತು. ದೇವಾಲಯವನ್ನು ವೈಭವದಿಂದ ವಿಜೃಂಭಣೆಯಿಂದ ನಡೆಸಿಕೊಂಡು ಬರಲು ತನ್ನ ಸರಕಾರದಲ್ಲಿಯೇ ಒಂದು ಸಮಿತಿಯನ್ನು ಏರ್ಪಡಿಸಿದನು. ಬ್ರಾಹ್ಮಣ ಸಂತರ್ಪಣೆ, ಅನ್ನದಾನ, ನಿತ್ಯಪೂಜೆ, ಉತ್ಸವಗಳು ಇವೆಲ್ಲ ಯಥಾಯೋಗ್ಯವಾಗಿ ನೆರವೇರಲು ಬೇಕಾದಷ್ಟು ಭೂಮಿ ಗದ್ದೆಗಳನ್ನು ದೇವಾಲಯಕ್ಕೆ ಜಹಗೀರಾಗಿ ಇತ್ತನು. ಪ್ರತಿದಿನವೂ ಮಧ್ಯಾಹ್ನ ರಾತ್ರಿ ಪೂಜೆಯ ಹೊತ್ತಿಗೆ ದೇವಾಲಯಕ್ಕೆ ಹೋಗಿಬರುವುದು ಲಿಂಗರಾಜನ ದೈನಂದಿನ ಕಾರ್ಯಗಳಲ್ಲಿ ಒಂದಾಯಿತು. ಮುಂದಕ್ಕೆ ಬ್ರಹ್ಮರಾಕ್ಷಸನ ಉಪದ್ರವ ರಾಜನಿಗೆ ಇರಲಿಲ್ಲ. ಆದರೆ ಹೆಬ್ಬಾಗಿಲನ್ನು ದಾಟುವಾಗ ಮಾತ್ರ ಅವನಿಗೆ ಮನಸ್ಸು ಪುಕಪುಕ ಎಂದೆನ್ನಿಸುತ್ತಿತ್ತು.



ಒಂದು ದಿವಸ ಅವನು ಪೂಜೆಯ ಹೊತ್ತಿಗೆ ಹೋಗುವಾಗ ಹೆಬ್ಬಾಗಿಲಿನಲ್ಲಿ ಯಾರೋ ಆತನನ್ನು ಹಿಡಿದು ಹಿಂದೆ ತಳ್ಳಿದ ಹಾಗಾಯಿತು. ಹಿಂದೆ ಮುಂದೆ ಯಾರೂ ಕಾಣಲಿಲ್ಲ. ಕೂಡಲೇ ರಾಜನಿಗೆ ಅರಿವಾಯಿತು. ತಾನು ಆ ದಿವಸ ಶುಚಿಯಾಗಿ ಬರಲಿಲ್ಲವೆಂದು, ಮೈಲಿಗೆಯಾಗಿತ್ತೆಂದು. ಹಾಗೆಯೇ ಹಿಂತಿರುಗಿದನು. ರಾಜನಿಗೆ ಬಹುಶಃ ಆ ರಾಕ್ಷಸ ಮರ್ಯಾದೆ ತೋರಿಸಿರಬೇಕು. ಬೇರೆಯವರನ್ನು, ಸ್ನಾನ ಮಾಡದೇ ಭಕ್ತಿಯಿಲ್ಲದೇ ಹೋಗುವವರನ್ನು, ಬ್ರಹ್ಮರಾಕ್ಷಸನು ಒದೆದು ಹಿಂದಟ್ಟುತ್ತಿದ್ದನು! ಇಂತಹ ಕಾರಣಿಕವುಳ್ಳ ಶ್ರೀ ಓಂಕಾರೇಶ್ವರ ದೇವಾಲಯವು ಪ್ರತಿಯೊಬ್ಬನಲ್ಲಿಯೂ ಭಕ್ತಿಶ್ರದ್ಧೆಯನ್ನೂ ಬೀರುತ್ತ ತನ್ನ ಪ್ರಭಾವವನ್ನು ಪಸರಿಸುತ್ತಿತ್ತು. ಇದರ ದ್ವಾರಪಾಲಕನಂತೆ ನಿತ್ಯಜೀವಂತ ಬ್ರಹ್ಮರಾಕ್ಷಸನಿದ್ದನು. ಶ್ರೀ ಓಂಕಾರೇಶ್ವರನು ಗರ್ಭಗುಡಿಯಿಂದಲೇ ಲೋಕ ಕಲ್ಯಾಣವೆಸಗುತ್ತಿದ್ದನು.

ಇನ್ನುಳಿದಿರುವುದು ಒಂದು ವಿಷಯ. ಮುಂದೆ ಮೂರು ವರ್ಷಗಳು ಉರುಳುವಾಗ ವೃದ್ಧ ಲಿಂಗರಾಜನು ಮಹದೇವಿಯಮ್ಮನಿಗೂ (ದೇವಿಯ ಸಂಪೂರ್ಣ ನಾಮಧೇಯ) ತನ್ನ ಮಗ ವೀರರಾಜನಿಗೂ ವಿಜೃಂಭಣೆಯಿಂದ ವಿವಾಹವನ್ನು ಮಾಡಿದನು. ಕೊಡಗು ದೇಶದ ಜನರೆಲ್ಲಾ ತಿಂದುಂಡು ನವ ರಾಜದಂಪತಿಗಳನ್ನು ಹರಸಿದರು. ಕರಣೀಕರನ್ನೂ ಅವರ ಪತ್ನೀಪುತ್ರರನ್ನೂ ವಿಶೇಷ ಮರ್ಯಾದೆಯಿಂದ ಗೌರವದಿಂದ ಸ್ವಾಗತಿಸಲಾಯಿತು. ಲಿಂಗರಾಜನು ಸ್ವತಃ ಅವರನ್ನು ಮನ್ನಣೆ ಮಾಡಿದ್ದನು. ಕಟ್ಟುಕಟ್ಟಳೆಯನ್ನು ಮೀರಲಾರದವರಾಗಿ, ರಾಜಾಮಂತ್ರಣವನ್ನು ತಿರಸ್ಕರಿಸಲು ಧೈರ್ಯವಿಲ್ಲದವರಾಗಿ ಕರಣೀಕರು ಅಲ್ಲಿಗೆ ಬಂದು ಯಾಂತ್ರಿಕವಾಗಿ ಮದುವೆಯಲ್ಲಿ ಭಾಗಿಗಳಾಗಿದ್ದರು. ಉಚ್ಚಕುಲಸಂಭೂತೆ ತಮ್ಮ ಪುತ್ರಿ ನೀಚಕುಲ ಸಂಬಂಧ ಮಾಡುವುದು ಅವರಿಗೆ ಸರ್ವಥಾ ಮಾನ್ಯವಿರಲಿಲ್ಲ. ಮದುವೆಯ ಮೆರವಣಿಗೆಯು ಮಡಿಕೇರಿಯ ಮುಖ್ಯ ಮಾರ್ಗಗಳಲ್ಲಿ ಹಿಂದೆಂದೂ ಆಗದಷ್ಟು ವೈಭವದಿಂದ ಮೆರೆಯಿತು. ಒಂದು ಚಿಕ್ಕ ಮಾರ್ಗವನ್ನೇ ಇದಕ್ಕಾಗಿ ವಿಶಾಲಪಡಿಸಿ ಅದನ್ನು ತಳಿರುತೋರಣಗಳಿಂದ ಸಿಂಗರಿಸಿದ್ದರು. ಆ ಮಾರ್ಗಕ್ಕೆ ರಾಜಪತ್ನಿಯ ಗೌರವಾರ್ಥವಾಗಿ ಮಹದೇವಪೇಟೆ ಎಂದು ಲಿಂಗರಾಜನು ಹೆಸರಿಟ್ಟನು.

ಮತ್ತೆ ಹದಿನೈದು ವರ್ಷಗಳು ಸಂದುವು. ಈ ಅವಧಿಯಲ್ಲಿ ಲಿಂಗರಾಜನು ತೀರಿ ಹೋಗಿ ವೀರರಾಜನು ಕೊಡಗಿನ ಗದ್ದುಗೆಯನ್ನೇರಿದ್ದನು. ಇವನು ಸತ್ಕಾರ್ಯವೊಂದಕ್ಕೂ ಹೆಸರು ಪಡೆದಿರಲಿಲ್ಲ. ಪಿತ್ರಾರ್ಜಿತವಾದ  ರಾಜಕುಲಗಳಿಗೆ ಸಹಜವಾದ ದುರ್ಗುಣಗಳೂ ಸ್ವಯಾರ್ಜಿತವಾದ ದುಷ್ಟ ಚೇಷ್ಟೆಗಳೂ ಇವನಲ್ಲಿ ಮನೆಮಾಡಿದ್ದುವು. ಲಿಂಗರಾಜನಿಗೆ ಮಗನ ದುರ್ಬುದ್ಧಿಯ ಅರಿವು ಇತ್ತು. ಆದರೆ ಅವನ ಸಕಲ ಪ್ರಯತ್ನಗಳೂ ಈ ಮಗನನ್ನು ಹಠವಾದಿಯನ್ನಾಗಿ ಮಾಡಿದ್ದುವು. ತಂದೆಯ ಔದಾರ್ಯ ಧಾರಾಳ ಬುದ್ಧಿ ಯಾವುದೂ ಇವನಲ್ಲಿರಲಿಲ್ಲ. ಅರಸನಾದ ಮೇಲಂತೂ ವೀರರಾಜನು ಸ್ವಚ್ಛಂದ ಮನಃಪ್ರವೃತ್ತಿಯವನಾದನು. ಇವನ ಕ್ರೌರ್ಯ, ನಿರಂಕುಶ ಪ್ರಭುತ್ವ, ವಿಷಯಲಂಪಟತೆ ಇವುಗಳಿಗೆ ಮಿತಿಯೇ ಇರಲಿಲ್ಲ. ಜನರೆಲ್ಲ ನೊಂದರು, ಖತಿಗೊಂಡರು. ಆದರೆ ಎದುರು ನಿಲ್ಲುವ ಧೈರ್ಯ ಯಾರಿಗಿದೆ? ಎಷ್ಟೋ ಜನರು ಕೊಡಗು ದೇಶವನ್ನೇ ಬಿಟ್ಟು ಓಡಿಹೋದರು. ಮಹದೇವಮ್ಮನನ್ನಂತೂ ಅವನು ಕಸದಂತೆ ಕಾಣುತ್ತಿದ್ದನು. ಪಾಪ, ಆ ಪುಣ್ಯಾತ್ಮಗಿತ್ತಿ, ಲಿಂಗರಾಜನ ಮುದ್ದಿನ ಸೊಸೆ, ಕರಣೀಕರ ಮಗಳು ಒಂದು ದಿವಸವೂ ಈ ಪತಿದೇವನಿಂದ ಒಳ್ಳೆಯ ಮಾತನ್ನು ಕೇಳಲಿಲ್ಲ. ಇವನ ಸಂಗಡಿಗರದು ಬೇರೆಯೇ ಒಂದು ದುಷ್ಟರ ಪಾಳೆಯವೇ ಇತ್ತು. ಗಿಡುಗಗಳ ಮಧ್ಯೆ ಸಿಕ್ಕಿದ ಪಾರಿವಾಳದಂತೆ ಅವಳ ಸ್ಥಿತಿಯಾಯಿತು. ಆ ಹೆಣ್ಣು ಜೀವ ಕಸಿವಿಸಿಗೊಂಡಿತು. ನಿತ್ಯದುಃಖಿನಿ ಹತಭಾಗ್ಯೆಯಾದಳು ಮಹದೇವಮ್ಮ. ತನ್ನ

ಬಾಲ್ಯದ ನೆನಪು ಕನಸಿನ ಸ್ಮರಣೆಯಂತಿತ್ತು ಕನ್ನಡಿಯೊಳಗಿನ ಕೊಪ್ಪರಿಗೆಯಂತಿತ್ತು. ಇದನ್ನು ನೆನೆದು ದುಃಖಿಸುತ್ತಿದ್ದಳು. ವೃದ್ಧರಾದ ಕರಣೀಕರು ತಮ್ಮ ರಾಜಾಸ್ಥಾನದ ಕಾರ್ಯವನ್ನು ಎಂದಿನಂತೆ ಆದರೆ ನಿರುತ್ಸಾಹದಿಂದ ಮಾಡಿ ಹೋಗುತ್ತಿದ್ದರು. ಮಗಳ ವೇದನೆಯ ಅರಿವು ಅವರಿಗಿತ್ತು. ಆದರೆ ಅವರು ಏನು ಮಾಡುವುದು? ಲಿಂಗರಾಜನಿರುವಾಗ ಬೇಕಾದಾಗ ಹೋಗಿ ಮಗಳನ್ನು ಕಂಡು ಮಾತಾಡಿ ಬರಬಹುದಿತ್ತು. ಆದರೆ ಈಗ ಮಗಳ ಹೆಸರನ್ನೂ ರಾಜನ ಎದುರು ಹೇಳಿ ಪ್ರಸ್ತಾವಿಸುವ ಧೈರ್ಯವಿರಲ್ಲ. ಹಾರಿ ಹಾರಿ ಬೀಳುತ್ತಿದನು. ಗೊಂಡಾರಣ್ಯದಲ್ಲಿ ಸಿಕ್ಕಿಹೋದ ವೃದ್ಧ ಪ್ರಯಾಣಿಕರಿಬ್ಬರು ಒಬ್ಬರಿಗೊಬ್ಬರು ದಾರಿ ತೋರಿಸುತ್ತಾ ದಿಕ್ಕಿಲ್ಲದೇ ಗುರಿಯಿಲ್ಲದೇ ಅಲೆಯುವಂತೆ ಕರಣೀಕ ದಂಪತಿಗಳ ಸ್ಥಿತಿಯಾಗಿತ್ತು. ನೊಂದ ಕರಣೀಕರ ವೃದ್ಧ ಹೃದಯ, ಅವರ ಮಡದಿಯ ಬೆಂದ ಹೃದಯ ಇವು ಒಂದನ್ನೊಂದು ಸಮಾಧಾನಪಡಿಸುತ್ತಾ ಮಗಳ ದುಃಖವನ್ನು ನೆನೆದು ಪರಿತಪಿಸುತ್ತಾ ಇದ್ದುವು.

ಮುಂದಿನ ಬೇಸಗೆಯ ಅಂತ್ಯದೊಡನೆಯೇ ಕರಣೀಕರ ಆರೋಗ್ಯದ ಕೊನೆಯೂ ಬಂದಿತು. ಒಂದೆರಡು ಮಳೆ ಸುರಿಯುವಾಗಲೇ ಜ್ವರ ಹಿಡಿದು ಅದು ದಿನದಿಂದ ದಿನಕ್ಕೆ ಏರಿತು. ಹೆಂಡತಿ ಮಗ ಸೊಸೆ ಆರೈಕೆ ಮಾಡಿದರು. ನೆಂಟರು ಇಷ್ಟರು ಬಂದು ಬಂದು ನೋಡಿಕೊಂಡು ಹೋದರು. ಒಂದು ರಾತ್ರಿ ಪರಿಸ್ಥಿತಿ ವಿಕೋಪವಾಯಿತು. ಜ್ಞಾನ ಮಾತ್ರ ಅವರಿಗೆ ಸರಿಯಾಗಿತ್ತು. ಅಷ್ಟರವರೆಗೆ ಅವರು ಬಾಯಿಬಿಟ್ಟು ಹೇಳದಿದ್ದ ಒಂದು ಇಚ್ಚೆಯನ್ನು ಆಗ ಮಗಳನ್ನು ಕಂಡರೆ ಆಗಬಹುದೆಂದು ವ್ಯಕ್ತಪಡಿಸಿದರು. ಅಯ್ಯೋ, ಈ ವಿಷಮ ಸ್ಥಿತಿಯಲ್ಲಿರುವವರ ಕೊನೆಯ ಆಸೆಯನ್ನು ಪೂರೈಸುವುದು ತಮಗೆ ಸಾಧ್ಯವಿಲ್ಲವಲ್ಲ ಎಂದು ದುಃಖಿಸಿದರು ಗೌರಮ್ಮ. ಮಗನು ತಾನು ರಾಜನೊಡನೆ ವಿನಯದಿಂದ ಮರ್ಯಾದೆಯಿಂದ ಮಾತಾಡಿ ನೋಡುವೆನು ಎಂದು ಹೊರಟನು. ಅಷ್ಟರಲ್ಲಿಯೇ ಒಂದು ಅನಿರೀಕ್ಷಿತ ಘಟನೆ ಹಠಾತ್ತಾಗಿ ಸಂಭವಿಸಿತು. ಮನೆಯ ಹಿಂಬಾಗಿಲಿನಿಂದ ಕತ್ತಲೆಯ ಮೊತ್ತವನ್ನು ಸೀಳಿಕೊಂಡು ಬರುವಂತೆ ಬಂದಳು ರಾಜಮಡದಿ, ಕರಣೀಕರ ಆ ಹಂಬಲವೇ ರೂಪುವಡೆದು ಬಂದಂತೆ ಬಂದಳು ಮಹದೇವಮ್ಮ, ಸಾದಾ ಹೆಂಗಸಿನಂತೆ ಬಂದಳು. ವರ್ಷಕಾಲದ ಕಾರ್ಮೋಡಗಳೆಡೆಯಿಂದ ಒಮ್ಮೆಗೇ ಚಂದ್ರನು ತೋರಿ ಹಿಮಾಂಶುವನ್ನು ಬೀರುವಂತೆ ಬಂದಳು ಮ್ಲಾನಚಂದ್ರವದನೆ. ಕರಣೀಕರಿಗೆ ತಾನೆಲ್ಲಿರುವೆನೆಂಬ ಅರಿವೇ ಮರೆತು ಹೋಯಿತು. ದಿಗ್ಭ್ರಾಂತರಾಗಿ ದಿಟ್ಟಿಸುತ್ತಾ "ಯಾರು ದೇವಿಯೇ, ಯಾರು ನನ್ನ ದೇವಿಯೇ ಬಾಮ್ಮಾ!" ಎಂದು ಕೂಗಿದರು. ಎಲ್ಲರಿಗೂ ಆಶ್ಚರ್ಯ, ಕಳವಳ, ಗೌರಮ್ಮನವರು ಬೆರಗಾಗಿ ಅವಳನ್ನೇ ನೋಡಿದರು. ಪಾಪ, ಎಷ್ಟು ಕ್ಷೀಣಿಸಿ ಹೋಗಿದ್ದಾಳೆ, ನೊಂದ ಜೀವ ಎಂದುಕೊಂಡರು ತಾಯಿ ಗೌರಮ್ಮ.

"ಈ ಹೊತ್ತಿಗೆ ಹೇಗೆ ಬಂದೆಯಮ್ಮಾ? ನಾನು ನಿನ್ನನ್ನೆ ಚಿಂತಿಸುತ್ತಿದ್ದೆ, ಸೌಖ್ಯವೇ?"

"ಅಪ್ಪಯ್ಯ, ನಾನು ನಿಮ್ಮ ಪಾಲಿಗೆ ಹಳೆಯ ದೇವಿಯೇ. ನಿಮ್ಮ ಅಸ್ವಸ್ಥ ಸ್ಥಿತಿಯು ತಿಳಿಯಿತು. ಆದರೆ ನನಗೆ ಹೊರಗೆ ಹೊರಡುವ ಸ್ವಾತಂತ್ರ್ಯವೇ ಇಲ್ಲ. ಗುಟ್ಟಾಗಿ ಹೊರಟುಬಂದಿದ್ದೇನೆ; ಯಾರಿಗೂ ಹೇಳಬೇಡಿ."

"ಅಂತೂ ಬಂದೆಯಾ ಮಗಳೇ, ಬಹಳ ಸಂತೋಷವಾಯಿತಮ್ಮಾ ನಿನ್ನನ್ನು ನೋಡಿ."

"ನನಗೆ ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಆಗುತ್ತಿದೆ. ಅಗ್ನಿಕುಂಡದ ಮೇಲೆ ನಿಂತಂತಾಗುತ್ತದೆ. ನನಗೆ ಬೇಗ ಹೋಗಬೇಕು. ಅಂದು ಬುದ್ಧಿಯಿಲ್ಲದೆ ಪಂಜರವನ್ನು ಹೊಕ್ಕು ಅರಗಿಳಿಯಂತೆ ಬೆಳೆದೆನು, ಇಂದು ಬೋನಿನಲ್ಲಿರುವ ಸಹಾಯಹೀನ ಸಿಂಹಿಣಿಯಂತಾಗಿದ್ದೇನೆ. ನನಗೆ ಜೀವನವೇ ಬೇಡವೆಂದಾಗುತ್ತದೆ. ನಿಮ್ಮನ್ನು ಪುನಃ ನೋಡುವ ಭಾಗ್ಯ ಉಂಟೋ ಇಲ್ಲವೋ ನನಗೆ! ನಾನು ಹೋಗಿಬರುತ್ತೇನೆ. ನೀವು ಹುಷಾರಾಗಿ!"

ಆಕಾಶವು ಪುನಃ ಮೇಘಾವೃತವಾಯಿತು. ಹಿಂಬಾಗಿಲಿನಿಂದಲೇ ಮಗಳು ಹೋದಳು. ಅದೇ ದಾರಿಯನ್ನು ಹಿಂಬಾಲಿಸುತ್ತಾ ಕರಣೀಕರು "ರಾಮ ರಾಮ" ಎಂದರು. ಮರು ನಿಮಿಷದಲ್ಲಿಯೇ ಅವರ ಆತ್ಮ ಶ್ರೀರಾಮನಲ್ಲಿ ಐಕ್ಯವಾಗಿತ್ತು.

# ಶಂಭುವಿನ ಕಥೆ

**(ಐದನೇ ಕತೆ –೧೯೪೭)**

ಮಡಿಕೇರಿಯ ಸುಂಕದ ಕಟ್ಟೆಯಲ್ಲಿ ಬಸ್ಸು ಜಕ್ಕು ಹೊಡೆದು ತನ್ನ ತುಂಬಿ ಬಿರಿವ ಸರಕನ್ನು ಬರಖಾಸ್ತು ಮಾಡಿದಾಗ ನಾನೂ ಹೊರಕ್ಕೆ ರಟ್ಟಿದೆ. ಈ ಮಹಾಘಟನೆಯನ್ನೇ ಕಾಯುತ್ತಿತ್ತೋ ಎಂಬಂತೆ ಆಗ ಕೋಟೆ ಗಡಿಯಾರ ನಟ್ಟಿರುಳ ೧೨ನ್ನು ಢಣಾರಣೆ ಬಜಾಯಿಸಿ ಅನುರಣಿಸಿ ವಿರಮಿಸಿತು. ಕೂಲಿಗಳಿರಲಿ, ತೊಂಡಿದನ ನಾಯಿ ಕೂಡ ಇರದ ಶ್ಮಶಾನ ಭೀಕರತೆ, ಅಮಾವಾಸ್ಯೆಯ ಕರಾಳ ರಾತ್ರಿ. ಮೂಳೆಯೊಳಗಣ ನೆಣ ಮಜ್ಜೆಗಳನ್ನೇ ಝಾಡಿಸುವಂತಿತ್ತು ಚಳಿ. ನಡುಗಿದೆ ಚಳಿಗೆ, ಮಿಗಿಲಾಗಿ ಎಲ್ಲಿ ಆಸರೆ ಅರಸಲಿ ಆ ಅಕಾಲ ಎಂದರಿಯದೇ.

ಆದರೆ ಇಪ್ಪತ್ತೊಂದರ ಹರೆಯ. ಕೆಚ್ಚು, ಅದಟು, ಜಂಬಗಳೇ ಮೈವೆತ್ತ ಯೌವನ. ಕಟ್ಟಾಳು, ಹಿಂದಿನ ಹತ್ತು ತಿಂಗಳೂ ಮದ್ರಾಸಿನಲ್ಲಿ ಕಡ್ಡಾಯವಾಗಿ ಜ್ಞಾನತಪಸ್ಸು ಮಾಡಿ ಅಂತಿಮ ಎಂ.ಎ (ಗಣಿತ) ಯುದ್ಧ ಮುಗಿಸಿ ತವರಿಗೆ ಮರಳುತ್ತಿದ್ದ ಧೀರ ಯೋಧ. ಬಾಣ ಚಿಮ್ಮಿದಂತೆ, ಹನುಮಂತ ನೆಗೆದಂತೆ ತಂದೆ ತಾಯಿ ಇರುವೆಡೆಗೆ ನೇರ ಧಾವಿಸಬೇಕೆಂಬ ತವಕ. ಆಗ ಅವರಿದ್ದುದು ಮಡಿಕೇರಿಯಿಂದ ನಾಲ್ಕು ಹರದಾರಿ ದೂರದ ಕಾರುಗುಂದ ಎಂಬ  ಮಡಿಕೇರಿ–ಭಾಗಮಂಡಲ ಹಾದಿಬದಿಯ ಒಂಟಿ ಬಂಗ್ಲೆ ಮಹಾಗ್ರಾಮದಲ್ಲಿ.

ನಾನು ಹುಟ್ಟಿದ್ದು ಬೆಳೆದದ್ದು ಪ್ರೌಢಶಾಲೆ ಓದಿದ್ದು ಎಲ್ಲವೂ ಮಡಿಕೇರಿಯಲ್ಲೇ. ಸುಂಕದಕಟ್ಟೆಯಿಂದ ಕೇವಲ ಐದು ಮಿನಿಟುಗಳ ಇಳಿಹಾದಿ ನೇರ ನಮ್ಮ ಮೂಲ ಮನೆಗೇ ಒಯ್ಯುತ್ತಿತ್ತು. ನಮ್ಮ ಅವಿಭಕ್ತ ಕುಟುಂಬದ ಸದಸ್ಯರಾಗಿ ಈಗ ಅಲ್ಲಿದ್ದವರು ನನ್ನ ಮೂವರು ಅಜ್ಜಿಯಂದಿರು, ಚಿಕ್ಕಪ್ಪ, ಚಿಕ್ಕಮ್ಮ. ಇವರೆಲ್ಲರೂ ಯಾವ ಹೊತ್ತಿಗೂ ನನ್ನನ್ನು ಅತ್ಯಂತ ಪ್ರೀತಿ ಸಂಭ್ರಮಗಳಿಂದ ಬರಮಾಡಿಕೊಳ್ಳುತ್ತಿದ್ದರು. ಈ ಎಲ್ಲವುಗಳ ಅರಿವೂ ನನಗಿತ್ತು. ಆದರೆ ಆಗಿಂದಾಗಲೇ ಗುರಿ ತಲಪುವುದು ಒಳ್ಳೆಯದೋ, ಮರುಮುಂಜಾನೆ ತನಕ ಅದನ್ನು ಮುಂದೂಡುವುದು ಒಳ್ಳೆಯದೋ? ಮಧ್ಯರಾತ್ರಿ ನಿರ್ಜನ ಮಾರ್ಗದಲ್ಲಿ ಏಕಾಂಗಿಯಾಗಿ ನಡೆದು ತವರು ಸೇರುವ ಸಾಹಸ ಪ್ರಿಯಕರವೋ ಮರುದಿನ ಮತ್ತೆ ಪ್ರಯಾಣ ತೊಡಗುವ ಮಾಮೂಲೀ ಕ್ರಮ ಪ್ರಿಯಕರವೋ?



ಎರಡನೆಯ ಯೋಚನೆಗೆ ಅವಕಾಶವಿಲ್ಲದಂತೆ ಆ ಕ್ಷಣವೇ ನಾನು ಕಾರಗುಂದಾಭಿಮುಖವಾಗಿ ದಾಪುಗಾಲು ಬೀರಿಯೇ ಬೀರಿದೆ: ತೊಟ್ಟ ಬಾಣ ಮರುತೊಡದವನ ಏಕಾಗ್ರತೆಯಿಂದ, ಇಟ್ಟಗುರಿ ಬದಲಾಯಿಸದವನ ಚಿತ್ತಸ್ಥೈರ್ಯದಿಂದ ಕಡಲು ದಾಟಲು ಬಾನಿಗಡರಿದವನ ಪರಮನಿಷ್ಠೆಯಿಂದ.

ಮಡಿಕೇರಿಯ ಗಡಿ ರಾಜಾಸೀಟ್ – ಬೆಟ್ಟದ ಮೇಲಂಚು. ಅಲ್ಲಿಂದಾಚೆಗೆ ಆಳದಲ್ಲಿ ಗದ್ದೆ ಕಣಿವೆ ತೆಮರು ತೆರೆದುಕೊಂಡು ಅಲೆ ಅಲೆಯಾಗಿ ಹರಡಿ ಹೋಗಿವೆ ದಿಗಂತದವರೆಗೂ. ಆ ಸಾಂದ್ರ ತಮಸ್ಸಿನ ಕಡಲಾಳದಲ್ಲೆಲ್ಲೋ ಹುದುಗಿದೆ ನಮ್ಮನೆ ಮಿಕ್ಕುದೆಲ್ಲ ಸುಮ್ಮನೆ!

ಕೈಯಲ್ಲಿ ಬೆಳಕಿಲ್ಲ, ಬಾನಲ್ಲಿ ಚುಕ್ಕಿಗಳು ಮಾತ್ರ, ಕಾಡಿನ ಮಾಡು ಗಾಢವಾಗಿತ್ತು. ಮೂಡ್? ಅನಂತದ ಅಖಂಡತೆ ಪ್ರದರ್ಶಿಸುವ ರುದ್ರ ಗಾಂಭೀರ್ಯ. ಈ ಮೇರೆ ಇರದ ಗುಹೆಯಲ್ಲಿ ದಾರಿ ಯಾವುದಯ್ಯಾ ವೈಕುಂಠಕೆ? ಆದರೆ ನಾನು ಆ ಪರಿಸರದ ಕೂಸು, ಆ ನಿಸರ್ಗದ ಕುಡಿ, ಆ ಬೆಟ್ಟದ ಇಲಿ.

ರಾಜಾಸೀಟಿನಿಂದ ಮುಂದಕ್ಕೆ ಘನತಿಮಿರಗರ್ಭದಲ್ಲಿ ಹುದುಗಿತ್ತು ಕುಂದೂರುಮೊಟ್ಟೆಯ ಇಳಿಜಾರು. ಇಳಿದೆ ಧಡ ಧಡನೆ. ತಳದಲ್ಲಿ ತಾಳತ್ತಮನೆ. ಅಲ್ಲಿಂದ ಮುಂದಕ್ಕೆ ಇರುಕಲು ಓಣಿ. ಅದನ್ನು ಅಡ್ಡ ಹಾಯ್ದು ಮೇಕೇರಿ ದಾರಿ ಸೇರಿದೆ. ಕಾಟಕ್ಕೇರಿ ಹೊಳೆದಾಟಿದೆ. ಈ ವೈತರಣೀ ನದಿಯನ್ನು ಉತ್ತರಿಸಿದೊಡನೆ ಎದುರಾಗುವುದು ಉಡುವತ್ತುಮೊಟ್ಟೆಯ ಚಡಾವು.  ಬೆಟ್ಟ ಇಳಿಯುವುದಕ್ಕಿಂತ ಏರುವುದೇ ಸುಲಭ. ಬದುಕೂ ಹಾಗೆಯೇ ಎಂದು ಕೊನೆಯ ಪರೀಕ್ಷೆ ಮುಗಿದಾಗ ನನಗನ್ನಿಸಿತ್ತು. ಸವಾಲು ಎದುರಾದಾಗ ಮಾತ್ರ ನಮ್ಮ ಛಲ ಪುಟಿಯುವುದಲ್ಲವೇ?

ಉಡುವತ್ತುಮೊಟ್ಟೆಯ ಕೊಡಿ ತಲಪಿದೆ. ಅಲ್ಲಿ ಹಾದಿ ಹಠಾತ್ ಬಲಕ್ಕೆ ಹೊರಳಿ ಕೆಳಕ್ಕೆ ಜಗುಳತೊಡಗುತ್ತದೆ. ಬೆಟ್ಟಗಳು ಪ್ರದರ್ಶಿಸುವ ವರಿಸೆಗಳೇ ಹಾಗೆ – ನಿರೀಕ್ಷಣೆಗೆ ಮೀರಿದ ಅಪಾಯಗಳು, ವಿಸ್ಮಯಗಳು, ಲಾಭಾಂಶಗಳು, ದಂಡಗಳು ಎಲ್ಲವೂ. ಆ ಇಳಿಜಾರಿನಲ್ಲಿ ಎಡವಿ ಬೀಳದಂತೆ ಬಲು ಎಚ್ಚರಿಕೆಯಿಂದ ನಡೆಯುತ್ತಿದ್ದೆ. ಗಂಟೇ ಒಂದು ದಾಟಿರಬೇಕು. ಗಹನ ಕಾಂತಾರ. ಗಗನ ದರ್ಶನವಿಲ್ಲ.

"ಸಾಂದ್ರತಮಂಧದಿ ಮುಳುಮುಳುಂಗುತ ಕರಂಗಿದೋಲಿದೆ ರಾತ್ರಿ." ಗೂಬೆಗಳ ಘೂಕಾರ. ಯಾವುದೋ ಎರೆ ಪ್ರಾಣಿಯ ಚೀತ್ಕಾರ. ಎಲ್ಲೋ ಏನೋ ಓಡಿದ ಅಥವಾ ಹಾರಿದ ಸದ್ದು, ಎಲ್ಲಕ್ಕೂ ಹಿನ್ನೆಲೆಯಾಗಿ ಗೊಂಡಾರಣ್ಯದ ಅವ್ಯಕ್ತ ನಿನಾದ – ಭಾವಗಮ್ಯ ಹೃದಯಸಂವಾದ.

ಕೊಂಬೆರೆಂಬೆಗಳ ನಿಕಟ ಹಂದರದಲ್ಲಿ ಚಕಚಕಿಸುತ್ತಿದ್ದ ಮಿನುಂಬಳಗಳ ಸರಮಾಲೆ ಕತ್ತಲೆಯ ಯವನಿಕೆಗೆ ಕುಂದಣದ ಚಿತ್ತಾರ ಪೋಣಿಸಿದಂತಿತ್ತು. ಎಲ ಎಲ ಇದೇನು – ಬೆವರುತ್ತಿದ್ದೇನೆ? ನಡಿಗೆಯ ರಭಸ ಕಾರಣವೇ? ದೆವ್ವಗಳ ಅವ್ಯಕ್ತ ಅಥವಾ ಸುಪ್ತ ಭಯ ಕಾರಣವೇ? ಕಳ್ಳಕಾಕರು ಹೊಂಚುತ್ತಿರಬಹುದು ಎಂಬ ಹೆದರಿಕೆ ಕಾರಣವೇ? ಹುಲಿಯೋ ಹಾವೋ ಫಕ್ಕನೆ ಎದುರು ಆಗಬಹುದೆಂಬ ಭೀತಿ ಕಾರಣವೇ? ಯಾವುದೂ ಅಲ್ಲ, ಅಲ್ಲ. ನಾನು ಹೆದರುವ ಕುಳ ಖಾತ್ರಿ ಅಲ್ಲ ಎಂದು ಮೇಲ್ಮನಸ್ಸು ಜಪಿಸುತ್ತಿದ್ದಂತೆಯೇ ಮೈ ಜುಮ್ಮೆಂದಿತು ಚಳಿಜ್ವರ ಬರುವಾಗಿನ ಪೀಠಿಕೆಯಂತೆ. ಇದರ ಕಾರಣವೇನು? ಯಾವ ಗಣಿತ ಸಮೀಕರಣ ಈ ಸಮಸ್ಯೆಯ ಹೂರಣವನ್ನು ಹೊರಗೆಡವಬಲ್ಲದು? ಮನಸ್ಸು ನನ್ನ ಬಾಲ್ಯದ ಅನುಭವಗಳನ್ನು ಮೂಕದೃಶ್ಯವಾಗಿ ಮನಃಪಟಲದ ಮೇಲೆ ಪ್ರಕ್ಷೇಪಿಸಿತು.

ಆಗ ನನಗೆ ವಯಸ್ಸು ಐದು ಅಥವಾ ಆರು. ಯಾವುದೋ ಒಂದು ಪರ್ವಕಾಲವನ್ನು ಕಾವೇರಿ ತೀರದ ಹರಿಶ್ಚಂದ್ರದಲ್ಲಿ ಆಚರಿಸಬೇಕೆಂದು ಹಿರಿಯರು ನಿರ್ಧರಿಸಿದರು. ಹಿಂದಿನ ರಾತ್ರಿ ಮಡಿಕೇರಿಯಿಂದ ಹೊರಟಿತು ನಮ್ಮ ಜೋಡೆತ್ತಿನ ಸವಾರಿ ಬಂಡಿ. ಸವಾರರು ನನ್ನ ಅಜ್ಜಿಯರಿಬ್ಬರು, ತಾಯಿ ಮತ್ತು ನಾನು. ದೆವ್ವ ಭೂತ ಪಿಶಾಚಿಗಳ ಮಾಯ, ಮಾಟ, ತಂತ್ರ ಛಿದ್ರಗಳನ್ನು ಸಾಕಷ್ಟು ಕೇಳಿದ್ದೆ. ಕೇಳಿ ನಡುಗಿದ್ದೆ. ನನಗೆ ಆಗ ನೇರ ಭೂತಗ್ರಾಮವನ್ನೇ ಹೊಕ್ಕ ಅನುಭವವಾಯಿತು. ಗಾಡಿಯ ಮೂಕಿಯಿಂದ ನೇಲುತ್ತಿದ್ದ ಲಾಂದ್ರದ ಮಬ್ಬು ಬೆಳಕಿನಲ್ಲಿ, ಹಿಂದೆಮುಂದೆ ಎಲ್ಲಿ ನೋಡಿದರೂ ವಿಕರಾಳ ಛಾಯೆಗಳು ಸರಿಯುವುದನ್ನು ಕಂಡೆ. ಶೀತಲ ಬೆವರಿನಿಂದ ತೊಯ್ದು ತೊಪ್ಪೆಯಾದೆ. ಮಹಿಳಾಮಣಿಯರಿಂದಲೂ ಗಾಡಿಹೊಡೆಯುತ್ತಿದ್ದ ಚನ್ನನಿಂದಲೂ ಸುರಕ್ಷಿತನಾಗಿದ್ದ ನಾನು ಗರಬಡಿದವನಂತೆ ಕಣ್ಣುಮುಚ್ಚಿ ಕುಳಿತಿದ್ದೆ. ಉಡುವತ್ತುಮೊಟ್ಟೆಯ ಚಡಾವು ಏರಿ ಮುಂದಿನ ಇಳಿಜಾರಿನಲ್ಲಿ ಗಾಡಿ ಒಂದಷ್ಟು ದೂರ ಉರುಳಿದಂತೆ ಎಡಗಡೆಯ ಎತ್ತು ದಿಢೀರನೆ ನೆಲಕ್ಕೆ ನೊಗಸಹಿತ ಬಿತ್ತು. ಆ ಗಳಿಗೆ ಚನ್ನ "ಅಮ್ಮಾ! ಕೆಟ್ಟಿತು ಕೆಲಸ" ಎಂದು ರಸ್ತೆಗೆ ಹಾರಿ, ಬಿದ್ದ ಎತ್ತಿನ ಚಾಚಿದ ಕಾಲಿನ ಮೇಲೆ ಉರುಳಿ ಹಾಯಬಹುದಾಗಿದ್ದ ಚಕ್ರಕ್ಕೆ ಅಡ್ಡವಾಗಿ ಮಲಗಿ, ಅದನ್ನು ತಡೆದು ನಿಲ್ಲಿಸಿದ ಕರ್ಣನಂತೆ. "ಚಕ್ರಕ್ಕೆ ಅಡ್ಡವಾಗಿ ಕಲ್ಲಿಡಿ, ಕಲ್ಲಿಡಿ ಕೂಡಲೇ" ಎಂದು ಕಿರುಚಿದ. ಈ ಮೊರೆಯ ಕೇಳಿ ಮೂವರು ಕೃಷ್ಣೆಯರೂ ಗಾಡಿಯಿಂದ ಹೊರಕ್ಕೆ ದುಮುಕಿ ಕತ್ತಲೆಯಲ್ಲಿ ಪರಡಿ ಕೈಗೆ ಸಿಕ್ಕ ಕಲ್ಲು ಜಲ್ಲಿ ಬೇರು ನಾರುಗಳನ್ನು ಬಲಗಾಲಿಯ ಅಡ್ಡ ಒಟ್ಟಿದರು. ನಾರಾಯಣನಾದ ನಾನು ಗಾಡಿಯೊಳಗೇ ಥರಥರ ನಡುಗುತ್ತಿದ್ದೆ. ಚನ್ನ ಎದ್ದ, ನೊಗದಿಂದ ಎತ್ತುಗಳನ್ನು ಬಿಡಿಸಿದ. ಎಡ ಎತ್ತನ್ನು ಮೈದಡವಿ ಮಾಲೀಸು ಮಾಡಿ ಎಬ್ಬಿಸಿದ – ಸದ್ಯ ಅದರ ಕಾಲು ಮುರಿದಿರಲಿಲ್ಲ. "ನೋಡಿ ಅಮ್ಮಾ! ಆ ಮುಂದಿನ ತಿರುಗಾಸಿನಲ್ಲಿ ಬೆಳ್ಳಗೆ ದೆವ್ವ ಸುಳಿದದ್ದು ನಾನು ಕಂಡೆ. ಈ ಎತ್ತು ಅದನ್ನು ನೋಡಿ ಗಾಬರಿಯಾಗಿ ಬಿತ್ತು ನೆಲಕ್ಕೆ. ನನಗೇ ನೇರ ಬಡಿಯಲಿಲ್ಲ ಆ ಪಿಶಾಚಿ" ಹೀಗೆ ಚನ್ನ ದೆವ್ವ ಸಾಕ್ಷಾತ್ಕಾರವಾದದ್ದನ್ನು ವಿವರಿಸಿದ. ದೆವ್ವಗಳ ಬೀಡು ಉಡುವತ್ತುಮೊಟ್ಟೆಯ ಇಳಿಜಾರು!

ಅಂದ ಹಾಗೆ ಈ ರಾತ್ರಿ ನಾನು, ಸುಮಾರು ಹದಿನೈದು ವರ್ಷಗಳ ಅನಂತರ, ಅದೇ ಆಸುಪಾಸಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದೇನೆ. ಶಾಕಿನಿ ಡಾಕಿನಿ ಲಂಕಿಣಿ ಕಿಂಕಿಣಿ ಕಥೆಗಳ ಪುಷ್ಕಳ ಗ್ರಾಸ ಉಂಡೇ ನಾನು ಬೆಳೆದಿದ್ದರೂ ಅವೆಲ್ಲ ಸುಳ್ಳಿನ ಕಂತೆಗಳು, ಕಲ್ಪನಾವಿಲಾಸಗಳು ಎಂದು ಈಗ ನನಗೆ ಗೊತ್ತಿದೆ. ಯಾವುದೇ ಬಗೆಯ ಅತೀಂದ್ರಿಯ ಅಥವಾ ಅನೈಸರ್ಗಿಕ ಘಟನೆಯ ಬಗ್ಗೆ ಇನಿತೂ ನಂಬಿಕೆ ಇರದ ತರುಣಧಮನಿ ನಾನು, ಆದರೂ ಮೈಜುಮ್ಮೆನ್ನುತ್ತಿದೆ. ನನಗೇನಾಗಿದೆ?

ಅಷ್ಟರಲ್ಲಿಯೇ ಹಿಂದಿನಿಂದ ದಾಪುಗಾಲು ನಡಿಗೆಯ ಸಪ್ಪುಳ ಕೇಳಿಸಿತು – ನನ್ನ ಮೈ ಒರೆಸುತ್ತ ಎಂಬಂತೆ ಒಂದು ವ್ಯಕ್ತಿ ನನ್ನನ್ನು ಹಿಂದೆ ಹಾಕಿ ಮುಂದಕ್ಕೆ ಚಿಮ್ಮಿತು.

"ಯಾರು? ಯಾರಲ್ಲಿ?" ತುಸು ಗಟ್ಟಿಯಾಗಿಯೇ ಒದರಿದೆ. ಏಕೆ ಈ ತಾರಸ್ಥಾಯಿ?

"ನಾನು ಶಂಭು. ನೀವು ಯಾರು?" ಆ ವ್ಯಕ್ತಿಯ ಉತ್ತರ.

"ನಾನು ನಾರಾಯಣ, ಕಾರಗುಂದಕ್ಕೆ ಹೋಗುತ್ತಿದ್ದೇನೆ. ನೀವೆಲ್ಲಿಗೆ ಹೋಗುತ್ತಿದ್ದೀರಿ ಈ ಅವೇಳೆಯಲ್ಲಿ?"

ಶಂಭು ಹೇಳಿದ "ಓ ನೀವು! ನಮ್ಮ ಕಾರುಗುಂದದ ತಿಮ್ಮಪ್ಪಯ್ಯ ಸಾಹೇಬರ ಮಗ. ಮದ್ರಾಸಿನಲ್ಲಿ ಓದುತ್ತಿರುವಿರಲ್ಲ? ನನಗೆ ಚೆನ್ನಾಗಿ ಗೊತ್ತಿದೆ ನಿಮ್ಮನ್ನು."

"ಸರಿ ಶಂಭು, ನಿಮ್ಮ ವಿವರ?"

"ಅದೇ ಬೇಂಗನಾಡು ಪುರೋಹಿತ ಕೃಷ್ಣ ಭಟ್ಟರ ಮಗ ನಾನು. ಇಲ್ಲಿ ಪೂರ ಕತ್ತಲೆ, ಇಲ್ಲವಾದರೆ ನೀವೇ ನನ್ನನ್ನು ಗುರುತಿಸಿರುತ್ತಿದ್ದಿರಿ."

ಶಂಭು ನನಗಿಂತ ನಾಲ್ಕೈದು ವರ್ಷ ಕಿರಿಯ. ಓದಿನಲ್ಲಿ ಬಲು ಜಾಣ. ಆ ವರ್ಷ ಮಂಗಳೂರಿನಲ್ಲಿ ಕಾಲೇಜ್ ಸೇರಿದ್ದ. ರಜೆಯಲ್ಲಿ ಮನೆಗೆ ಮರಳುತ್ತಿದ್ದ. ಅವನು ಕಾರುಗುಂದ ದಾಟಿ ಮತ್ತೂ ಮುಂದಕ್ಕೆ ಹೋಗಬೇಕಾಗಿತ್ತು.

ನಮ್ಮ ಮಾತುಕಥೆ ದಾರಿಯುದ್ದಕ್ಕೂ ಮುಂದುವರಿದುವು. ಹೀಗಾಗಿ ಹಾದಿ ಸವೆದದ್ದೇ ಅರಿವಿಗೆ ಬರಲಿಲ್ಲ. ಕಾರುಗುಂದ ಹತ್ತಿರವಾದಂತೆ ನಾನವನಿಗೆ ಸೂಚಿಸಿದೆ "ಈ ರಾತ್ರಿ ನಮ್ಮ ಮನೆಯಲ್ಲೇ ತಂಗಿದ್ದು ನಾಳೆ ಸಾವಕಾಶವಾಗಿ ನಿಮ್ಮಲ್ಲಿಗೆ ಹೋಗು."

"ಇಲ್ಲ ಈಗಲೇ ಮನೆ ತಲಪಬೇಕು. ಅಲ್ಲಿ ನನ್ನನ್ನು ಕಾಯುತ್ತಿದ್ದಾರೆ. ನಾಳೆ ಮುಂಜಾನೆ ಒಂದು ತುರ್ತು ಜಂಬ್ರ ಉಂಟು. ಅದರಲ್ಲಿ ನಾನು ಇದ್ದೇ ತೀರಬೇಕು..." ನಮ್ಮ ಒಂಟಿ ಬಂಗ್ಲೆ ಹತ್ತಿರವಾದಂತೆ ಶಂಭು ಇನ್ನಷ್ಟು ವೇಗದಿಂದ ನಡೆಯುತ್ತ ಕತ್ತಲೆಯ ಒಡಲಿನಲ್ಲಿ ಲೀನವಾಗಿಯೇ ಹೋದ.

ನಮ್ಮ ಮನೆಯ ಕದ ಬಡಿದಾಗ ಗಂಟೆ ಮುಂಜಾನೆ ಮೂರು ದಾಟಿತ್ತು. ಅನಿರೀಕ್ಷಿತವಾಗಿ ತೀರ ಅಕಾಲದಲ್ಲಿ 'ಯೋಧನ ಪುನರಾಗಮನ.' ಸಹಜವಾಗಿ ಎಲ್ಲರಿಗೂ ಸಂತೋಷ, ಪರಮಾಶ್ಚರ್ಯ, ತುಸು ಗಾಬರಿ ಸಹಿತ. ಮರುದಿನ ಹೀಗೆಯೇ ಹರಟೆ ಹೊಡೆಯುತ್ತ ನನ್ನ ನಡಿಗೆಯ ಅನುಭವ, ಉಡುವತ್ತುಮೊಟ್ಟೆಯಿಂದೀಚೆಗೆ ಶಂಭುವಿನ ಜೊತೆ 'ಸಹಗಮನ' ಎಲ್ಲ ವಿವರಗಳನ್ನು ಹೇಳಿದೆ.

"ಯಾರು? ನಮ್ಮ ಬೇಂಗುನಾಡು ಶಾಂತಿಕಾರ ಕೃಷ್ಣಭಟ್ಟರ ಮಗ ಶಂಭುವಿನ ಜೊತೆ ನೀನು ನಡೆದು ಬಂದೆಯಾ?" ತಾಯಿ ಕಣ್ಣರಳಿಸಿ ಕೇಳಿದರು.

"ಇದು ನಿಜವೇ?" ತಂದೆಯ ಪ್ರಶ್ನೆ.

ಶಂಭುವಿನ ಕಥೆಯನ್ನು ತಾಯಿ ಹೇಳಿದರು.

ಪುರೋಹಿತ ಕೃಷ್ಣ ಭಟ್ಟರದು ಬಡತನದ ಬಾಳು. ಮಗ ಶಂಭು ಚಿಕ್ಕಂದಿನಿಂದಲೇ ಬಲು ಸುಟಿಯಾದ ಹುಡುಗ  ಆಟ, ಪಾಠ, ಓಟ ಎಲ್ಲದರಲ್ಲೂ. ಈಜುವಿಕೆಯಲ್ಲಿ ನಿಸ್ಸೀಮ. ಅದೇ ಹಿಂದಿನ ವರ್ಷ ಕಾವೇರಿ ಹೊಳೆ ತುಂಬು ಹೊನಲಿನಲ್ಲಿ ಹರಿಯುತ್ತಿದ್ದಾಗ ಅದನ್ನು ಈಸಿ ದಾಟಿದ್ದ. ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದು ಸರ್ಕಾರದಿಂದ ವಿದ್ಯಾರ್ಥಿವೇತನ ಗಳಿಸಿದ್ದ. ತಂದೆ ಸಾಲ ಮಾಡಿ ಮಗನನ್ನು ಮಂಗಳೂರಿನಲ್ಲಿ ಕಾಲೇಜ್ ಸೇರಿಸಿದರು.



"ಈಗ ಎಂಟು ದಿನಗಳ ಹಿಂದೆ ಏನಾಯಿತು ಗೊತ್ತಾ?" ತಾಯಿ ಮುಂದುವರಿಸಿದರು. ಶಂಭು ತನ್ನ ಸ್ನೇಹಿತರ ಜೊತೆ ಮಂಗಳೂರಿನಲ್ಲಿ ಉಳ್ಳಾಲದ ಕಡಲ ಕಿನಾರೆಗೆ ಹೋಗಿದ್ದ. ಎಲ್ಲರೂ ಹದಿಹರೆಯದ ಹುಡುಗರು: ಕಡಲಘೋಷವನ್ನು ಮೀರಿಸುವಂತಿದ್ದುವು ಈ ಉತ್ಸಾಹದ ಕಾರಂಜಿಗಳ ನಗು, ಕೇಕೆ, ಉಲಿತ. ಸಮುದ್ರ ಸ್ನಾನ ಮಾಡೋಣವೆಂದು ಇಳಿದರು ನೀರಿಗೆ. ಬಹಳ ಹೊತ್ತು ಕಡಲಂಚಿನ ತೆಟ್ಟೆ ನೀರಿನಲ್ಲೇ ನೀರಾಟವಾಡಿದರು. ಆಗ ಭರತ ಏರುತ್ತಿದ್ದ ಹೊತ್ತು. ಗಜಗತ್ರದ ಅಲೆಯೊಂದರಲ್ಲಿ ಮೂವರು ಸಿಕ್ಕಿ ಹಾಕಿಕೊಂಡರು. ಅವರಿಗೆ ಈಸು ಬಾರದು, ಸಮುದ್ರರಾಜನ ಲಹರಿ ತಿಳಿಯದು. ದಡ ಸೇರುವ ಬಗೆ ಹೊಳೆಯದು.

ಶಂಭು ನೋಡಿದ. ಕಾವೇರಿಪೂರವನ್ನು ಜಯಿಸಿದ ವೀರ, ಕಡಲಾಳಕ್ಕೆ ಸೆಳೆಯಲ್ಪಡುತ್ತಿದ್ದ ಗೆಳೆಯರತ್ತ ಛಂಗನೆ ಚಿಮ್ಮಿದ. ಅವರನ್ನು ದಂಡೆಯತ್ತ ದೂಡಿದ.

ಆದರೆ ಶಂಭು ಮಾತ್ರ ಹಿಂದೆ ಬರಲಿಲ್ಲ.

"ಅಂದ ಹಾಗೆ ನೀನು ನಮ್ಮ ನಾರಾಯಣನೇ ಹೌದಷ್ಟೆ?"

# ಹುಲಿಯ ಪ್ರೇಮ

**(ಆರನೇ ಕತೆ –೧೯೪೬)**

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು? ಕವಿಶಿಷ್ಯ.
ಮಡಿಕೇರಿಯಿಂದ ಐದು ಮೈಲು ದೂರದಲ್ಲಿ ಹುಲಿತಾಳವೆನ್ನುವ ಒಂದು ಹಳ್ಳಿಯಿದೆ. ಪ್ರತಿಯೊಂದು ಪ್ರಖ್ಯಾತ ಸ್ಥಳದ ಹಿನ್ನೆಲೆಯಲ್ಲಿಯೂ ಒಂದು ಸ್ಥಳ ಪುರಾಣವಿರುವಂತೆ ಇದರ ಹಿನ್ನೆಲೆಯಲ್ಲಿಯೂ ಒಂದು ದಂತ ಕಥೆಯಿದೆ. ಎಲ್ಲಾ ಹಳ್ಳಿಗಳಿಗೂ ಬೀಡುಗಳಿಗೂ ಈ ರೀತಿಯ ಇತಿಹಾಸಗಳಿದ್ದರೂ ಅವೆಲ್ಲ ಸಾಕಷ್ಟು ಪ್ರಚಾರವಿಲ್ಲದೆ, ಕೇಳುವವರಿಲ್ಲದೆ ಪ್ರಕಾಶಕ್ಕೆ ಬರುವುದಿಲ್ಲ. ಹುಲಿತಾಳವನ್ನು ಹುಲಿಯು ತಾಳ ಹಾಕುವ ಸ್ಥಳವೆಂದು ಕೆಲವರು ವಿವರಿಸಿದರೆ, ಅದು ಹುಲ್ತಆಳ ಅಂದರೆ ಆಳವಾಗಿ ಹುಲ್ಲು ಬೆಳೆದಿರುವ ಸ್ಥಳವೆಂದು ಇನ್ನು ಕೆಲವರು ಅರ್ಥ ಮಾಡುವರು. ಇದೊಂದೂ ಸರಿಯಲ್ಲ, ಬೇರೇನೋ ನಿಗೂಢಾರ್ಥ ಇದರಲ್ಲಿರಬೇಕು ಅಥವಾ ಅರ್ಥವಿಹೀನವಾದ ಅನೇಕ ಶಬ್ದಗಳಂತೆಯೇ ಇದೂ ಒಂದು ಎಂದು ಹಲವರು ತಿಳಿಯುವರು. ಮಡಿಕೇರಿಯೇ ಕಾಡು; ಇನ್ನು ಅದರ ಸಮೀಪದ ಹಳ್ಳಿಯೆಂದರೆ ಅದು ಗೊಂಡಾರಣ್ಯವೆಂದೇ ತಿಳಿಯಬೇಕು. ಈ ಮಹಾರಣ್ಯದ ಮಧ್ಯೆ ಮನುಷ್ಯ ನಿರ್ಮಿತವಾದ ಗದ್ದೆ ಬಯಲುಗಳು ಅಂಚಿನಲ್ಲಿ ಅಲ್ಲಲ್ಲಿ ದೂರದೂರದಲ್ಲಿ ಒಂದೆರಡು ಗುಡಿಸಲುಗಳು ಇವೆ. ಇವುಗಳೇ ಈ ಹಳ್ಳಿಯ ಮುಖ್ಯ ಮಾರ್ಗಗಳು ಮತ್ತು ಜನವಸತಿಯ ನೆಲೆಗಳು. ಕೆಲವು ವರ್ಷಗಳ ಹಿಂದೆ ಈ ಹಳ್ಳಿಯಲ್ಲಿ ನಮ್ಮ ಸಂಬಂಧಿಕರೊಬ್ಬರ ಮನೆಯಲ್ಲಿ ಒಂದು ಮದುವೆ ನಡೆಯಿತು. ಅದಕ್ಕೆ ಹೋಗಿದ್ದಾಗ ಹುಲಿತಾಳದ ವಿಷಯದಲ್ಲಿ ನನ್ನ ಉತ್ಸಾಹ ಕೆದರಿತು. ಮಂಟಪದಲ್ಲಿ ಕುಳಿತಿದ್ದ ಒಬ್ಬ ವೃದ್ಧ ಮಹಾಶಯರನ್ನು, ಆ ಸ್ಥಳಕ್ಕೆ ಸಂಬಂಧಿಸಿದವರನ್ನು, ಇದರ ಕುರಿತು ಪ್ರಶ್ನಿಸಿದೆ. ಅವರೆಂದರು, "ಊಟವಾಗ್ಲಿ; ಆ ಮೇಲೆ ಒಂದು ಜಾಗಕ್ಕೆ ಹೋಗೋಣ. ಅಲ್ಲಿ ಕಥೆ ಹೇಳುವೆನು." ಇದು ನನ್ನ ಕುತೂಹಲವನ್ನು ಇನ್ನೂ ಹೆಚ್ಚಿಸಿತು. ಮಾತು ಬೇರೆ ಕಡೆಗೆ ಹರಿಯಿತು.



ಭೋಜನಾನಂತರ ಆ ಮುದುಕರ ಮುಂದಾಳುತನದಲ್ಲಿ ನಾನೂ ನನ್ನ ಕೆಲವು ಗೆಳೆಯರೂ ಮದುವೆ ಮನೆಯಿಂದ ಹೊರಟೆವು. ಗದ್ದೆಗೆ ಇಳಿದು ಕರೆಯ ಹುಲ್ಲುಗಾವಲನ್ನು ಏರಿ ಮುಂದೆ ನಡೆದೆವು. ಸ್ವಲ್ಪ ದೂರ ಸಾಗುವಷ್ಟರಲ್ಲಿ ಕಾಡು ನಿಬಿಡವಾಯಿತು. ಅದರ ಮಧ್ಯೆ ದನಗಳು ನಡೆದು ನಡೆದು ಮಾಡಿದ ಜಾಡಿನಲ್ಲಿ ಮುಂದುವರಿದೆವು. ಏಪ್ರಿಲ್ ತಿಂಗಳಿನ ಸುಡುವ ಬಿಸಿಲು. ಮರಗಳ ಮರೆಯಿಂದ ಸೂರ್ಯಕಿರಣಗಳು ಬಂದು ನಮ್ಮನ್ನು ಕುಕ್ಕುತ್ತಿದ್ದುವು. ಈ ಕಿರಣಾನುಭವ ತರಣಿದರ್ಶನಕ್ಕಿಂತ ಹಿತಕರವಾಗಿತ್ತು. ಇಡೀ ಕಾಡು ನಿಶ್ಶಬ್ದ, ನಮ್ಮ ನಡಿಗೆಯ ಶಬ್ದ, ತರಗೆಲೆಗಳ ಚರಗುಟ್ಟುವಿಕೆ ಅಲ್ಲದೆ ಬೇರೇನೂ ಇಲ್ಲ. ಇಲ್ಲವೆನ್ನುವಂತೆಯೂ ಇಲ್ಲ  ಅಪರೂಪಕ್ಕೆ ಒಂದು ಮರಕುಟ್ಟಿಗನ ಹಕ್ಕಿ ಕುಂಬು ಮರವನ್ನು ಕುಟ್ಟುವ ಸದ್ದೋ, ಒಂದು ಜೀರುಂಡೆಯು ಜೀರುವ ಸದ್ದೋ ಕೇಳಿಸುತ್ತಿತ್ತು. ವಿಶಿಷ್ಟ ಗಾಂಭೀರ್ಯ ಅಲ್ಲೆಲ್ಲ ಹಬ್ಬಿ ವ್ಯಾಪಿಸಿತ್ತು. ನಾವು ಮದುವೆಯ ಮನೆಯಿಂದ ಅರ್ಧ ಗಂಟೆಯ ದೂರವನ್ನು ಗಮಿಸಿದ್ದೆವು. ಆಗ ದೂರದಲ್ಲಿ ಒಂದು ಪಾಳುಬಿದ್ದ ಮನೆಯ ದಳ ಕಂಡ ಹಾಗಾಯಿತು.

ಹತ್ತಿರ ಸರಿದಂತೆ ಅದೊಂದು ಕಲ್ಲು ಕಟ್ಟಿದ ಪಾಯ, ಅದರ ಮೇಲೆ ಏನೋ ಒಂದು ಕಲ್ಲಿನ ವಿಗ್ರಹವಿದೆ ಎಂದು ವಿವರ ತಿಳಿಯಿತು. ಮರುನಿಮಿಷದಲ್ಲಿ ದಳದ ಮೇಲೇರಿದ್ದೆವು. ಆ ವಿಗ್ರಹ ಹುಲಿಯದು. ಸುತ್ತಲೂ ನಿಬಿಡವಾಗಿ ಬೆಳೆದಿರುವ ದೊಡ್ಡ ದೊಡ್ಡ ಮರಗಳು. ಈ ದಳದ ಬುಡದಿಂದಲೂ ಒಂದು ದೊಡ್ಡ ಮರ ಬೆಳೆದು ಆಕಾಶದಲ್ಲಿ ವ್ಯಾಪಿಸಿದೆ. ದಳದ ಮೇಲೆ ಹುಲಿಯ ವಿಗ್ರಹವನ್ನಿಡಲಾಗಿದೆ. ಅದು ಹುಲಿಯೆಂದು ನಮಗೆ ಸುಲಭವಾಗಿ ತಿಳಿಯಿತಾದರೂ ಬೇರೆ ಯಾವ ವಿಶೇಷ ಸೌಂದರ್ಯವೂ ಅದರಲ್ಲಿರಲಿಲ್ಲ. ಜಕಣಾಚಾರಿಯ ವರದಹಸ್ತಸ್ಪರ್ಷ ಅದಕ್ಕಿರಲಿಲ್ಲ. ತಾಜಮಹಲಿನ ನಾಜೂಕು ಅಲ್ಲಿ ಶೂನ್ಯ. ಆದರೂ ಹಳ್ಳಿಗರ ಮುಗ್ಧ ಹಾಡಿನಂತೆ ಸುಂದರ ಜೀವನದಂತೆ ಅದು ಸರಳವಾಗಿತ್ತು. ಯಾರೋ ಒಬ್ಬ ಪುಣ್ಯಾತ್ಮನಿಗೆ ಏನೋ ಒಂದು ಕಾರಣದಿಂದ ಹುಲಿಯ ವಿಗ್ರಹವನ್ನು ಕೆತ್ತಿಸಿ ಸ್ಥಾಪಿಸಬೇಕೆಂದಾಗಿರಬಹುದು. ಅವನ ಉದ್ದೇಶಕ್ಕೆ ಏನಾದರೂ ಕಾರಣ ಇದ್ದಿರಲೇಬೇಕು. ಅದು ಇಲ್ಲಿ ರೂಪುವಡೆದಿದೆ. ತುಂಬು ಹೃದಯದಿಂದ ಅವನಿದನ್ನು ಮಾಡಿಸಿದ್ದನಾಗಿರಬಹುದಾದರೂ ಆ ಕಾಲದ ಶಿಲ್ಪಕಲೆಯು ಇಷ್ಟನ್ನೇ ಕಡೆಯಲು ಶಕ್ಯವುಳ್ಳದ್ದಾಗಿರಬೇಕು. ಅದು ಹೇಗೂ ಇರಲಿ, ಹುಲಿತಾಳದಲ್ಲಿ ಕಾಡಿನ ಮಧ್ಯೆ ಈ ಹುಲಿಯ ವಿಗ್ರಹ ಇವುಗಳಲ್ಲಿ ಏನೋ ಕುತೂಹಲಜನಕವಾದ ಸಂಬಂಧವಿರಬೇಕು ಎಂದು ನಮಗನ್ನಿಸಿತು. ಮುದುಕರು ಆಗಲೇ ಬಾಯ್ತೆರೆದಿದ್ದರು. "ಕಥೆಯನ್ನು ಪ್ರಾರಂಭಿಸಲೇ?" ನಮಗೆ ಬೇಕಾದದ್ದೂ ಅದೇ. ಸಂತೋಷದಿಂದ ಅಲ್ಲಿಯೇ ಕುಳಿತುಕೊಂಡೆವು.

ಆರೇಳು ವರ್ಷದ ಹುಡುಗ ಗಣಪತಿಯು ದನಕಾಯುತ್ತ ಬಯಲಿನಲ್ಲಿ ಅಲೆಯುತ್ತಿದ್ದನು. ಮಾರ್ಗಶಿರ ಮಾಸವಾದುದರಿಂದ ಆಗ ಗದ್ದೆಗಳಲ್ಲಿ ಪೈರು ಹಣ್ಣಾಗುತ್ತಿರುವ ಸಮಯ. ದನಗಳ ಮೇಲೆ ಸಾಕಷ್ಟು ಎಚ್ಚರವಿಲ್ಲದಿದ್ದರೆ ಅವು ಗದ್ದೆಗಳಿಗೆ ನುಗ್ಗಿ ಸೂರೆಮಾಡುವುವು. ಬಯಲಿನಲ್ಲಿ ಬೇಕಾದಷ್ಟು ಹುಲ್ಲಿದೆ. ಬಿಸಿಲಾಯಿತೆಂದರೆ ಕರೆಯಲ್ಲಿ ಮರಗಳ ನೆರಳಿದೆ. ಹೇಮಂತ ಋತುವಿನಲ್ಲಿ ಕೊಡಗಿನಲ್ಲಿ ಸೆಕೆಯೆಲ್ಲಿಂದ ಬಂತು? ಎಮ್ಮೆ ದನಗಳು ನಿಶ್ಚಿಂತೆಯಿಂದ ಅಲೆಯುತ್ತಿದ್ದುವು. ಕೆಲವು ಮೇದುಮೇದು ತೃಪ್ತಿಯಿಂದ ನೆರಳಿನಲ್ಲಿ ಮಲಗಿ ಅರ್ಧ ಕಣ್ಣುಮುಚ್ಚಿಕೊಂಡು ಮೆಲುಕು ಹಾಕುತಿದ್ದುವು. ಒಮ್ಮೊಮ್ಮೆ ಕಿವಿಗಳನ್ನು ಪಟಪಟನೆ ಬಡಿದು ಮೈಮೇಲೆ ಎರಗಿದ ನೊಣಗಳನ್ನು ಓಡಿಸುತ್ತಿದ್ದುವು.  ಮೇಯುತ್ತಿದ್ದ ದನಗಳ ಕುತ್ತಿಗೆಗೆ ಕಟ್ಟಿದ್ದ ಮರದ ತಟ್ಟೆಗಳು ತಟಪಟವೆಂದು ತಾಳ ಗತಿಯ ಹಂಗುತೊರೆದು ಶಬ್ದ ಮಾಡುತ್ತಿದ್ದುವು. ಎಳೆಗರುಗಳ ಕೊರಳುಗಳಿಗೆ ಕಟ್ಟಿದ್ದ ಕಿರುಗಂಟೆಗಳು ಮಧುರವಾಗಿ ಕಿಣಿಕಿಣಿ ಎಂದು ಶ್ರುತಿ ಮಾಡುತ್ತಿದ್ದುವು. ಅಲೆದ ಗಣಪತಿಯು ಒಂದು ಮರವನ್ನು ಹತ್ತಿ ಹಕ್ಕಿಯ ಮೊಟ್ಟೆಗಳನ್ನು ಹಿಡಿಯುವ ಸಾಹಸದಲ್ಲಿ ಉದ್ಯುಕ್ತನಾದನು. ಕೊಂಬೆಯನ್ನು ಸರಸರನೆ ಏರಿ ಹಕ್ಕಿಯ ಗೂಡಿನ ಹತ್ತಿರ ತಲಪಿದನು. ತಾಯಿ ಹಕ್ಕಿಯು ಭಯದಿಂದ ಚೀತ್ಕಾರಮಾಡುತ್ತ ಹಾರಿ ಹೋಗಿ ಸುತ್ತಲೂ ಸುತ್ತತೊಡಗಿತು.  ಅಷ್ಟರಲ್ಲಿಯೇ ಅವನ ಲಕ್ಷ್ಯವನ್ನು  ನವಧ್ವನಿಯೊಂದು ಸೆಳೆಯಿತು. "ಗುರ್ ಗುರ್ ಗುರ್" ಎಂದು ಕಾಡಿನ ಒಳಗಿನಿಂದ ಕೇಳಿಸಿದ ಹಾಗಾಯಿತು. ಆ ಭಾಗದಲ್ಲಿ ಮಲಗಿದ್ದ, ಮೇಯುತ್ತಿದ್ದ ದನಗಳು ಕಿವಿ ನಿಗುರಿಸಿದುವು; ಕೆಲವು ಎದ್ದುವು. "ಗುರ್ ಗುರ್ ಗುರ್" ಹುಡುಗನೂ ಕಿವಿಗೊಟ್ಟು ಆಲಿಸಿದನು. ಹಸುಗಳು ಅಲ್ಲಿಂದ ದೂರಕ್ಕೆ ಓಡಿ ಗಾಬರಿಯಿಂದ ಆ ದಿಕ್ಕನ್ನೇ ನೋಡುತ್ತಿದ್ದುವು. ಪುನಃ "ಗುರ್ ಗುರ್ ಗುರ್" ಎಂದು ಜೋರಾಗಿಯೇ ಕೇಳಿಸಿತು. ಇದೇನೋ ಹೊಸ ಸ್ವರ ಕೇಳಿಸುತ್ತಿದೆ, ನೋಡಿ ಬರೋಣವೆಂದು ಕುತೂಹಲಪೂರಿತ ಗಣಪತಿಯು ಮರದಿಂದ ಜಿಗಿದು ಆ ಕಡೆಗೆ ಓಡಿದನು. ಗುರ್ ಗುರ್ ಶಬ್ದ ಕೇಳಿಸುತ್ತಲೇ ಇತ್ತು. ಆ ಧ್ವನಿಯು ಬಂದೆಡೆಗೆ ಅಂದಾಜಿನಿಂದ ನಡೆದನು.

ಹುಡುಗನಿಗೆ ಆಶ್ಚರ್ಯವೇ ಆಶ್ಚರ್ಯ! ಅವನು ಅದುವರೆಗೂ ನೋಡಿರದಿದ್ದ ಒಂದು ದೃಶ್ಯ ಅಲ್ಲಿ ಕಣ್ಣಿಗೆ ಬಿತ್ತು. ದೊಡ್ಡ ಮರದಿಂದ ಮಾಡಿದ ಗಾಡಿಯ ಮೇಲುಭಾಗ ಮಾತ್ರವಿದೆ. ಚಕ್ರಗಳು ಅರ್ಧಾಂಶ ಮಣ್ಣಿನಲ್ಲಿ ಹೂತುಹೋಗಿವೆ. ಎತ್ತುಗಳಿಲ್ಲ. ಇದರ ಮೂಕಿ ಭಾಗದಲ್ಲಿ ಕಬ್ಬಿಣದ ಸರಳುಗಳಿಂದ ಮಾಡಿದ ಕಟಕಟೆಯ ಬಾಗಿಲು ಇದೆ, ಮೇಲೆ ಮಾಡು. ಇಡೀ ಗಾಡಿಯ ಮೇಲೆ ನಾನಾ ವಿಧದ ಹಂಬುಗಳು ಹಬ್ಬಿ ಬೆಳೆದಿವೆ. ಮರಗಳ ಅಡಿಯಲ್ಲಿ ಆ ನೆರಳಿನಲ್ಲಿ ನೋಡುವಾಗ ಗಾಡಿಯು ಅಲ್ಲಿಯೇ ಹುಟ್ಟಿ ಬೆಳೆಯಿತೋ ಎಂಬಂತೆ ತೋರುವುದು. ಅದರ ಒಳಗಿನಿಂದ ಗುರ್ ಗುರ್ ಶಬ್ದ ಹೊರಡುತ್ತಿತ್ತು. ಗಣಪತಿಯು ಮೂಕಿಯ ಮೇಲೆ ಕಟಕಟೆಯ ಹೊರಗೆ ನಿಂತು ಇಣುಕಿದನು, ಬಾಗಿಲ ಒಳಗೆ ಏನಿದೆಯೆಂದು ನೋಡಿದನು. ಒಂದು ದೊಡ್ಡ ನಾಯಿಯು ಅದರೊಳಗೆ ಆ ಸಣ್ಣ ಜಾಗದಲ್ಲಿ ವಿಶ್ರಾಂತಿಯಿಲ್ಲದೆ ಹಿಂದಕ್ಕೂ ಮುಂದಕ್ಕೂ ಅಲೆಯುತ್ತಿದೆ. "ಗುರ್ ಗುರ್" ಎಂದು ಕೂಗುತ್ತಿದೆ. ಆ ನೆರಳಿನಲ್ಲಿ ಅದರ ಮೈ ಬಣ್ಣ ಸ್ಪಷ್ಟವಾಗುವುದಿಲ್ಲ. ಅಂತೂ ನಾಯಿಯನ್ನು ಅದರೊಳಗೆ ಕೂಡಿಹಾಕಿದುದು ನಿಶ್ಚಯ. ಪ್ರಾಣಿಯು ಗಣಪತಿಯನ್ನು ನೋಡಿ ಕಟಕಟೆಯ ಹತ್ತಿರ ಬಂದು ಅದನ್ನು ಕಡಿಯಿತು. ಅದು ಕಟಪಟನೆ ಸದ್ದು ಮಾಡಿತು. ಮತ್ತೆ ಅವನನ್ನೇ ದುರುಗುಟ್ಟಿ ನೋಡುತ್ತ "ಗುರ್ ಗುರ್" ಎಂದಿತು. ಹಿಂದೆ ಓಡಿತು, ಮುಂದೆ ಬಂದಿತು. ಪುನಃ ಗಣಪತಿಯನ್ನು ನೇರವಾಗಿ ದೃಷ್ಟಿಸಿತು. ಇದೇನು ಈ ನಾಯಿ ಈ ರೀತಿ ಸಿಕ್ಕಿಬಿದ್ದಿದೆ ಎಂದು ಆ ಎಳೆ ಅಣುಗನಿಗೆ ತಿಳಿಯಲಾರದು. ಅವನು ಮೂಕಿಯಿಂದ ಮೂಂದೆ ನಡೆದು "ಬಾ ಬಾ ದೂವೋ ದೂವೋ" ಎಂದು ಕೈ ಚಾಚಿದನು. ನಾಯಿಯು ನಾಲಗೆ ನೀಡಿ ಇವನ ಕೈ ನೆಕ್ಕಿತು. ಕಂದು ಬಣ್ಣದ ಈ ತರಹದ ನಾಯಿಯನ್ನು ಅದುವರೆಗೂ ಅವನು ನೋಡಿರಲಿಲ್ಲ. ಅದನ್ನು ಸೆರೆಯಿಂದ ಬಿಡಿಸಿ ಕರೆದುಕೊಂಡು ಹೋಗಬೇಕೆಂದು ಮನಸ್ಸಾಯಿತು. ಕೂಡಲೆ ಕಬ್ಬಿಣದ ಬಾಗಿಲನ್ನು ಎಳೆದು ನೂಕಿ ತೆರೆದೇ ಬಿಟ್ಟನು. ನಾಯಿಯು ರಭಸದಿಂದ ಹೊರಗೆ ದುಮುಕಿತು. ಆ ವೇಗಕ್ಕೆ ಗಣಪತಿಯು ನೆಲದ ಮೇಲೆ ಉರುಳಿದನು, ತತ್‌ಕ್ಷಣವೇ ಎದ್ದು "ದೂವೋ ದೂವೋ ಬಾ ಬಾ" ಎಂದು ಅದನ್ನು ಹಿಂಬಾಲಿಸಿದನು. ಓಡುತ್ತಿದ್ದ ನಾಯಿಗೆ ಏನಾಯಿತೊ, ಅದು ಫಕ್ಕನೆ ಹಿಂತಿರುಗಿ ಗಣಪತಿಯ ಕಡೆಗೆ ಸೀದಾ ಬಂದಿತು. "ಗುರ್ ಗುರ್ ಕುಂಯ್" ಎನ್ನುತ್ತ ಅವನನ್ನು ಮೂಸಿ ನೋಡಿ ನೆಕ್ಕಿ ಮತ್ತೆ ಓಡಿಹೋಯಿತು. ಗಣಪತಿಯು ಪುನಃ ಅದರ ಹಿಂದೆ ಓಡಿದನು. "ಬಾ ಬಾ" ಎಂದು ಕರೆದನು. ಆದರೆ ಆ ದೊಡ್ಡ ನಾಯಿಯು ಮತ್ತೆಲ್ಲಿಯೂ ಕಾಣಸಿಗಲಿಲ್ಲ. ಹತಾಶನಾಗಿ ಹಿಂದಕ್ಕೆ ದನ ಕಾಯಲು ಹೋದನು.

ಗಣಪತಿಯ ಆಶ್ಚರ್ಯಕ್ಕೆ ಮೇರೆ ಇರಲಿಲ್ಲ. ಕಾಡಿನಲ್ಲಿ ಬೆಳೆದಿರುವಂತಹ ಗಾಡಿಯೊಳಗೆ ದೊಡ್ಡದೊಂದು ನಾಯಿ. ಅದು ಹಾಗೇಕೆ ಅಲ್ಲಿ ಇದ್ದಿರಬಹುದು? ಮತ್ತು ಹಾಗೇಕೆ ಓಡಿಹೋಯಿತು? ಪುನಃ ಹಿಂತಿರುಗಿಬರಬಹುದೇ? ಮತ್ತೆ ಅದನ್ನು ನೋಡಬಹುದೇ? ಅದರ ವಿಷಯದಲ್ಲಿ ಈ ಹುಡುಗನಿಗೆ ಕುತೂಹಲವು ಹೆಚ್ಚಾಯಿತು. ಅದನ್ನು ಮತ್ತೊಮ್ಮೆ ನೋಡಬೇಕೆಂದು ಬಯಸಿದನು. ಸಾಯಂಕಾಲ ಅದೇ ಸ್ಥಳಕ್ಕೆ ಹೋಗಿ "ಗುರ್ ಗುರ್" ಎಂದು ಅನುಕರಣೆ ಮಾಡಿದನು. "ಬಾ ಬಾ" ಎಂದು ಕರೆದನು. ಅದು ಹೋದ ದಿಕ್ಕಿನಲ್ಲಿಯೇ ಸಾಗಿದನು. ಆದರೆ ದೊಡ್ಡ ನಾಯಿಯು ಎಲ್ಲಿಯೂ ಇಲ್ಲ. ಅವನು ಹತಾಶನಾಗಲಿಲ್ಲ. ಇನ್ನೊಮ್ಮೆ ಆ ಚಂದದ ನಾಯಿಯನ್ನು ನೋಡಬೇಕೆಂದು ಬಯಸಿ ಪ್ರತಿದಿನವೂ ದನಗಳನ್ನು ಮೇಯಲು ಬಿಟ್ಟು ಕಾಡಿನಲ್ಲಿ ಅಲೆಯುವನು. "ಗುರ್ ಗುರ್" ಎಂದು ಎಲ್ಲಿ ಹೇಳಿದರೂ ನಾಯಿಯು ಮಾತ್ರ ಕಾಣುವುದಿಲ್ಲ. ಹೀಗೆ ಒಂದು ತಿಂಗಳು ಸಂದಿರಬಹುದು. ಗಣಪತಿಯು ಎಂದಿನಂತೆ ಕಾಡಿನಲ್ಲಿ ಅಲೆಯುತ್ತಿದ್ದನು. ಆಗ ಫಕ್ಕನೆ ಸಮೀಪದಿಂದ ಅವನಿಗೆ ಪರಿಚಿತ ಸ್ವರ, ಯಾವ ಸ್ವರವನ್ನು ಅವನು ಈ ಒಂದು ತಿಂಗಳಿನಿಂದ ಕೇಳಲು ಹಾರೈಸುತ್ತಿದನೋ ಅದು. ಕೇಳಿ ಬೆಚ್ಚಿಬಿದ್ದನು. "ಬಾ ಬಾ" ಎಂದು ಅವನು ಸಂತೋಷದಿಂದ ಕರೆದನು. ಪೊದರಿನೆಡೆಯಿಂದ ನೆಗೆದು ಬಂದಿತು ನಾಯಿ. ಅದರ ಮೈದಡವಿದನು, ಬೆನ್ನನ್ನು ಸವರಿದನು. ದೊಡ್ಡ ನಾಯಿಯು ಅವನೊಡನೆ ಆಟವಾಡಿತು. ಅವನ ಮೈಯನ್ನು ನೆಕ್ಕಿತು. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಕಿವಿನಿಗುರಿಸಿ ಓಡಿ ಹೋಯಿತು. ದೂರದಲ್ಲಿ ಯಾರೋ ಮಾತಾಡುವ ಸದ್ದು ಕೇಳಿಸುತ್ತಿತ್ತು. ಗಣಪತಿಯು

ತುಂಬ ಸಂತೋಷದಿಂದ ಮನೆಗೆ ಮರಳಿದನು. ಅಂದಿನಿಂದ ಪ್ರತಿ ದಿನವೂ ನಾಯಿಯ ಮತ್ತು ಗಣಪತಿಯ ಭೇಟ್ಟಿ ಕಾಡಿನಲ್ಲಿ ಎಲ್ಲಿಯಾದರೂ ಆಗುತ್ತಿತ್ತು. ನಂಬಲಾಗದಷ್ಟು ಮೈತ್ರಿ ಪ್ರೀತಿ ಅವರಲ್ಲಿ ಬೆಳೆದುವು. ಒಬ್ಬ ಹುಡುಗ, ಕೋಮಲ ಸ್ವಭಾವದವನು. ಎಳೆಯ ಮನಸ್ಸು ಆದ್ದರಿಂದ ಪವಿತ್ರ. ಇನ್ನೊಂದು ಮೂಕ ಪ್ರಾಣಿ. ಅದೂ ಸಹಾ ಎಳೆಯ ಪ್ರಾಯದ್ದು. ವನ್ಯಮೃಗವಾದರೂ ಕೃತಜ್ಞತೆಯಿಲ್ಲದಷ್ಟು ಹೀನ ಸ್ವಭಾವದ್ದಲ್ಲ. ಇವರಲ್ಲಿ ಸಾಮಾನ್ಯವಾದದ್ದೇನು, ಸಾಮಾನ್ಯವಲ್ಲದ್ದೇನು? ಪರಸ್ಪರ ಮಾತುಕತೆ ಇಲ್ಲ. ಆದರೆ ಸ್ನೇಹ ಬೆಳೆಯಿತು. ಮನಸ್ಸು ಮನಸ್ಸನ್ನು ಅವುಗಳ ಅರಿವಿಲ್ಲದೇ ಅರಿತವು, ಹೃದಯದಿಂದ ಹೃದಯಕ್ಕೆ ಎರಕವಾಯಿತು. ಗಣಪತಿಯು ಮನೆಯಿಂದ ರೊಟ್ಟಿ ದೋಸೆಗಳನ್ನು ತಂದು ಮಿತ್ರನಿಗೆ ಕೊಡುವನು. ಒಂದೇ ತುತ್ತಿಗೆ ಅವನ್ನು ಅದು ಗಬಕ್ಕನೆ ನುಂಗುವುದು. ಮರದಿಂದ ಹಣ್ಣುಗಳನ್ನು ಕೊಯ್ದು ಕೊಟ್ಟರೆ ಅವನ್ನು ಮೂಸಿ ಹಾಗೆಯೇ ಬಿಟ್ಟುಬಿಡುವುದು. "ತಿನ್ನು ತಿನ್ನು" ಎಂದು ಅದರ ಬಾಯಿ ಬಿಡಿಸಿ ಹಾಕುವನು. ಆದರೆ ಅದು ಉಗುಳುವುದು. "ಓಹೋ ನಿನಗೆ ಇದು ಸೇರುವುದಿಲ್ಲವೋ" ಎಂದು ತಮಾಷೆ ಮಾಡುವನು. ಮತ್ತೆ ಅದರ ಬೆನ್ನ ಮೇಲೆ ಕುಳಿತು "ಹೋಗು ನಾಯಿ, ನನ್ನನ್ನು ಹೊತ್ತುಕೊಂಡು" ಎಂದು ಚಪ್ಪರಿಸುವನು. ಅದು ಅವನನ್ನು ಹೊತ್ತುಕೊಂಡು ಕಾಡಿನಲ್ಲೆಲ್ಲ ಅಲೆಯುವುದು. ಆಗೇನಾದರೂ ಯಾರಾದರೂ ಮಾತಾಡುವ ಶಬ್ದ ಕೇಳಿಸಿದರೆ, ಮತ್ತೇನಾದರೂ ಸಂಶಯ ಬಂದರೆ ನಾಯಿಯು ಫಕ್ಕನೆ ಓಡಿ ಮಾಯವಾಗಿಬಿಡುತ್ತಿತ್ತು. ಈ ಪ್ರಾಣಿಗೆ ಇಷ್ಟೊಂದು ಹೆದರಿಕೆಯೇನು ಎಂದು ಗಣಪತಿಗೆ ಆಶ್ಚರ್ಯವಾಗುತಿತ್ತು.

ಹೀಗೆ ಅನೇಕ ವರ್ಷಗಳು ಸಂದುವು. ಗಣಪತಿಯೂ ಹುಲಿಯೂ ಬೆಳೆದರು. ಈಗ ಅವನಿಗೆ ಚೆನ್ನಾಗಿ ತಿಳಿದಿತ್ತು: ತನ್ನ ಮಿತ್ರ ಹುಲಿ, ಕ್ರೂರ ಪ್ರಾಣಿ ಎಂದು. ಹಿಂದಿನ ಘಟನೆಗಳೆಲ್ಲವೂ ಅವನ ಸ್ಮರಣೆಯಲ್ಲಿದ್ದುದರಿಂದ ಇದು ಹೀಗೆಯೇ ಇರಲಿ ಎಂದುಕೊಂಡಿದ್ದನು. ಅದುವರೆಗೆ, ಕಾಡಿನಲ್ಲಿರುವ ಒಂದು ನಾಯಿ, ಏನು ಮಹಾ ವಿಶೇಷವೆಂದು ಯಾರಿಗೂ ಈ ಮೈತ್ರಿ ವಿಷಯ ತಿಳಿಸದೆ ಇದ್ದ ಅವನು ಈಗ ಅದನ್ನು ಸಹಜವಾಗಿ ಗುಟ್ಟು ಮಾಡಿದನು. ಅಂತಹ ಅದ್ಭುತ ವಿಷಯ, ಇದು ಹೆಮ್ಮೆಯ ಸಂಗತಿ ಆದರೆ ಹೇಳಿಕೊಳ್ಳುವಂಥದ್ದಲ್ಲ. ಹುಲಿಗೆ ಯಾರಾದರೂ ಅಪಾಯವನ್ನುಂಟುಮಾಡಿದರೆ? ದನ ಕಾಯುವ ವೃತ್ತಿಯಿಂದ ಈಗ ಅವನಿಗೆ ಮುಂದಿನ ದೊಡ್ಡ ಹುದ್ದೆಗೆ ವರ್ಗವಾಗಿತ್ತು. ಗದ್ದೆ ತೋಟಗಳ ಕೆಲಸ ಅವನ ಪಾಲಿಗೆ ಬಿದ್ದಿತ್ತು. ತಂದೆಯು ಕೆಲವು ವರ್ಷಗಳ ಹಿಂದೆ ತೀರಿಹೋಗಿದ್ದುದರಿಂದ ಸಂಸಾರ ಭಾರವನ್ನು ಹಿರಿಯ ಮಗನು ಹೊರಬೇಕಾಗಿತ್ತು. ತಾಯಿ, ತಮ್ಮಂದಿರು ಮತ್ತು ತಂಗಿಯಂದಿರನ್ನು ಗಣಪತಿಯು ಸಾಕಬೇಕಾಯಿತು. ಯಾವ ಕೆಲಸವೇ ಇರಲಿ, ಸಂಜೆಯ ವೇಳೆ ಗಣಪತಿಯು ಕಾಡಿಗೆ ಓಡುತ್ತಿದ್ದನು. ಸ್ನೇಹಿತನ ಭೇಟ್ಟಿಗೆ. ಹುಲಿಯೊಡನೆ ಚಕ್ಕಂದವಾಡಿ ಮರಳುತ್ತಿದ್ದನು. ಈ ಹದಿನೈದು ವರ್ಷಗಳಲ್ಲಿ ಅದು ಅವನ ನಿತ್ಯದ ಪರಿಪಾಠವಾಯಿತು. ಗಣಪತಿಯೊಡನೆ ಮಾತ್ರ ಅದು ಹಿಂದಿನ ಮರಿಯೇ. ಒಂದು ದಿವಸ ಎಂದಿನಂತೆ ಗಣಪತಿಯು ಕಾಡಿಗೆ ಹೋಗಿ ನೋಡುತ್ತಾನೆ. ಹುಲಿಯ ಜತೆಯಲ್ಲಿ ಮೂರು ಮರಿಗಳು ಬರುತ್ತಿವೆ. ತಾಯಿ ಹುಲಿಯು ಅವನ್ನು ಪ್ರೀತಿಯಿಂದ ನೆಕ್ಕುತ್ತ ಇವನೆಡೆಗೆ ಕರೆದುಕೊಂಡು ಬಂದಿತು. ಗಣಪತಿಗೆ ಬಹು ಸಂತೋಷ, ಸಂಭ್ರಮ. ತನ್ನ ಸಮೀಪದವರಲ್ಲಿ ಜನನೋತ್ಸವವಾದಷ್ಟು ಆನಂದವಾಯಿತು. ಆ ಪುಟ್ಟು ಮುದ್ದು ಮರಿಗಳನ್ನು ಎತ್ತಿಕೊಂಡು ಮುದ್ದಾಡಿದನು. ಗಣಪತಿಯ ಸ್ನೇಹಿತರ ಬಳಗದಲ್ಲಿ ಆ ಮೂರು ಮರಿಗಳೂ ಸೇರಿದುವು. ದಿನದಿನವೂ ಹೋಗುವಾಗ ತಿಂಡಿಯನ್ನೋ ಕಾಡುಪ್ರಾಣಿಗಳ ಮಾಂಸವನ್ನೋ ತೆಗೆದುಕೊಂಡು ಹೋಗಿ ಆ ಮರಿಗಳಿಗೆ ತಿನ್ನಿಸುವನು. ತಾಯಿ ಹುಲಿಯು ಬಹು ಎಚ್ಚರಿಕೆಯಿಂದ ಸುತ್ತಲೂ ಗಸ್ತು ತಿರುಗುವುದು. ಗಣಪತಿಯು ಹುಲಿಯ ಮರಿಗಳಿಗೆ ಚಿಕ್ಕಪ್ಪನಾದನು. ಈ ಹೊಂದಿಕೆಗಳನ್ನು, ಸಂಬಂಧಗಳನ್ನು ಎಲ್ಲ ಆಲೋಚಿಸಿ, ಚಿಂತಿಸಿ ವಿಸ್ಮಿತನಾಗುವನು. ಕ್ರೂರ ಜಂತುಗಳಲ್ಲಿ ಈ ರೀತಿಯ ಒಂದು ವಿಶ್ವಾಸ ಇರುವುದು ಸಾಧ್ಯವೇ? ಮನುಷ್ಯರಲ್ಲಿಯ ಕೃತಘ್ನತೆಯನ್ನು ನೆನೆದುಕೊಂಡರೆ ಈ ಪ್ರಾಣಿಯು ಎಷ್ಟು ಉದಾತ್ತವಾದುದು ಮರ್ಯಾದೆಯುಳ್ಳದ್ದು ಎಂದು ಅವನಿಗೆ ತೋರುವುದು. ಈ ಹುಲಿ ನಿಜವಾಗಿಯೂ ಘನತೆ ಇರುವ ಪ್ರಾಣಿ.

ಗಣಪತಿಗೆ ತಾರುಣ್ಯ, ಬಲಿಷ್ಟನಾಗಿ ಬೆಳೆದಿದ್ದಾನೆ. ಅವನಿಗೆ ಮದುವೆ ಮಾಡಿಸಬೇಕೆಂದು ತಾಯಿಗೆ ಆಸೆ. ಅಲ್ಲೇ ಮೂರು ಮನೆ ಆ ಕಡೆ ಇರುವ ಬೆಳ್ಯಪ್ಪನ ಮಗಳು ಅಕ್ಕವ್ವನ ಕೈಹಿಡಿಯಬೇಕೆಂದು ಗಣಪತಿಯ ಬಯಕೆ. ಹುಡುಗಿ ಚಟುವಟಿಕೆಯುಳ್ಳವಳು, ಕಷ್ಟವರಿತವಳು, ಲಕ್ಷಣವಂತೆ. ಬಡವರ ಕುಟುಂಬದವಳಾದುದರಿಂದ ಗಣಪತಿಯನ್ನು ವಿವಾಹವಾಗುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಒಂದೇ ಹಳ್ಳಿಯವರು, ಸಮೀಪದವರು. ಒಟ್ಟಿಗೆ ಆಡಿ ಬೆಳೆದುಬಂದವರು. ಹುಡುಗಿಯೂ ಗಣಪತಿಯನ್ನು ಮದುವೆಯಾಗಲು ಬಯಸಿದ್ದಳು. ಅವಳ ತಂದೆತಾಯಿಯರಿಗೆ ಈ ಸಂಬಂಧದಲ್ಲಿ ಇಷ್ಟವಿತ್ತು, ಸಂತೋಷವಿತ್ತು. ಆದರೆ ಮಧ್ಯೆ ಆ ಗ್ರಾಮದ ಪಟೇಲನ ಮಗನು ಚೆಲುವೆ ಅಕ್ಕವ್ವನನ್ನು ನೋಡಿ ತಾನು ಆಕೆಯನ್ನೇ ಮದುವೆಯಾಗುವುದೆಂದು ನಿಶ್ಚೈಸಿದನು. ತಂದೆಗೆ ತನ್ನ ಅಭಿಪ್ರಾಯವನ್ನು ತಿಳಿಸಿದನು. ಮಗನ ಇಷ್ಟ ತಂದೆಗೆ ಪ್ರಿಯ. ಪಟೇಲನು ಸಂಧಾನಮಾಡಲು ಹೋದನು. ಬೆಳ್ಯಪ್ಪನು ಈ ಮೊದಲೇ ಆಗಿರುವ ಮಾತುಕತೆಗಳನ್ನೂ ನಿಶ್ಚಯವನ್ನೂ ವಿವರಿಸಿ ಹೇಳಿದನು. ಪಟೇಲನ ಕುಲದೊಡನೆ ಸಂಬಂಧವೆಸಗುವುದು ತನಗೆ ಇಷ್ಟವೆಂದೂ ಅವನು ಸೂಚಿಸದಿರಲಿಲ್ಲ.

ಪಟೇಲನು ಹೊರಡುತ್ತ ಹೇಳಿದ್ದನು, "ನೋಡಿ ಬೆಳ್ಯಪ್ಪ ಗೌಡರೇ! ಮದುವೆಯ ವಿಷಯದಲ್ಲಿ ಮಾತು, ಭಾಷೆ ಎಂದಿಟ್ಟುಕೊಳ್ಳಬಾರದು. ನಾನಾಗಿಯೇ ಬಂದಿದ್ದೇನೆ – ನನ್ನ ಮಗನಿಗೆ ಹೆಣ್ಣು ಕೇಳಲು, ಇಲ್ಲವೆನ್ನಬೇಡಿ. ಆಲೋಚನೆ ಮಾಡಿ. ಏತನ್ಮಧ್ಯೆ ಈ ನೆಂಟಸ್ತಿಕೆ ಮಾಡದಿರಲು ಸಾಧ್ಯವಾಗುವಂತೆ ನಾನು ಮಗನಿಗೆ ಬುಧ್ಧಿ ಹೇಳುತ್ತೇನೆ, ನೋಡೋಣ."

ಬೆಳ್ಯಪ್ಪನ ಅರ್ಧ ಮನಸ್ಸು ಮುದುರಿತು. ಪಟೇಲನು ಹೋದವನು ಮಗನ ಮನಸ್ಸು ಬದಲುಮಾಡಿದರೆ? ಪುನಃ ಈ ಪ್ರಸ್ತಾಪವನ್ನು ಎತ್ತದಿದ್ದರೆ? ಆಗಲೇ ಮಾತುಕೊಡಬೇಕಾಗಿತ್ತು. ಮರೆಯಾಲಿಸಿ ಕೇಳಿದ ಅಕ್ಕವ್ವನು ಸಿಡುಕಾಡಿದಳು.

“ಪಟೇಲನ ಮಗ, ಆ ಮಂಗನ ಮುಸುಡಿನವನನ್ನು ಮದುವೆಯಾಗುವುದಕ್ಕಿಂತ ಬಾವಿ ಹಾರಿ ಸಾಯುವುದು ಲೇಸು” ಎಂದು ಸ್ಪಷ್ಟವಾಗಿ ಹೇಳಿದಳು.

ತಾಯಿ ತಂದೆ – ಪಟೇಲನ ಹಣಕ್ಕೆ, ದರ್ಪಕ್ಕೆ ಮನಸೋತವರು ಬೋಧಿಸಿದರು. “ಹೆಣ್ಣು ಹೆತ್ತವರು ಎಚ್ಚರಿಕೆಯಿಂದಿರಬೇಕು. ಅದರಲ್ಲಿಯೂ ಹುಡುಗಿಯಂತೂ ಇನ್ನೂ ಜಾಗರೂಕಳಾಗಿರಬೇಕು” ಎಂದರು.

ಪಟೇಲನ ವಂಶದ ಹಿರಿಮೆಗಳನ್ನೂ ಅವನ ಮಗನ ಗುಣಗಳನ್ನೂ ಹೊಗಳಿದರು. ಗಣಪತಿಯ ದಾರಿದ್ರ್ಯವನ್ನು ತೆಗಳಿದರು. ಆದರೆ ಅಕ್ಕವ್ವನು ಕದಲಲಿಲ್ಲ. ಇತ್ತಲಾಗಿ ಪಟೇಲನ ಮಗ ಹಿಡಿದ ಹಠ ಬಿಡಲಿಲ್ಲ. ತನಗೆ ಅಕ್ಕವ್ವನನ್ನು ಮದುವೆಮಾಡದಿದ್ದರೆ ತಾನು ಜೀವದಿಂದಿರುವುದಿಲ್ಲವೆಂದು ಅವನು ರಂಪ ಎಬ್ಬಿಸಿದನು. ಪಟೇಲನು ಮರುದಿವಸ ಬಂದು ವಿಷಯವನ್ನು ವಿವರಿಸಿದನು. ಮದುವೆ ಬೇಗ ಆಗಬೇಕೆಂದು ಒತ್ತಾಯ ಪಡಿಸಿದನು. ಹುಡುಗಿಯ ಅಭ್ಯಂತರವನ್ನು ಬೆಳ್ಳಪ್ಪನು ಹೆದರಿ ಹೆದರಿ ಹೇಳಿದನು. ಪಟೇಲನು ತಾತ್ಸಾರದಿಂದ “ಅದೆಲ್ಲ ಹುಡುಗಿಯರು ಮದುವೆಯ ಮೊದಲು ಹೂಡುವ ಆಟ. ಮದುವೆಯಾಗಲಿ, ಮತ್ತೆ ಎಲ್ಲ ಸರಿಯಾಗುವುದು” ಎಂದು ಮಾತು ಹಾರಿಸಿದನು. ಲಗ್ನ ಬೇಗನೆ ಇಡಬೇಕೆಂದು ಊರ ಪ್ರಮುಖ, ಧನಿಕ ಪಟೇಲನು ಹೇಳಿ ಹೊರಟು ಹೋದನು. ಹುಡುಗಿಯ ಕತ್ತು ಕೊಯ್ಯಲು ತಂದೆ ತಾಯಿಯರು ಸಿದ್ಧರಾದರು.

ಗಣಪತಿಗೆ ಸಂಗತಿ ಅರಿಯಲು ತಡವಾಗಲಿಲ್ಲ. ಪಟೇಲನು ಅಲ್ಲಿಗೆ ಹೋದಾಗಲೇ ಅವನಿಗೆ ಸಂಶಯ ಬಂದಿತ್ತು. ಮತ್ತೆ ಎಲ್ಲವೂ ಸ್ಪಷ್ಟವಾಯಿತು. ಪಟೇಲನು ಹಳ್ಳಿಯಲ್ಲಿ ಪ್ರಬಲನು, ಹಣವಿರುವವನು. ಅವನ ಮಗನ ವಿರುದ್ಧ ಸೆಣಸಾಟ ಹೇಗೆ? ದೃಷ್ಟಿ ಬುದ್ಧಿ ಮಂಕಾದುವು. ಮುಂದೇನು ಮಾಡುವುದೆಂದು ತಿಳಿಯಲಿಲ್ಲ. ತಾಯಿ ಹೇಳಿದಳು “ಬಡವರ ಭಾಗ್ಯ ಇಷ್ಟೆ. ಇನ್ನೇನು ಮಾಡುವುದು?”

ಗಣಪತಿಯು ಉದ್ವಿಗ್ನತೆಯಿಂದ ಕಾಡಿಗೆ ಹೋದನು, ಹುಚ್ಚನಂತೆ ಅಲೆದನು. ಮುಂಗಾಣದೆ ಕಾಲುಗಳು ಒಯ್ದಲ್ಲಿಗೆ ಹೋದನು. ಅಷ್ಟರಲ್ಲಿ ಹುಲಿಯ ಬಳಗ ಎದುರುಬಂದಿತು. ತಾಯಿ ಹುಲಿಯು ಗಣಪತಿಯ ಕಾಲನ್ನು ನೆಕ್ಕಿತು, ಮರಿಗಳು ಸುತ್ತಲೂ ಹಾರಿ ಹಾರಿ ಕುಣಿದವು. ಆದರೆ ಗಣಪತಿಯು ಒಂದು ಕಲ್ಲಿನ ಮೇಲೆ ತಲೆಗೆ ಕೈಕೊಟ್ಟು ಕುಳಿತನು. ತಾಯಿ ಹುಲಿಯ ಮೊಲೆ ಹಾಲನ್ನು ಕುಡಿಯಲು ಮರಿಗಳು ನುಗ್ಗಿದುವು. ಒಂದು ಮರಿಯು ಹಿಂದೆ ಉಳಿಯಿತು. ಅದು ಮತ್ತೊಂದನ್ನು ಕಚ್ಚಿ ಎಳೆದು ಅದರ ಸ್ಥಾನವನ್ನು ಆಕ್ರಮಿಸಿತು. ಆ ಮರಿಯು ಇನ್ನೊಂದು ಕಡೆಯಿಂದ ನುಗ್ಗಿತು. ತಾಯಿ ಹುಲಿಯು ಮರಿಗಳ ಗುದ್ದಾಟದಲ್ಲಿ ಅತ್ತಿತ್ತ ಸುತ್ತುತ್ತಿತ್ತು. ಈ ದೃಶ್ಯವನ್ನು ನೋಡಿದ ಗಣಪತಿಗೆ ಫಕ್ಕನೆ ಒಂದು ಭಾವನೆಯು ಸ್ಫುರಿಸಿತು. ಆ ಮಹಾ ಕಾಳರಾತ್ರಿಯ ನಡುವೆ ಒಂದು ಆಶಾಕಿರಣ ಮೂಡಿದ ಹಾಗಾಯಿತು. ಉತ್ಸಾಹದಿಂದ ಎದ್ದನು.

ಹುಲಿಯ ಮೈ ಸವರಿದನು. ಅದು ಬಾಯಿಯನ್ನು ನವೆಯಿತು, ಬಾಲವನ್ನು ಅಲ್ಲಾಡಿಸಿತು. ಕೂಡಲೇ ಗಣಪತಿಯು ಮನೆಗೆ ಓಡಿದನು. ಇಲ್ಲ, ಗಾಳಿಯಲ್ಲಿ ತೇಲಿದನು. ತಾಯಿಯನ್ನು ಕರೆದು ಒಂದು ಮಾತು ಹೇಳಿದನು. ಇದನ್ನು ಕೇಳಿ ಅವಳು ಹೆದರಿದಳು, ಹಿಂಜರಿದಳು.

“ಅದು ಸಾಧ್ಯವೇ?”

“ಅಮ್ಮಾ, ನನ್ನ ವಿಷಯದಲ್ಲಿ ನೀನು ಸಂದೇಹಪಡಬೇಡ. ನೀನು ಈ ಕ್ಷಣವೇ ಧೈರ್ಯದಿಂದ ಹೋಗಿ ಹೇಳು, ಆಗುವುದು.”

ಮಗನ ಮೇಲಿನ ಮೋಹದಿಂದ ಮುದಿ ತಾಯಿಯು ಬೆಳ್ಳಪ್ಪನ ಮನೆಗೆ ಹೋದಳು. ಲೋಕವ್ಯವಹಾರ ಮಾತಾಡುತ್ತ ಸಂದರ್ಭವೊದಗಿಸಿಕೊಂಡು ಅಕ್ಕವ್ವನಲ್ಲಿ ಗಣಪತಿಯು ಸೂಚಿಸಿದ ವಿಷಯವನ್ನು ಹೇಳಿದಳು. ಅನಂತರ ಹಿಂದಿರುಗಿದಳು. ಗಣಪತಿಯು ಆತುರದಿಂದ ತಾಯಿಯ ಬರವನ್ನು ಕಾದಿದ್ದನು. ಅವಳು ಹೋದ ಕಾರ್ಯದ ಫಲಿತಾಂಶವನ್ನು ತಿಳಿಯಲು ಬಯಸುತ್ತಿದ್ದನು. ಅಕ್ಕವ್ವನ ಸ್ಥಿತಿಯನ್ನು ಕೇಳಬೇಕೆಂದು ಅವನಿಗೆ ಆಸೆ. ಆದರೆ ಬಾಯಿಬಿಡಲು ನಾಚಿಕೆ. ತಾನು ಜಯಶೀಲನಾಗುವುದು ನಿಶ್ಚಯವೆಂದು ಅವನ ನಂಬಿಕೆ. ತಾಯಿ ತಾನು ಹೇಳಿದ ಕೆಲಸವನ್ನು ಮುಗಿಸಿಬಂದಳು. ಅವಳು ಹೇಳಿದುದಷ್ಟನ್ನು ಕಿವಿಯರಳಿಸಿ ಕೇಳಿ, ಅದನ್ನೇ ಉಬ್ಬಿಸಿ ಉಬ್ಬಿಸಿ ಸಂತೋಷಪಟ್ಟನು. ಭವಿಷ್ಯವನ್ನು ನೆನೆದು ನೆನೆದು ಹಿಗ್ಗಿದನು.

ಬೆಳ್ಳಪ್ಪನ ಮನೆಯಲ್ಲಿ ಏನೆಲ್ಲ ನಡೆಯಿತೋ! ಮರುದಿನ ಬೆಳಿಗ್ಗೆಯೇ ಅವನು ಪಟೇಲನ ಮನೆಗೆ ಓಡಿದನು. ವೀಳ್ಯವನ್ನು ಜಗಿಯುತ್ತ ಪಟೇಲರು ಜಗಲಿಯಲ್ಲಿ ಮಂಡಿಸಿದ್ದನು. ಪರಸ್ಪರ ನಮಸ್ಕಾರಗಳಾದನಂತರ “ಏನು ಇಷ್ಟು ಬೇಗ ಬಂದಿರಿ?” ಎಂದು ಪಟೇಲನು ಪ್ರಶ್ನಿಸಿದನು.

“ಅಲ್ಲ ನೋಡಿ, ನಾವು ನಿನ್ನೆ ಮಾತಾಡಿದ್ದು, ನನ್ನ ಮಗಳು ಹೇಳುತ್ತಾಳೆ ಅವಳದ್ದೊಂದು ಹರಕೆ ಉಂಟಂತೆ.”

ಕಾರ್ಯಪ್ಪನು ಹೊರಗೆ ಬಂದನು “ಏನದು? ನಾವದನ್ನು ನಡೆಸುತ್ತೇವೆ.”

“ನಿಮಗೆಲ್ಲ ಅದೊಂದು ಕಷ್ಟದ ಸಂಗತಿಯೇ ಅಲ್ಲ. ಆದರೂ. . . .”

“ಅದು ಏನಾದರೂ ಆಗಲಿ, ಹೇಳಿ” ಎಂದು ಕಾರ್ಯಪ್ಪನು ಹೇಳಿದನು.

“ಅದು ಅವಳು ನಮ್ಮ ಗ್ರಾಮದ ಚೌಂಡಿ ಭೂತಕ್ಕೆ ಒಂದು ಹರಕೆ ಹೇಳಿಕೊಂಡಿದ್ದಾಳಂತೆ. ಹುಲಿಯ ಹಾಲು ಒಂದು ಪಾವು ಎರೆಯುತ್ತೇನೆ. ಮತ್ತೆ ಮದುವೆಯಾಗುತ್ತೇನೆ ಎಂದು. . .”

“ಓಹೋ ಇಷ್ಟೇ ತಾನೇ!”

“ಹೌದು! ಅವಳಿಗೆ ಹುಲಿಯ ಹಾಲನ್ನು ತಂದುಕೊಟ್ಟರೆ ಅವನನ್ನು ಮದುವೆಯಾಗುತ್ತಾಳಂತೆ. ನಿನ್ನೆ ಹೇಳಲಿಕ್ಕೆ ಮರೆತುಹೋಯ್ತು. ಅದಕ್ಕೆ ಈಗ ಓಡಿ ಬಂದೆ.”

“ಹುಲಿಯ ಹಾಲಲ್ಲ, ಸಿಂಹದ ಹಾಲು ಬೇಕಾದರೂ ನಾನು ತಂದು ಕೊಡುತ್ತೇನೆ” ಎಂದು ಅಬ್ಬರಿಸಿದನು ಮದುವೆಯ ಗಂಡು ಕಾರ್ಯಪ್ಪ.

ಪಟೇಲನು ಮಗನ ಸಾಹಸೋಕ್ತಿಯನ್ನು ಮೆಚ್ಚಿದನಾದರೂ ಮನಸ್ಸಿನಲ್ಲಿ ಅಳುಕದಿರಲಿಲ್ಲ.

“ಈ ಗಣಪತಿ ಇದ್ದಾನಲ್ಲ. ಅವನು ತಾನೂ ತಂದುಕೊಡುತ್ತೇನೆಂದು ಹೊರಟಿದ್ದಾನಂತೆ. ಆದ್ದರಿಂದ ನೀವು ಬೇಗನೆ ತಂದುಕೊಡಬೇಕು.”

“ಈಗಲೇ ಹೊರಟೆ”

“ಅದು ಸರಿ! ನಿಮಗೆಲ್ಲಾ ಇದೊಂದು ಕಷ್ಟವೇ!”

ಕಾರ್ಯಪ್ಪನು ಕಾಡಿಗೆ ಹೊರಟನು. ಬೆಳ್ಯಪ್ಪನು ಸಂತೋಷದಿಂದ ಮನೆಗೆ ಹಿಂತಿರುಗಿದನು. ಉತ್ಸಾಹದ ಬಿಸಿ ಕಾಡಿನ ತಂಪಿನಲ್ಲಿ ಆರಿದಾಗ ಕಾರ್ಯಪ್ಪನಿಗೆ ತಾನು ಒಪ್ಪಿದ ಕಾರ್ಯದ ಗುರುತ್ವ ಅರಿವಾಯಿತು. ಹುಲಿಯ ಹಾಲು, ಹುಲಿಯ ಹಾಲು! ಜೀವವಿರುವಾಗಲೇ ಮರಿಯಿರುವ ಹುಲಿಯನ್ನು ಕರೆಯಬೇಕು. ಆಲೋಚಿಸಲೂ ಹೆದರಿಕೆಯಾಗುವುದು. ಹುಲಿಯನ್ನು ಕೊಂದು ಹಾಲು ಕರೆಯುವುದು ಸಾಧ್ಯವಿಲ್ಲ. ಹುಡುಗಿ ಮಹಾ ಮೂರ್ಖೆಯಾಗಿರಬೇಕು. ಇಲ್ಲವೆ ತನ್ನನ್ನು ವಂಚಿಸಲು ಅವಮಾನ ಪಡಿಸಲು ಇವರೆಲ್ಲರೂ ಸೇರಿ ಒಳಸಂಚು ಹೂಡಿದ್ದಾಗಿರಬೇಕು. ಹುಲಿಯನ್ನು ಕರೆಯುವುದಂದರೇನು, ಹಸುವನ್ನು ಕರೆದಂತೆಯೇ? ಗಣಪತಿಯನ್ನು ನೆನೆದು ಹಲ್ಲು ಕಡಿದನು. ಆ ಶತದಡ್ಡ ಹೇಗೆ ಕರೆಯುತ್ತಾನೋ ನೋಡೋಣವೆಂದುಕೊಳ್ಳುತ್ತಾ ಔಡು ಕಚ್ಚುತ್ತಾ ಹಿಂತಿರುಗಿದನು.

ತಂದೆ ಕೆಣಕಿದನು, “ಹೋಗುವಾಗಲೇ ಬರಿಕೈಯಿಂದ ಹಿಂತಿರುಗುವೆ ಎಂದು ನಾನು ಅರಿತಿದ್ದೆ.”

“ಇದೆಲ್ಲ ನಿಮ್ಮದು ಒಳಸಂಚು. ನನ್ನನ್ನು ಹೀಗೇಕೆ. . . .”

“ನೋಡು ಕಾರ್ಯಪ್ಪಾ! ನಿನ್ನನ್ನು ಮೋಸಹೂಡಲು ಹೂಡಿದ ಆಟವಾಗಿರಬೇಕು. ಇದರಲ್ಲಿ ಏನೋ ಕೃತ್ರಿಮವಿರಬೇಕು. ನಾವು ಏನಾದರೂ ಕಪಟ ಮಾರ್ಗದಿಂದ ಇದನ್ನು ಉತ್ತರಿಸಬೇಕು.”

“ಹಾಗೆಂದರೆ?”

“ನಾನು ಯೋಚಿಸಿದ್ದೇನೆ. ನೋಡು! ಹುಲಿಯ ಹಾಲನ್ನು ನೋಡಿದವರು, ಕರೆದವರಂತೂ ಇರಲಿ ಯಾರೂ ಇಲ್ಲ. ಹಸುವಿನ ಹಾಲಿಗೆ ಸ್ವಲ್ಪ ನೀರು ಹಾಕಿ, ವಾಸನೆ ಬದಲಾಗಲು ಬೇರೇನಾದರೂ ಬೆರೆಸಿ ಇದೇ ಹುಲಿಯ ಹಾಲೆಂದು ಕೊಡುವುದು. ಅದನ್ನು ಅಲ್ಲವೆಂದು ಹೇಳಲು ಯಾರಿಗೆ ಹೇಗೆ ಸಾಧ್ಯ?”

“ಆ ಗಣಪತಿಯೂ ಇದೇ ರೀತಿ ಮಾಡಿದರೆ?”

“ಆ ದರಿದ್ರನ ಮಾತನ್ನು ಯಾರು ನಂಬುತ್ತಾರೆ? ನಿನಗೇನೋ ಹುಚ್ಚು. ನಾಳೆ ಬೆಳಗ್ಗೆಯೇ ನಾವು ಹುಲಿಯ ಹಾಲನ್ನು ಕೊಡೋಣ!”

ಮಗನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತಂದೆಗೂ ತೃಪ್ತಿಯಾಯಿತು. ಮರುದಿವಸ ಬೆಳಗ್ಗೆಯೇ ಕಾರ್ಯಪ್ಪನು ಒಬ್ಬ ಆಳಿನ ತಲೆಯಲ್ಲಿ ಒಂದು ತಂಬಿಗೆ ಹುಲಿಯ ಹಾಲನ್ನು ಹೊರಿಸಿಕೊಂಡು ಬೆಳ್ಯಪ್ಪನಲ್ಲಿಗೆ ಹೊರಟನು. ಹುಲಿಯ ಹಾಲನ್ನು ಕರೆದ ಸಂಗತಿಯನ್ನು ಅರಿತ ಪ್ರತಿಯೊಬ್ಬನೂ ಕಾರ್ಯಪ್ಪನನ್ನು ಹೊಗಳುವವನೇ. ಅವರೆಲ್ಲರೂ ಇವನ ಸಾಹಸವನ್ನು ಮೆಚ್ಚುತ್ತ ಹಿಂದೆ ನಡೆದರು. ಪಟೇಲನ ಮಗ, ತರುಣ, ಹುಲಿಯ ಹಾಲನ್ನು ಕರೆದುತಂದವನು, ನಿಜವಾಗಿಯೂ ಲೋಕೈಕವೀರ ಎಂದು ಪ್ರಶಂಸಿಸಿದರು. ಈ ಮೆರವಣಿಗೆಯ ಸಹಿತವಾಗಿ ಕಾರ್ಯಪ್ಪನು ಹುಡುಗಿಯ ಮನೆ ತಲುಪಿ, ಬೆಳ್ಯಪ್ಪನಿಗೆ ನಮಸ್ಕರಿಸಿ, ಠೀವಿಯಿಂದ ಆ ಹಾಲನ್ನು ಅವನಿಗೆ ಒಪ್ಪಿಸಿದರು. ಎಲ್ಲರೂ ಪಡಸಾಲೆಯಲ್ಲಿ ಕುಳಿತರು. ಬೆಳ್ಯಪ್ಪನಿಗೆ ತುಂಬ ಸಂತೋಷ. ಕಾರ್ಯಪ್ಪನನ್ನು ಬಹುವಾಗಿ ಅಭಿನಂದಿಸಿದನು. ಅಷ್ಟರಲ್ಲಿಯೇ ರಾಗದಲ್ಲಿ ಅಪಸ್ವರ ಮಿಡಿದಂತೆ, ಗಣಪತಿಯೂ ಅಲ್ಲಿಗೆ ಬಂದನು. ಅವನೂ ಒಂದು ಚೆಂಬಿನಲ್ಲಿ ಹಾಲನ್ನು ತಂದಿದ್ದನು. ಕಾರ್ಯಪ್ಪನ ಕಣ್ಣಿನಿದ ಮಿಂಚು ಚಿಮ್ಮಿತು. ಗಣಪತಿಯು ಅವನನ್ನು ನೋಡಿ ತಿರಸ್ಕಾರದ ನಗು ಬೀರಿದನು.

“ಇಕೊಳ್ಳಿ ಹುಲಿಯ ಹಾಲು” ಎಂದು ಬೆಳ್ಯಪ್ಪನಿಗೆ ಗಣಪತಿಯು ಆ ತಂಬಿಗೆಯನ್ನು ವಿನಯಪೂರ್ವಕವಾಗಿ ಕೊಟ್ಟನು.

“ನಾನು ಮೊದಲು ಹುಲಿಯ ಹಾಲು ತಂದದ್ದು. ನಿನ್ನದು ಹುಲಿಯ ಹಾಲೇ ಅಲ್ಲ” ಕಾರ್ಯಪ್ಪನ ರೋಷದ ಮಾತು.

ಉಳಿದವರು “ಹೌದು, ಹೌದು!”

ಗಣಪತಿ “ನಿನ್ನದು ಹುಲಿಯ ಹಾಲೆನ್ನಲು ಏನು ಆಧಾರ?”

“ನನ್ನ ಮಾತು. ನನ್ನ ತಂದೆ ಗ್ರಾಮದ ಪಟೇಲರ ಮಾತು. ನಿನ್ನಂತಹ ಅಲ್ಪನನ್ನು ನಂಬಿಸಿ ಆಗಬೇಕಾದದ್ದೇನು? ಅಬ್ಬಬ್ಬ! ಎಂತಹ ಕಷ್ಟಗಳನ್ನು ಎದುರಿಸಿ ನಾನಿದನ್ನು ತಂದಿದ್ದೇನೆ!”

"ಕಾರ್ಯಪ್ಪಾ! ಸುಮ್ಮನೆ ಹಾರಿಬೀಳಬೇಡ. ನೀನು ಹಾಗೆಲ್ಲ ಅಬ್ಬರಿಸಿದರೆ ಹುಲಿಯ ಹಾಲು ತಂದಂತಾಗಲಿಲ್ಲ. ಇದು ಚೌಂಡಿಗೆ ಎರೆಯಲು ಇರುವ ಹಾಲು, ಗೊತ್ತಾಯಿತೆ?"

"ಅದರಿಂದ ಏನಾಗಬೇಕು?"

"ನೀನು ದೇವಿಯ ಮುಂದೆ 'ಇದು ಹುಲಿಯ ಹಾಲು. ನಾನೇ ಕರೆದು ತಂದದ್ದು' ಎಂದು ಹೇಳಿ ಇಟ್ಟುಬಿಡು. ಮತ್ತೆ ನೀನು. . ."

"ಅದೇನು ಮಹಾ ಇದ್ದುದನ್ನು ಹೇಳಲು!" ಎಂದು ಸೇರಿದವರೆಲ್ಲರೂ ಕೂಗಿದರು, ಹುರಿದುಂಬಿಸಿದರು.

"ಮತ್ತೆ ನೀನು ಅಕ್ಕವ್ವನ ಕೈಹಿಡಿಯಲು ಯೋಗ್ಯನಾಗುವೆ. ನಾನು ಅಡ್ಡಿಮಾಡುವುದಿಲ್ಲ."

ಚೌಂಡಿಯ ಹೆಸರಿನಿಂದ ಎದೆಯು ಡವಡವನೆ ಹೊಡೆದರೂ ಆ ಒಂದು ಗಳಿಗೆಯ ಉತ್ಸಾಹದಲ್ಲಿ ಕಾರ್ಯಪ್ಪನು "ಆಗಲಿ" ಎಂದು ಬಿಟ್ಟನು. ಎಲ್ಲರೂ ಆಗಲೇ ಚೌಂಡಿಯ ಗುಡಿಯ ಕಡೆಗೆ ಹೊರಟರು. ಕಾರ್ಯಪ್ಪನ ಕಾಲುಗಳು ಮುಂದೆ ಹೋಗಲೊಲ್ಲವು. ಕರುಳು ಗಂಟು ಹಾಕಿದ ಹಾಗಾಯಿತು. ಮುಖ ಕಳೆಗೆಟ್ಟಿತು. ತುಟಿಗಳು ಅದುರಿದುವು. ಬಾಯಿಯಲ್ಲಿ ನೀರು ಆರಿತು. ಆದರೂ ಬೇರೆಯವರ ಜತೆಯಲ್ಲಿ, ಹೊಗಳುಭಟರ ನಡುವಿನಲ್ಲಿ ಹೇಗೋ ನಡೆದನು. ಗುಡಿಯ ಮುಂದೆ ಹೋಗುವಾಗ ವಿಶ್ವಪ್ರಯತ್ನದಿಂದ ಪುನಃ ಧೈರ್ಯ ತಳೆದನು. "ಇದು ಹುಲಿಯ ಹಾಲು, ನಾನೇ ನಾನೇ ಖಂಡಿತವಾಗಿಯೂ ನಾನೇ ಕರೆದ ಹುಲಿಯ ಹಾಲು ಇದು" ಎಂದು ಅನೇಕ ಸಲ ಅನೇಕ ವಿಧವಾಗಿ ಹೇಳಿಕೊಂಡನು. ಅದು ನಿಜವೆಂದೇ ನಂಬಿದನು. ಗುಡಿಯ ಮುಂದೆ ಎಲ್ಲರೂ ನಿಂತರು. ಒಳಗೆ ಕಲ್ಲಿನ ಕಾಳಿಯ ವಿಗ್ರಹ ಭಕ್ತಿ, ಭಯ ಪ್ರೇರಕವಾಗಿ ನಿಂತಿದೆ.

"ಸರಿ ಗೌಡರೇ! ನಿಮ್ಮ ಸಾಹಸವನ್ನು ದೇವಿಯ ಮುಂದೆ ಆಡಿ ತೋರಿಸಿಬಿಡಿ"

ಎಂದು ಭಟನೊಬ್ಬ ಸೂಚಿಸಿದನು.

ಕಾರ್ಯಪ್ಪನು ತಂಬಿಗೆ ಹಿಡಿದು ಎತ್ತಿದನೋ ಇಲ್ಲವೋ! ಎಲ್ಲ ಕಡೆಗಳಿಂದಲೂ ವಿಕಾರ ಕರಾಳ ಭೈರವ ಮೂರ್ತಿ ಕಾಳಿಯು ಅವನನ್ನು ನುಂಗಲು ಕೋರೆದಾಡೆಗಳನ್ನು ಚಾಚಿ, ಬಾಯನ್ನು ಕಳೆದು ಬಂದಳು. ತಂಬಿಗೆಯ ಒಳಗಿನಿಂದ ಅವಳು ಅವನನ್ನು ದಹಿಸುವಂತೆ ನೋಡಿದಳು. ವಿಗ್ರಹವು ತಕಪಕನೆ ಕುಣಿಕುಣಿದು ಅವನ ತಲೆಯ ಮೇಲಕ್ಕೆ ನೆಗೆಯಿತು. ಕಾರ್ಯಪ್ಪನಿಗೆ ಕಣ್ಣು ಕತ್ತಲೆ ಹೋಯಿತು.

"ಅಯ್ಯೋ ಇದು ಹುಲಿಯ ಹಾಲಲ್ಲ. ಹುಲಿಯ ಹಾಲು ಅಲ್ಲವೇ ಅಲ್ಲ. ನಾನು ಮೋಸಮಾಡಿದೆ. ಕಾಳೀದೇವೀ ನನ್ನನ್ನು ರಕ್ಷಿಸು ರಕ್ಷಿಸು" ಎಂದು ಘೋರವಾಗಿ ಅರಚುತ್ತ ಮೂರ್ಛಾಕ್ರಾಂತನಾಗಿ ಅಲ್ಲಿ ದೊಪ್ಪನೆ ಬಿದ್ದುಬಿಟ್ಟನು. ಹಾಲು ಚೆಲ್ಲಿಹೋಯಿತು. ಜನರು ಸ್ತಬ್ಧರಾದರು. ಏನು ಮಾಡುವುದೆಂದು ಯಾರಿಗೂ ತಿಳಿಯಲಿಲ್ಲ. ಚೌಂಡಿಯು ಬಹಳ ಪ್ರತಾಪಶಾಲಿಯಾದ ದೈವವೆಂದು ಜನರಿಗೆ ನಂಬಿಕೆಯಿತ್ತು. ಆದ್ದರಿಂದ ಕಾರ್ಯಪ್ಪನು ಮಾಡಿದುದು ಮೋಸ, ಹೇಳಿದುದು ಸುಳ್ಳು ಎಂದು ಅವರಿಗೆ ನಿಶ್ಚಯವಾಯಿತು. ಅವನ ಮುಖಕ್ಕೆ ತಣ್ಣೀರೆರಚಿದರು, ಗಾಳಿಬೀಸಿದರು. ಗುಜುಗುಜು ಎಂದು ಮಾತಾಡಿದರು.

"ಇನ್ನು ಗಣಪತಿಗೆ ಮಾತ್ರ ಇದು ಸಾಧ್ಯವಾವುಗುವುದೇ? ನೀನು ಪ್ರಮಾಣ ಮಾಡಬೇಕಲ್ಲ" ಎಂದು ಗಣಪತಿಯನ್ನು ಮುಂದೆ ನೂಕಿದರು.

ಅವನು ಗಂಭೀರವಾಗಿ ಮುಂದೆ ನಡೆದು ಭಕ್ತಿಯಿಂದ ದೇವಿಗೆ ನಮಸ್ಕರಿಸಿ "ತಾಯೀ ಚೌಂಡಿದೇವಿ, ಇದು ನಾನೇ ನಿನ್ನೆ ಸಾಯಂಕಾಲ ಕರೆದು ತಂದ ಹುಲಿಯ ಹಾಲು. ಇದನ್ನು ಸ್ವೀಕರಿಸು" ಎಂದು ನುಡಿದು ಆ ಚಂಬನ್ನು ದೇವಿಯ ಮುಂದೆ ಇರಿಸಿ ಮರಳಿದನು.

ದೇವಿಯು ತೃಪ್ತಳಾದಳೋ ಎಂಬಂತೆ ದೀಪವು ಒಮ್ಮೆ ದೊಡ್ಡದಾಗಿ ಉರಿಯಿತು. ಗಾಳಿಯು ಮೃದುವಾಗಿ ತೀಡಿತು. "ಶೂರ ಶೂರ! ಎಂತಹ ಧೈರ್ಯಶಾಲಿ!" ಎಂದು ಜನರು ಅವನಿಗೆ ಮರ್ಯಾದೆಮಾಡಿದರು. ಅವನನ್ನು ಬಹಳವಾಗಿ ಶ್ಲಾಘಿಸಿದರು. ಮೇಲಕ್ಕೆತ್ತಿ ಗುಡಿಯ ಮುಂದೆ ಮೆರವಣಿಗೆ ಮಾಡಿದರು. ಗಣಪತಿಯದೂ ಏಕೆ ಮೋಸವಾಗಿರಬಾರದು ಎಂದು ಒಬ್ಬಿಬ್ಬರಿಗೆ ಸಂದೇಹ ಬಂದರೂ ದೇವಿಯ ಪ್ರತಾಪವನ್ನು ಅವರು ಹಿಂದೆಷ್ಟೋ ಸಲ ಸ್ವತಃ ಕಂಡಿದ್ದುದರಿಂದ ಆ ಶಂಕೆ ನಿರ್ಮೂಲವಾಯಿತು. ಸಕಲರೂ ಗಣಪತಿಯನ್ನು ಮೆಚ್ಚಿದರು.

ಗಣಪತಿಗೂ ಅಕ್ಕವ್ವನಿಗೂ ಮದುವೆ ನಡೆಯಿತು. ಅವನ ಮನೆಯಲ್ಲಿ ಜನ ಹೆಚ್ಚಾದರು. ಹೀಗಾಗಿ ಜೀವನ ನಡೆಸುವುದು ಕಷ್ಟವಾಯಿತು. ಆದ್ದರಿಂದ ಗಣಪತಿಯು ಮಡಿಕೇರಿಯನ್ನು ಸೇರಿ ರಾಜನ ಸೈನ್ಯದಲ್ಲಿ ಸಿಪಾಯಿಯಾಗಿ ಕೆಲಸ ಸಂಪಾದಿಸಿದನು. ಅವನ ತಮ್ಮಂದಿರೆಲ್ಲರೂ ದೊಡ್ಡವರಾಗಿದ್ದುದರಿಂದ ಗದ್ದೆ ಕೆಲಸದ ಗೊಡವೆ ಅವನಿಗಿರಲಿಲ್ಲ. ಅಲ್ಲದೆ ಮಡಿಕೇರಿಯು ಕೇವಲ ಐದು ಮೈಲುಗಳ ದೂರದಲ್ಲಿದ್ದುದರಿಂದ ವಾರಕ್ಕೊಂದಾವರ್ತಿ ಮನೆಗೆ ಹೋಗಿ ಹಿಂತಿರುಗಬಹುದಿತ್ತು. ಇದರಿಂದ ಅವನಿಗೆ ಒಂದು ತೊಂದರೆಯಾಯಿತು: ಅನೇಕ ವರ್ಷಗಳಿಂದ ಅನುದಿನವೂ ನಡೆದುಬಂದ ಹುಲಿಯ ಸಾಹಚರ್ಯ ಅಪರೂಪವಾಯಿತು. ಕಾರಣಾಂತರಗಳಿಂದ ವ್ಯಕ್ತಿ ಇನ್ನೂ ಹೆಚ್ಚಿನ ನಿಕಟ ಸಂಬಂಧಗಳನ್ನು ತೊರೆದು ಹೋಗಬೇಕಾಗುವುದು. ಪ್ರಾರಂಭದಲ್ಲಿ ಗಣಪತಿಗೆ ಬಹಳ ದುಃಖವಾಯಿತು. ಮತ್ತೆ ಸಮಾಧಾನ ಪಡೆದನು  ವಾರಕ್ಕೊಂದು ಸಲ ಹಿಂತಿರುಗುವಾಗ ಹುಲಿಯನ್ನೂ ಅದರ ಮರಿಗಳನ್ನೂ ಮುದ್ದಾಡಿ ಬರಬಹುದಲ್ಲ ಎಂದು. ಇದು ಹೀಗೆಯೇ ನಡೆಯಿತು. ಮುಸ್ಸಂಜೆಯ ಹೊತ್ತಿನಲ್ಲಿ ಅವನು ಆ ದಾರಿಯಲ್ಲಿ ಬರುವನು. ಆಗ ಹುಲಿಯು ಅದರ ಮರಿಗಳೂ ಎದುರಾಗುವುವು. ಅವನು ಅವನ್ನು ಎತ್ತಿ ಪ್ರೀತಿಯಿಂದ ಮೈದಡಹುವನು. ಮಾಂಸದ ತುಣುಕುಗಳನ್ನು ತಿನ್ನಲು ಕೊಡುವನು. ಮರುದಿನ ಪುನಃ ಬಂದು ಅವುಗಳೊಡನೆ ಆಟವಾಡುವನು. ಅದರ ಮಾರಣೆ ದಿವಸ ನಸುಕಿನಲ್ಲಿ ಮಡಿಕೇರಿಗೆ ಮರಳುವಾಗ ಇನ್ನೊಮ್ಮೆ

ಚಕ್ಕಂದವಾಡಿ ಸಾಗುವನು. ಈ ರೀತಿಯಲ್ಲಿ ಅನೇಕ ವಾರ ನಡೆಯಿತು. ತಾಯಿ ಹುಲಿಗೂ ಅದರ ಮರಿಗಳಿಗೂ ಇದು ಅಭ್ಯಾಸವಾಗಿ ಹೋಯಿತು. ಪ್ರತಿ ವಾರವೂ ಒಂದು ಅವ್ಯಕ್ತ ಶಕ್ತಿಯಿಂದ ಪ್ರೇರಿತವಾಗಿ ಹುಲಿಯು ಗಣಪತಿಯನ್ನು ಸ್ವಾಗತಿಸಲು ಕಾದು ಕುಳಿತಿರುವುದು. ಅವನು ಬಂದಾಗ ಪೊದರಿನೆಡೆಯಿಂದ ನೆಗೆಯುವುದು. ಆಗ ಮನೆಯು ಬಂದಿತು, ತನ್ನವರು ಬಂದರು ಎನ್ನುವ ಸಂತೋಷ ಗಣಪತಿಯಲ್ಲಿ ಮಿಂಚುತ್ತಿತ್ತು. ಪರಿಚಿತ ಆವರಣ, ಪರಿಚಿತ ಜೀವಿಗಳು ಇವು ಅಲ್ಲದೆ ಮನೆಯೆಂದರೆ ಬೇರೆ ಏನು?

ಕಾರ್ಯಪ್ಪನಿಗೆ ಅವಮಾನ ವಿಪರೀತವಾಯಿತು, ಅಸಹನೀಯವಾಯಿತು. ಗಣಪತಿಯು ಮೊದಲೇ ಸಿದ್ಧಮಾಡಿ ಧೈರ್ಯದಿಂದ ದೇವಿಯ ಮುಂದೆ ಸುಳ್ಳು ಹೇಳಿದನು ಎಂದು ಊಹಿಸಿದನು. ಹುಲಿಯ ಹಾಲನ್ನು ಅವನು ಕರೆದಿರುವುದು ಸಾಧ್ಯವಲ್ಲದ ಮಾತು. ಆದರೆ ತನ್ನನ್ನು ಆ ರೀತಿ ಬೆದರಿಸಿದ ಚೌಂಡಿ, ಸುಳ್ಳು ಹೇಳಿದ ಗಣಪತಿಯನ್ನು ಸುಮ್ಮನೆ ಹೇಗೆ ಬಿಟ್ಟಳು? ಇದೆಲ್ಲ ಮೋಸವೇ ಇರಬೇಕು. ಗಣಪತಿಯು ಮೊದಲೇ ಹೆಣೆದ ಕಪಟಜಾಲವಿರಬೇಕು. ತನ್ನ ವಿರುದ್ಧ ಮಾಟಮಾಡಿರಬೇಕು. ಇಂತಹ ವೈರಿಯನ್ನು ಕೊಂದು ಹಗೆತನ ತೀರಿಸಿಕೊಳ್ಳಬೇಕು. ಮೋಸಗಾರನನ್ನು ಮೋಸದಿಂದ ಹತಮಾಡಬೇಕು. ಆಗ ದಿಕ್ಕಿಲ್ಲದ ಅವನ ಹೆಂಡತಿ ತನ್ನನ್ನು ಕೂಡಾವಳಿಯಾಗುವಳು. ಈ ರೀತಿ ಮನಸ್ಸು ಸೂಚಿಸಿದುದೇ ತಡ, ಅದು ಹಾಗೆಯೇ ಆಗುವುದು, ಆಗಿಹೋಯಿತು ಎಂದು ದೃಢವಾಗಿ ನಂಬಿದನು. ಇತ್ತಲಾಗಿ ಪಟೇಲನಿಗೂ ಅಪಮಾನದ ಉರಿ ಬಲವಾಗಿ ತಗಲಿತು. ಈ ವಿಷಯದಲ್ಲಿ ಅವನು ಬಹುವಾಗಿ ಪರಿತಪಿಸಿದನು. ಆದರೆ ಇನ್ನೇನು ಮಾಡುವುದು? ಆದದ್ದು ಆಗಿಹೋಯಿತು. ಮಗನಿಗೆ ಬೇರೇ ಎಡೆಯಿಂದ ಐಶ್ವರ್ಯವಂತರಲ್ಲಿಂದ ಹುಡುಗಿ ತರಬಹುದೆಂದು ಅವನು ಯೋಚಿಸಿದನು. ಕಾರ್ಯಪ್ಪನಿಗೆ ಇದೊಂದೂ ರುಚಿಸಲಿಲ್ಲ. ತನ್ನ ನಿಶ್ಚಯವನ್ನು ತಂದೆಯ ಮುಂದೆ ಹೇಳಿಯೇ ಬಿಟ್ಟನು.

"ಚೌಂಡಿಯ ದಯೆ ಗಣಪತಿಯ ಮೇಲೆ ಇದೆಯೆಂದು ತೋರುವುದು. ದೇವಿಯ ಇಚ್ಛೆಯ ವಿರುದ್ಧ ಹೋಗಬೇಡ ಮಗನೇ" ಎಂದನು ಪಟೇಲ.

ಕಾರ್ಯಪ್ಪನು ಕೇಳಲಿಲ್ಲ. ಗಣಪತಿಯನ್ನು ಕೊಂದೇ ಹಗೆ ತೀರಿಸಬೇಕೆಂದು ನಿರ್ಧರಿಸಿದನು. ಮೂರ್ಖನಿಗೆ ಹಿಡಿದ ಪಟ್ಟು ಕುತ್ತಿಗೆಯ ಉರುಳಾಗುವುದು ಜೀವನ ನಿಯಮ.

ಎಂದಿನಂತೆ ಒಂದು ಸಂಜೆ, ಗಣಪತಿಯು ಹಳ್ಳಿಯ ಸಮೀಪದ ಕಾಡಿನಲ್ಲಿ ಬರುತ್ತಿದ್ದನು. ಇಷ್ಟರಲ್ಲಿಯೇ ಅವನಿಗೆ ಚಿರಸ್ನೇಹಿತರು – ಹುಲಿಯೂ ಅದರ ಮರಿಗಳೂ ಎದುರಾಗಬೇಕಾಗಿತ್ತು. ಇನ್ನೂ ಬರಲಿಲ್ಲ! ಇದೇನು? ಅವಕ್ಕೇನಾದರೂ ಅಪಾಯ ಸಂಭವಿಸಿರಬಹುದೇ? "ಗುರ್ ಗುರ್ ಬಾ ಬಾ" ಎಂದು ಕರೆದನು. ಕಿವಿಗೊಟ್ಟು ಆಲಿಸಿದನು. ಆದರೆ ಹುಲಿಯ ಮೂರಿಯೂ ಇಲ್ಲ, ಸದ್ದಿಲ್ಲ. ಕಾತ್ತಲೆಯಿಂದ ಕಾಡು ಮಯಮಯ ಅನ್ನುವಂತಿತ್ತು. ಗಣಪತಿಯ ಮನಸ್ಸಿನಲ್ಲಿಯೂ ಕತ್ತಲೆ ಕವಿಯಿತು. ಮುಂದೆ ಕಾಡು ಮುಗಿಯಲು ಇನ್ನೂ ದೂರವಿದೆಯಷ್ಟೆ. ಅಷ್ಟರಲ್ಲಿ ಬಂದೀತು ಎಂದು ಆಸೆ. ಆದರೆ ಯಾವಾಗಲೂ ಭೆಟ್ಟಿಯಾಗುವ ಸ್ಥಳ ಬಹಳ ಹಿಂದೆ ಉಳಿಯಿತು. ತಾನು ಕರೆದರೂ ಅದರ ಸುಳಿವಿಲ್ಲ. ಆದ್ದರಿಂದ ಅದಕ್ಕೆ ಅಪಘಾತ ಸಂಭವಿಸಿರಬೇಕೆಂದು ಅಂಜಿಕೆಯಾಯಿತು. ತಾಯಿಗೇನಾಯಿತೋ ಯಾರು ಇರಿದು ಕೊಂದರೋ ಮರಿಗಳಿಗೇನಾಯಿತೋ ಎಲ್ಲಿಗೆ ಓಡಿಹೋದವೋ, ಪಾಪ ಎಂದು ಯೋಚಿಸುತ್ತಿದ್ದಂತೆಯೇ ಗಣಪತಿಯ ದುಃಖ ಕೋಡಿಬಿರಿಯಿತು. ಮುಂದೆ ನಡೆಯಲಾಗದೆ ಅಲ್ಲಿಯೇ ಕುಸಿದು ಕುಳಿತನು. "ಬಾ ಬಾ ಗುರ್ ಗುರ್" ಎಂದು ಪುನಃ ದುಃಖ ಧ್ವನಿಗಳಿಂದ ಕೂಗಿದನು.

"ಬರಬೇಕೋ ಬಂದೆ, ಬಂದೆ ನೋಡು" ಎಂದು ಪೊದರುಗಳೆಡೆಯಿಂದ ಮೂವರು ಖಡ್ಗಗಳನ್ನು ಹಿರಿದು ಹಾರಿದರು. ಗಣಪತಿಯನ್ನು ಇರಿಯಲು ಅವನೆಡೆಗೆ ಚಿಮ್ಮಿದರು. ಅಪಾಯವೇನೊಂದನ್ನೂ ನಿರೀಕ್ಷಿಸದ ದುಃಖಿ, ಎದ್ದುನಿಂತು ಕರವಾಲವನ್ನು ಒರೆಯಿಂದ ಎಳೆಯುವ ಮೊದಲೇ ಅವರು ಅವನ ಮೈಮೇಲೆ ಏರಿ ಖಡ್ಗ ಬೀಸಿದರು. ಆಗಲೇ ವಿದ್ಯುದ್ವೇಗದಿಂದ ಮೂರುನಾಲ್ಕು ಹುಲಿಗಳು ಅವರ ಮೇಲೆ ನೆಗೆದುವು. ಮೂರು ಜನ ಶತ್ರುಗಳನ್ನೂ ಹಠಾತ್ತಾಗಿ ಕೆಡಹಿದುವು. ಭಯಭ್ರಾಂತರಾದ ಅವರು ಹುಲಿಗಳೊಡನೆ ಕಾದಾಡಲು ಮೇಲೆದ್ದರು. ಖಡ್ಗಗಳಿಂದ ಅವನ್ನು ಇರಿದರು. ಇಷ್ಟರಲ್ಲಿ ಚೇತರಿಸಿಕೊಂಡಿದ್ದ ಗಣಪತಿಯು ಶತ್ರುಗಳ ಮೇಲೇರಿ ನಿಮಿಷಮಾತ್ರದಲ್ಲಿ ಅವರನ್ನು ಉರುಳಿಸಿದನು. ಅಕಸ್ಮಾತ್ ಸಂಭವಿಸಿದ ಈ ದುರ್ಘಟನೆಯಿಂದ ಅವನು ಭಯಗೊಂಡು, ಇನ್ನು ಏನು ಅಪಾಯ ಕಾದಿದೆಯೋ ಎಂದು ತಿಳಿಯದೆ ಮನೆಯವರನ್ನೂ ಕೂಗಿ ಕರೆದನು. ಪ್ರತಿ ವಾರವೂ ಈಗಾಗಲೇ ಮನೆಯನ್ನು ಸೇರುತ್ತಿದ್ದ ಗಣಪತಿಯು ಈ ರಾತ್ರಿ ಇನ್ನೂ ಏಕೆ ಬರಲಿಲ್ಲವೆಂದು ಅವರೆಲ್ಲರೂ ಆತುರದಿಂದ ಎದುರು ನೋಡುತ್ತಿದ್ದರು. ಈ ಧ್ವನಿ ಕೇಳಿ ಹೆದರಿ, ಏನು ಅಪಾಯ ಸಂಭವಿಸಿತೊ ಎಂದು ನಡುಗಿ, ಕೂಡಲೇ ದೊಂದಿಗಳನ್ನೂ ದೊಣ್ಣೆ ಕತ್ತಿಗಳನ್ನೂ ಹಿಡಿದುಕೊಂಡು ಶಬ್ದ ಬಂದಲ್ಲಿಗೆ ಧಾವಿಸಿದರು.

ಗಣಪತಿಗೆ ಒಂದೆರಡು ಸಣ್ಣ ಗಾಯಗಳ ಹೊರತು ಬೇರೇನೂ ಆಗಿರಲಿಲ್ಲ. ದೊಡ್ಡ ಹುಲಿಯು ಅಲ್ಲಿ ತಲೆ ಅಡ್ಡ ಚಾಚಿ ಬಿದ್ದುಕೊಂಡಿದೆ. ಅದರ ಬೆನ್ನು ಸವರಿದನು. "ಗುರ್ ಗುರ್" ಎಂದು ಕರೆದನು. ಆದರೆ ಸದ್ದಿಲ್ಲ. ಮೂಗಿನ ಹೊಳ್ಳೆಗಳ ಹತ್ತಿರ ಕೈ ಹಿಡಿದು ನೋಡಿದನು. ಉಸಿರಿನ ಛಾಯೆ ಇಲ್ಲ. ಅಥವಾ ಸ್ವಲ್ಪ ಇದೆಯೋ ಎಂದು ಭ್ರಮೆಯಾಯಿತು. ಹತ್ತಿರದಲ್ಲಿ ಒಂದು ಮರಿ ಹುಲಿಯೂ ಮಲಗಿದೆ. ಶತ್ರುಗಳು ಸದ್ದಿಲ್ಲದೆ ಕೆಡೆದಿದ್ದಾರೆ. ಉಳಿದ ಮರಿ ಹುಲಿಗಳು ವಿಕಾರವಾಗಿ ಊಳಿಡುತ್ತ ಸುತ್ತು ಸುತ್ತು ತಿರುಗುತ್ತಿವೆ. ಗಣಪತಿಗೆ ಶೋಕ ಉಕ್ಕಿಬಂದಿತು. ಸೊಡರುಗಳ ಬೆಳಕಿನಲ್ಲಿ ಎಲ್ಲವೂ ಸ್ಪಷ್ಟವಾಯಿತು. ಗಣಪತಿಯ ಪ್ರಾಣಮಿತ್ರರು ತಾಯಿ ಹುಲಿ ಮತ್ತು ಅದರ ಒಂದು ಮರಿ ರಕ್ತದಲ್ಲಿ ಜಳಕವಾಡಿ ಸತ್ತುಬಿದ್ದಿರುವುವು. ಅವುಗಳ ಮೈಗಳಲ್ಲಿಯ ಅಸಂಖ್ಯಾತ ಗಾಯಗಳು ಇನ್ನೂ ನೆತ್ತರನ್ನು ಸೂಸುತ್ತಿವೆ. ಅಯ್ಯೋ ಎಂದು ಅಳುತ್ತಿವೆ. ತಾಯಿ ಹುಲಿಯು ಶಾಂತವಾಗಿದೆ, ತೃಪ್ತಿಯನ್ನು ಹೊಂದಿದೆ, ಸ್ಥಿರತೆಯನ್ನೈದಿದೆ. ಈ ಕಡೆಯಲ್ಲಿ

ಸ್ವರ್ಗಶಿಖರದಿಂದ ನರಕಕೂಪಕ್ಕೆ ನೆಗೆತ. ಕಾರ್ಯಪ್ಪನೂ ಅವನ ಸಂಗಡಿಗರೂ ದುರ್ಗತಿಯನ್ನು ಹೊಂದಿದ್ದಾರೆ. ಅವರು ತಮ್ಮ ಅಪವಿತ್ರ, ಪಾಪಕಲುಷಿತ ಮುಖಗಳನ್ನು ತರಗೆಲೆಗಳ ಅಡರುಗಳ ಮರೆಯಲ್ಲಿ ಹುದುಗಿಸಿ ಉರುಳಿದ್ದಾರೆ. ಗಣಪತಿಯು ಬಹುವಾಗಿ ಪರಿತಪಿಸಿದನು. ತಾಯಿ ಹುಲಿಯ ತಲೆಯ ಮೇಲೆ ತಲೆಯಿಟ್ಟು ಮೂಕಾಶ್ರು ಪ್ರವಾಹದಿಂದ ಅದಕ್ಕೆ ತರ್ಪಣವಿತ್ತನು. ಮರಿ ಹುಲಿಯ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಮೈ ಸವರಿದನು. ಆದರೆ ಅದು ಮೌನ. ಮೊದಲಿನಂತೆ ಬಾಲವಲ್ಲಾಡಿಸುವುದಿಲ್ಲ, ಪ್ರೀತಿಯಿಂದ ಮೈ ಮೇಲೆ ನೆಗೆಯುವುದಿಲ್ಲ. ಭೀಕರವಾದ ಬಿರುಗಾಳಿಗೆ ಹಡಗೊಡೆದು ಸಮುದ್ರ ಜಲದ ಪಾಲಾದವನ ಹಾಗಾಯಿತು ಗಣಪತಿಯ ಸ್ಥಿತಿ. ತಾಯಿಯನ್ನು ಕಳೆದುಕೊಂಡ ಮಗುವಿನಂತೆ ಹಲುಬಿದನು. ದುಃಖ ತಡೆಯಲಾರದೇ ಪ್ರಜ್ಞೆ ತಪ್ಪಿ ಉರುಳಿದನು. ಅವನನ್ನು ಮನೆಗೆ ಸಾಗಿಸಿದರು, ಶೈತ್ಯೋಪಚಾರ ಮಾಡಿದರು. ಗಣಪತಿಯ ಮನೆಯವರಿಗೆ ಆಶ್ಚರ್ಯ, ಭಯ, ಸಂತೋಷ, ಕುತೂಹಲ ಸಕಲ ಭಾವನೆಗಳ ಮಿಶ್ರಣ.

ಕಾಳರಾತ್ರಿಯ ಕರಾಳತೆ ಸಾಂದ್ರೀಕರಿಸಿತು.

"ಮತ್ತೆ ನೋಡಿ, ಅದು ನಡೆದುದು ಈ ಸ್ಥಳದಲ್ಲಿಯಂತೆ. ಕೃತಜ್ಞತೆಯಿಂದ, ಪ್ರೇಮದಿಂದ ಗಣಪತಿಯು ಹುಲಿಯ ವಿಗ್ರಹವನ್ನು ಕಡೆಯಿಸಿ ಇಲ್ಲಿ ಪ್ರತಿಷ್ಠಾಪಿಸಿದನಂತೆ, ಈ ಸ್ಥಳವನ್ನು ಹುಲಿತಾಳವೆಂದು ಅವನು ಕರೆದನು. ಪ್ರತಿದಿನವೂ ಅವನು ಇಲ್ಲಿಗೆ ಬಂದು ಹಾಲೆರೆದು ಭಾಷ್ಪಾಂಜಲಿ ನಿವೇದಿಸಿ ಮರಳುತ್ತಿದ್ದನಂತೆ. ಈಗ ಈ ಗ್ರಾಮದ ಹೆಸರೇ ಹುಲಿತಾಳವೆಂದಾಗಿದೆ."

# ಕೈಕೊಡದ ಹಿಲ್‌ಮ್ಯಾನ್

**(ಏಳನೇ ಕತೆ ೧೯೬೭)**

ಬಳ್ಳಾರಿಯ ಬೇಸಗೆಯ ಬೇಗೆ ತಡೆಯಲಾಗದೆ ಒಂದು ವಾರ ರಜೆ ಪಡೆದು ಮಡಿಕೇರಿಗೆ ಮರಳಿದ್ದೆ (೧೯೬೪). ಸ್ವಿಟ್ಸರ್ಲೆಂಡನ್ನು ಯುರೋಪಿನ ಮಡಿಕೇರಿ ಎಂಬುದಾಗಿ ಹಿರಿಯರೊಬ್ಬರು ಬಣ್ಣಿಸಿದ್ದನ್ನು ಕೇಳಿ ಹೆಮ್ಮೆ ತಳೆದಿದ್ದೇನೆ. ನನ್ನೂರಿಡೀ ಬೃಹತ್ತಾದ ಶೀತಕಾರಿ (ರೆಫ್ರಿಜಿರೇಟರ್). ಬೆಟ್ಟಗಳ ನಡುವಿನ ಬೋಗುಣಿ ಈ ಪುಟ್ಟ ಪಟ್ಟಣ. ಎಲ್ಲೆಲ್ಲಿಯೂ ಕಾಡೋಕಾಡು, ಹಸುರೋ ಹಸುರು. ವಿರಳ ಜನಸಂಖ್ಯೆ. ಸಾರಿಗೆ ಸಂಪರ್ಕ ಸರ್ವವ್ಯಾಪಿಯೂ ಅಲ್ಲ, ಸರ್ವಗ್ರಾಹಿಯೂ ಅಲ್ಲ. ನಿಸರ್ಗವೇ ಇಲ್ಲಿ ಆರಾಮವಾಗಿ ಮೈಚೆಲ್ಲಿ ವಿಶ್ರಾಂತಿ ಸುಖ ಸವಿಯುತ್ತಿರುವಾಗ ಅದರ ಕೂಸುಗಳಾದ ಜನರಿಗೆ ಎಲ್ಲಿಂದ ತಾನೇ ತುರ್ತುತನ ಬಂದೀತು!

ನಾನು ಅಜ್ಜಿ ಸಾಕಿದ ಮಗು. ಅಜ್ಜಿಯ ಗುಡಾರಕ್ಕೆ ಬಂದಿದ್ದೆ. ತಾಯಿ ಚಿಕ್ಕಮ್ಮ ಬೆಳೆಸಿದ ಕೂಸು. ತವರಿನ ಬಿಡಾರಕ್ಕೆ ಮರಳಿದ್ದೆ. ಬಳ್ಳಾರಿಯಲ್ಲಿ ಹಿರಿಯ ಸೇನಾಧಿಕಾರಿಯಾಗಿದ್ದ ನಾನು ಅಜ್ಜಿ, ತಾಯಿ, ಚಿಕ್ಕಮ್ಮ ಇವರ ದೃಷ್ಟಿಯಲ್ಲಿ ಲೋಕೈಕ ವೀರ, ಪ್ರತಾಪಶಾಲಿ, ಮಹಾಪುರುಷ. ತವರಿನ ಈ ನಲುಮೆ ನನಗೆ ಹಿತಕರವಾಗಿತ್ತು. ಅಲ್ಲಿ ಕ್ಷಣವೊಂದು ಯುಗವಾಗಿ ಇರಿಯುತ್ತಿತ್ತು. ಇಲ್ಲಿ? ಯುಗವೊಂದು ಕ್ಷಣವಾಗಿ ಸರಿಯುತ್ತಿತ್ತು.

ಮೇ ತಿಂಗಳ ಕೊನೆಯ ಪಾದ. ಅದೇ ಮಳೆಗಾಲದ ಆರಂಭದ ದಿನಗಳು. ಹೀಗಾಗಿ ಪ್ರಕೃತಿ ವ್ಯಾಪಾರಗಳು ಅಸಾಧಾರಣ ಚಟುವಟಿಕೆಯಿಂದ ಬದಲಾಗುತ್ತಿದ್ದುವು. ಈಗ ಸೆಕೆ, ಬೆನ್ನಿಗೇ ಸುಯ್ಯೆಂದು ತಂಗಾಳಿ. ಈಗ ನೀರವ, ಒಡನೆ ಗಿಡಮರಗಳ ಹಸುರೆಲೆಗಳ ಚಾಮರ ಬೀಸಿನ ಸರ ಸರ ಸದ್ದು. ಈಗ ಆಗಸ ನಿಚ್ಚಳ, ಅಗೋ ಬಂದೇ ಬಂತು ಮೋಡಗಳ ಆನೆಹಿಂಡು. ಆದರೆ ಹುಯ್ಯಲಿಲ್ಲ ಮಳೆರಾಯ, ಕೈಕೊಟ್ಟ. ನಡೆದೇಬಿಟ್ಟ. ಎಲ್ಲೆಲ್ಲೂ ಪಸೆ ಪಸೆ, ಮಳೆ ಮೂರಿ. ಮತ್ತೆ ಸೆಕೆ, ಗಾಳಿ ಅಲೆತ, ಸ್ಥಗಿತ.

ಊರವರಿಗೆಲ್ಲ ಗೊತ್ತು ಮಳೆರಾಯನ ಬಗೆಬಗೆಯ ವರಿಸೆಗಳ ಹಿಕಮತ್ತು. ಕಡಲಿನಿಂದ ಮೇಲೇರಿದ ಅವನು ಕೋಡುಮಲೆಗಳ ಈ ನಾಡನ್ನು ಹೊಗುವುದೇನು ಸಾಧಾರಣ ಸಾಹಸವೇ? ಮೇಲೇರಿದವ ಇಳೆಗಿಳಿಯದೆ ಇನ್ನೆಲ್ಲಿಗೆ ಹೋದಾನು? ನೆಲದ ನೀರಡಕೆಯನ್ನೂ ಗಿರಿವನಗಳ ಬಯಕೆಯನ್ನೂ ಕೆರೆತೊರೆಗಳ ಆಸೆಯನ್ನೂ ಹಿಂಗಿಸದಿರುವನೇ? ದಿನದಿಂದ ದಿನಕ್ಕೆ, ಅಲ್ಲಲ್ಲ, ಸಂಜೆಯಿಂದ ಸಂಜೆಗೆ, ಬಾನಂಗಳದಲ್ಲಿ ರಂಗೇರುತ್ತಿತ್ತು. ಕೋಲ್ಮಿಂಚಿನ ಸುರುಸುರು ಬತ್ತಿಯ ಥಳಕುಗಳು ವಿಚಿತ್ರಾಕಾರಗಳನ್ನು ಕುಂಚಿಸುತ್ತಿದ್ದುವು. ಗುಡುಗಿನ ನಿನದ ದಿಗ್ದಿಗಂತಗಳನ್ನು ಭೇದಿಸಿ ಮೊಳಗುತ್ತಿತ್ತು.

ನಾನು ತಂಗಿದ್ದುದು ನನ್ನ ಚಿಕ್ಕಪ್ಪನವರ ಮನೆಯಲ್ಲಿ. ಅಲ್ಲೇ ನಾನು ಓದಿ ಬೆಳೆದವ. ಮನೆಯಲ್ಲಿ ಇದ್ದವರು ಚಿಕ್ಕಮ್ಮ, ಅವರ ಮಕ್ಕಳು, ಅಜ್ಜಿ, ಕೆಲಸದವರು ಇಷ್ಟು ಮಂದಿ. ಚಿಕ್ಕಪ್ಪ ಮತ್ತು ಅವರ ಹಿರಿಮಗ ಪುಂಡರೀಕ ಗತಿಸಿ ಎರಡು ವರ್ಷಗಳು ಸಂದಿದ್ದುವು. ಎರಡನೆಯ ಮಗ ನಾರಾಯಣ, ಇಪ್ಪತ್ತೆರಡರ ಹುರುಪಿನ ತರುಣ. ಕೃಷಿಕಾರ್ಯಗಳಲ್ಲಿ ನಿರತನಾಗಿದ್ದ. ಮಡಿಕೇರಿಯಿಂದ ಭಾಗಮಂಡಲಕ್ಕೆ ಹೋಗುವ ರಾಜಮಾರ್ಗದ ಬದಿಯ ಅಪ್ಪುಕಳ ಎಂಬ ಹಳ್ಳಿಯಲ್ಲಿ ಅವರ ಆಸ್ತಿ ಇತ್ತು. ದೂರ ಸುಮಾರು ೭ ಕಿಮೀ. ನಾರಾಯಣ ಪ್ರತಿನಿತ್ಯ ಮೊದಲ ಬಸ್ಸಿನಲ್ಲಿ ಅಪ್ಪುಕಳಕ್ಕೆ ಹೋಗಿ ಹಗಲಿಡೀ ಅಲ್ಲಿದ್ದು ಸಂಜೆ ಕೊನೆ ಬಸ್ಸಿನಲ್ಲಿ ಮರಳುತ್ತಿದ್ದುದು ವಾಡಿಕೆ.

ಅಂದು ಶುಕ್ರವಾರ, ಮಡಿಕೇರಿಯಲ್ಲಿ ಸಂತೆ. ಹಳ್ಳಿಗರೆಲ್ಲರೂ ಪೇಟೆಗೆ ಬಂದು ತಮ್ಮ ಉತ್ಪನ್ನಗಳನ್ನು ಸಂತೆಯಲ್ಲಿ ಮಾರಿ, ತಮಗೆ ಬೇಕಾಗಿದ್ದ ಪದಾರ್ಥಗಳನ್ನು ಅಂಗಡಿಗಳಿಂದ ಖರೀದಿಸಿ ಮರಳುವ ವಾರದ ರಜಾ ದಿನ. ಇತ್ತ ಮನೆಯಲ್ಲಿ ಗೌರವಾನ್ವಿತ ಅತಿಥಿಯಾದ ನಾನು ಬೇರೆ ಇದ್ದೇನೆ. ಹೀಗಾಗಿ ನಾರಾಯಣ ಆ ಮುಂಜಾನೆ ಅಪ್ಪುಕಳಕ್ಕೆ ಹೋಗಲಿಲ್ಲ. ನಿಸರ್ಗ ಪೂರ್ಣ ಸಹಕಾರ ನೀಡುವಂತೆ ಪ್ರಸನ್ನವಾಗಿತ್ತು. ಹೂಬಿಸಿಲು, ಸ್ವಚ್ಛಾಕಾಶ, ಗಾಳಿಯೇ ಹೆಪ್ಪುಗಟ್ಟಿ ಬಾನಾಯಿತೋ ಎನ್ನುವಂಥ ನೋಟ.

ಕೃಷಿರಂಗ ಯುದ್ಧರಂಗದಂತೆ, ನಿರಂತರ ಜಾಗರೂಕತೆಯೇ ಎರಡೂ ರಂಗಗಳಲ್ಲಿಯ ಯಶಸ್ಸಿನ ಗುಟ್ಟು. ನಾರಾಯಣನಿಗೆ ಅಪ್ಪುಕಳದಲ್ಲಿ ಜರೂರು ಕೆಲಸ ಬಂತು, ಹೀಗಾಗಿ ಅವನು ಬೇಗನೆ ಮಧ್ಯಾಹ್ನದ ಊಟ ಮುಗಿಸಿ ಅತ್ತ ಕಡೆಗೆ ಪಾದಯಾತ್ರೆ ಮಾಡಿದ. ಆ ಅವೇಳೆಯಲ್ಲಿ ಯಾವ ಬಸ್ಸೂ ಇರಲಿಲ್ಲ.

"ಹೊತ್ತು ಕಂತುವ ಮೊದಲೇ ಬಂದುಬಿಡು" ಅಜ್ಜಿಯ ಬುದ್ಧಿವಾದ.

"ಹೋಗದಿದ್ದರೇನು ಮಹಾ ಸೂರೆಹೋಗೋದು? ನಾಳೆ ಹೋದರಾಯಿತು" ತಾಯಿಯ ಕಾಳಜಿ ನುಡಿ.

"ಮಳೆರಾಯನ ಮೂಡ್ ನಂಬಬೇಡ" ನನ್ನ ಅನುಭವೋಕ್ತಿ.

"ಕೊನೆ ಬಸ್ಸಿನಲ್ಲಿ ಬಂದೇ ಬರುತ್ತೇನೆ. ಒಟ್ಟಿಗೇ ಊಟ ಮಾಡೋಣ" ನಾರಾಯಣನ ಸಮಜಾಯಿಷಿ.

ಸರಿ, ಅತ್ತ ಅವನು ನಡೆದು ಹೋದ, ಇತ್ತ ನಾನು ನಿದ್ರೆ ಹೋದೆ.

ಗಡಿಯಾರದ ಪ್ರಕಾರ ಸಾಯಂಕಾಲದ ೫ ಗಂಟೆ. ಆದರೆ ಸುತ್ತಲೂ ದಟ್ಟವಾಗಿ ಹಬ್ಬಿದ್ದ ಮೋಡಗಳ ದಪ್ಪ ಮುಸುಕು ಆಗಲೇ ಮಡಿಕೇರಿಗೆ ಕತ್ತಲೆಯ ಕರಿಗವಸು ತೊಡಿಸಿತ್ತು. ನಾನು ಎದ್ದೆ. ಮಳೆಯ ಮೊದಲ ಸುತ್ತು ಇನ್ನೇನು ಆರಂಭವಾಗುವುದರಲ್ಲಿತ್ತು. ಕೋಲ್ಮಿಂಚಿನ ಆರತಿ, ಗುಡುಗಿನ ನಗಾರಿ, ಕಪ್ಪೆ ಬಿಬ್ರಿಗಳ ಮಂತ್ರ ಪಠಣ, ಗಿಡಮರಗಳ ತೊನೆತ, ಹೊಸ ಮಣ್ಣಿನ ಹಿತಕರ ಪರಿಮಳ ಇವೆಲ್ಲವೂ ನನಗೆ ಅಪ್ಯಾಯಮಾನವೇ. ಆದರೆ ನಾರಾಯಣ ಅಪ್ಪುಕಳಕ್ಕೆ ಹೋಗಿರುವವನಲ್ಲ. ಬೇಗನೆ ಮರಳಲಿ ಎಂಬ ಚಿಂತೆ ಮನಸ್ಸಿನ ಅಂತರಾಳದಲ್ಲಿ ಕಲಕುತ್ತಿತ್ತು. ಆಲಿಕಲ್ಲುಗಳ ಹೊಡೆತ ಬಿರುಸಾಗಿಯೇ ಇತ್ತು. ಅವುಗಳ ಬೆನ್ನಿಗೆ ಮಳೆಯ ತೋರ ಹನಿಗಳ ತೀವ್ರ ಕುಟ್ಟಣೆಯೂ ತೊಡಗಿತ್ತು. ಕೇವಲ ನಿಮಿಷಗಳಲ್ಲೇ ಚರಂಡಿ ತೋಡುಗಳು ತುಂಬಿ ಉಕ್ಕಿದುವು. ಪ್ರಕೃತಿಯೇ ಕರಗಿ ನೀರಾಗಿ ಹರಿಯುತ್ತಿತ್ತು. ಆಗಸವೇ ಬಿರಿದೊಡೆದು ನೆಲದ ಮೇಲೆ ಕೆಡೆದಿತ್ತು.

ಗಡಿಯಾರದ ಲೋಲಕ ನಿರಂತರವಾಗಿ ಆಂದೋಲಿಸಿತು. ಅಡುಗೆ ಮನೆಯಲ್ಲಿ ಸೌದೆ ಒಲೆಯ ಬೆಚ್ಚಗಿನ ಮೂಲೆಯಲ್ಲಿ ಕಾಲು ಚಾಚಿ ಕುಳಿತು ಸುಟ್ಟ ಹಲಸಿನ ಬೇಳೆಗಳನ್ನು ಕಟುಂ ಕುಟುಂ ಜಗಿಯುತ್ತ ಕೊಡಗಿನ ಘಮಘಮಿಸುವ ಸುಡು ಸುಡು ಕಾಫಿಯನ್ನು ತೆಳು ಪೊರೆಯಲ್ಲಿ ಹೀರುತ್ತ ಪರನಿಂದೆ ಹಾಗೂ ಆತ್ಮಶ್ಲಾಘನೆ ಎಂಬ ಅತ್ಯುತ್ಸಾಹದಾಯಕ ವಿಷಯವನ್ನು ಎಳೆ ಎಳೆಯಾಗಿ ಬಿಡಿಸಿ ಮಾತಾಡುತ್ತ ಕಾಲಸವೆದದ್ದಾಯಿತು. ರಾತ್ರಿ ಗಂಟೆ ಎಂಟಾದರೂ ಕೊನೆಯ ಬಸ್ ಮಡಿಕೇರಿ ನಿಲ್ದಾಣ ತಲಪಿ ಒಂದು ಗಂಟೆಯೇ ಸಂದು ಹೋಗಿದ್ದರೂ ನಾರಾಯಣ ಬರಲಿಲ್ಲ. ಚಿಂತೆ ಕಾತರತೆಯಾಗಿ ಭಯರೂಪದಲ್ಲಿ ಹೆಪ್ಪುಗಟ್ಟಿತು.

"ದಾರಿಯಲ್ಲಿ ಮರಬಿದ್ದು ಬಸ್ ಸಂಚಾರ ಬಂದ್ ಆಗಿರಬಹುದು."

"ಸೇತುವೆ ಕುಸಿದು ಬಸ್ ಆ ಕಡೆ ನಿಂತುಹೋಗಿರಬಹುದು."

"ಬಸ್ ಓಡಿಯೇ ಇರಲಾರದು."

"ಬಂದೇ ಬರುವೆನೆಂದ. ಮಹಾ ಹಠಮಾರಿ, ನಡೆದುಕೊಂಡೇ ಹೊರಟಿರಬಹುದು."

"ಹಾಗಾದರೆ ಯಾಕೆ ಅಂವ ಬರಲಿಲ್ಲ?"

ಇನ್ನೂ ಯಾಕ ಬರಲ್ಲಿಲ್ಲಾಂವಾ ಅಪ್ಪುಕಳದಾಂವಾ?

ಮುಂದಿನ ಊಹಾಪೋಹಗಳು ಯಾರಿಗೂ ಬೇಕಾಗಿರಲಿಲ್ಲ. ಚಿಕ್ಕಮ್ಮನವರ ಕಳವಳ ವ್ಯಾಕುಲವಾಯಿತು. ಮಳೆಗಾಳಿಗಳು ಗಿಯರ್ ಏರಿಸಿ ಇನ್ನೂ ರಭಸದಿಂದ ಪ್ರತಾಪ ಪ್ರದರ್ಶಿಸತೊಡಗಿದುವು. ರಾಕ್ಷಸ ಶಕ್ತಿಗಳೇ ಹಾಗೆ. ರಾತ್ರಿ ವೇಳೆ ಅವಕ್ಕೆ ಹೆಚ್ಚಿನ ಹುಮ್ಮಸ್ಸು ಧಿಮಾಕು.




ಸೇನಾಧಿಕಾರಿಯಾದ ನಾನೊಂದು ಮಿಲಿಟರಿ ಆಪರೇಷನ್ ಯುದ್ಧ ಕಾರ್ಯಾಚರಣೆ ಸೂಚಿಸಿದೆ. ಚಿಕ್ಕಪ್ಪನವರ ಹಳೆ ಕಾರ್ ೧೯೩೦ರ ಮೊಡೆಲ್ ಹಿಲ್ ಮ್ಯಾನ್ ಮಿಂಕ್ಸ್ ಮನೆಯ ಗೆರಾಜಿನಲ್ಲಿದ್ದದ್ದು (ಕಾರುಕೊಟ್ಟಿಗೆ) ನನಗೆ ಗೊತ್ತಿತ್ತು. ಎರಡು ದಿನಗಳ ಹಿಂದೆ ನಾರಾಯಣ ಅದನ್ನು ಮಡಿಕೇರಿಯ ಇಕ್ಕಟ್ಟು ಬೀದಿಗಳಲ್ಲಿ ಓಡಿಸಿದ್ದ. ನಾನದರೊಳಗೆ ಮಂಡಿಸಿದ್ದೆ. "ಈಗ ನಾನು ಆ ಕಾರನ್ನು ಡ್ರೈವ್ ಮಾಡಿ ಅಪ್ಪುಕಳಕ್ಕೆ ಹೋಗಿ ಏನಾಗಿದೆ ಎಂದು ತಿಳಿದು ಬರುತ್ತೇನೆ" ಎಂದೆ.

ಚಿಕ್ಕಮ್ಮನವರ ಆಗಿನ ಮನಸ್ಥಿತಿಯಲ್ಲಿ ಈ ಸೂಚನೆ ಅಮೃತೋಪಮವಾಯಿತಾದರೂ ಒಡನೆ ಅವರಿಗೆ ನನ್ನ ಯೋಗಕ್ಷೇಮದ ಬಗ್ಗೆ ಚಿಂತೆ ಕವಿಯಿತು. ಇಂಥ ಎಲ್ಲ ಸನ್ನಿವೇಶಗಳಲ್ಲಿ ನಡೆಯುವಂತೆ ಅತಿ ಕಾಳಜಿಯ ವಾದವಿವಾದವಾದ ಬಳಿಕ ಚಿಕ್ಕಮ್ಮ ಮತ್ತು ನಾನು ಇಬ್ಬರೂ ಕಾರಿನಲ್ಲಿ ಅಪ್ಪುಕಳಕ್ಕೆ ಹೋಗುವುದೆಂಬ ಒಪ್ಪಂದಕ್ಕೆ ಬಂದೆವು.

ಕತ್ತಲೆಯ ಗುಹೆಯೊಳಗೆ ಹುದುಗಿದ್ದ ಹಿಲ್ ಮ್ಯಾನನ್ನು ಮುಟ್ಟಿ ನೋಡಿ ಅರಿತೆ. ಚಾಲಕನ ಆಸನದ ಕಡೆಗಿದ್ದ ಕದವನ್ನು ಪ್ರಯಾಸದಿಂದ ತೆರೆದೆ. ಅದು ಕಿರೋರೋರೋರಕ್ ಎಂದು ಅರಚಿ ಹಠಾತ್ತಾಗಿ ನಿಂತಾಗ ಪಾತಾಳದಾಕಳಿಕೆಯೋ ಕುಂಭಕರ್ಣನ ಸೆಟೆತವೋ ಎಂಬ ಭಾವಗಳು ಮೂಡಿದುವು. ಒಳಹೊಕ್ಕೆ, ಕುಳಿತೆ, ಬಡಿದು ಕದವಿಕ್ಕಿದೆ. ಸ್ವಿಚ್ ಕೀಲಿಯನ್ನು ಪರಡಿ ತೂತಕ್ಕೆ ಸಿಕ್ಕಿಸಿದೆ, ತಿರುಗಿಸಿದೆ. ಫಲಕದಲ್ಲಿ ಬೆಳಕು ಮಿನುಗಲಿಲ್ಲ. ಬಿರಿ ಒತ್ತಿ ಕ್ಲಚ್ ಅಮರಿಸಿ ಗಿಯರನ್ನು ತಟಸ್ಥ ಸ್ಥಾನಕ್ಕೆ ತಳ್ಳಿ ಸ್ಟಾರ್ಟರನ್ನು ಎಳೆದೆ, ಚೋಕ್ ಕೊಟ್ಟೆ. ಊಹೂಂ, ಜೀವ ಸ್ಪಂದಿಸಲಿಲ್ಲ. ಸ್ಪಂದನ ಶ್ರುತಿಯೂ ನಾಸ್ತಿ. ಬ್ಯಾಟರಿ ಡೌನ್, ನನ್ನದೂ ಹಾಗೆ. ಮನೆ ಮಂದಿ ಸೇರಿ ಕಾರನ್ನು ರೊಪ್ಪದಿಂದ ಉತ್ಖನನ ಮಾಡಿದ್ದಾಯಿತು. ಈಗ ಅದು ರಸ್ತೆಯ ತೆರೆ ಜಾಗದಲ್ಲಿ ನಿಂತಿರುವ ಲಠಾರಿ ಮಾಲು. ಅದರ ಮೇಲೆ ಮಳೆಯ ಒನಕೆ ಹನಿಗಳು ಎಡಬಿಡದೆ ಬಡಿದು ಅಭ್ಯಂಜನ ಮಾಡಿಸುತ್ತಿವೆ. ಟಾರ್ಚ್ ಲೈಟಿನಿಂದ ಬೆಳಕು ಬೀರಿ ಕಾರಿನ ಒಳಭಾಗವನ್ನು ಒಮ್ಮೆ

ಪರಿಶೀಲಿಸಿದೆ. ಇದೇನು ಕಾರೇ? ಗತಯುಗದ ಭವ್ಯ ಸ್ಮಾರಕವೇ? ಪ್ರಾಚ್ಯ ಸಂಶೋಧನಾಲಯದಲ್ಲಿ ಇಡಬೇಕಾದ ವಸ್ತು ವಿಶೇಷವೇ? ಚಿಕ್ಕಪ್ಪನವರ ಅತಿವಿಧೇಯ ಪುಷ್ಪಕವಾಗಿದ್ದ ಈ ಕಾರ್ ತನ್ನ ಆತ್ಮವನ್ನು ಅವರೊಂದಿಗೆ ಪರಲೋಕಕ್ಕೆ ರವಾನಿಸಿಬಿಟ್ಟಿರಬೇಕು ಎಂದೆನಿಸಿತು ನನಗೆ. ಹರಕು ಮುರುಕು, ಜಂಗು ಹಿಡಿದ ಈ ಜಂಕನ್ನು ನಾನು ಚಾಲೂ ಮಾಡಬಲ್ಲೆನೇ?

ಆದೆ ನಾರಾಯಣ ಅಲ್ಲಿ, ಚಿಕ್ಕಮ್ಮ ಇಲ್ಲಿ. ನಡುವೆ ನಾನು! ನಾವು ಹೋಗಲೇಬೇಕು.

ನೋಡಿಯೇ ಬಿಡೋಣ ಒಂದು ಕೈ ಎಂದು ಜಟ್ಕಾ ಸ್ಟಾರ್ಟ್ ಮಾಡಲು ಪ್ರಯತ್ನಿಸಿದೆ. ಕಾರನ್ನು ಜೋರಾಗಿ ತಳ್ಳಿಸಿ ಅದು ಓಡುತ್ತಿದ್ದಂತೆ ಗಿಯರನ್ನು ಲಗಾಯಿಸಿ ಎಂಜಿನ್ನನ್ನು ಚಾಲೂ ಮಾಡುವ ಉಲ್ಟಾ ವಿಧಾನವಿದು. ನನ್ನ ಈ ಹಿಕಮತ್ತು ಫಲ ನೀಡಿತು. ಡೊರಡೊರಡೊರ ಠಪ್ ಬ್ರೂರ್ರೋ ಎಂಬ ಕರ್ಣಾನಂದಕರ ಹೃದಯಮಧುರ ನಿನದದೊಡನೆ ಕಾರ್ ಜೀವ ಪಡೆದೇ ಪಡೆಯಿತು. ಭಲೇ ಹಿಲ್ ಮ್ಯಾನ್ ಯೂ ಆರ್ ಎ ಮ್ಯಾನ್! (ಅಥವಾ ನಾನೋ?)

ದೀಪಗಳ ಸ್ವಿಚ್ ಹಾಕಿದೆ, ಜ್ಯೋತಿ ಬೆಳಗಲಿಲ್ಲ. ಎಂಜಿನ್ನಿನ ನಾದವೇನೋ ಭರವಸೆ ಮೂಡಿಸುವಂತಿದೆ. ಆದರೆ ಬೆಳಕಿಲ್ಲದೆ ಆ ಅಪರಾತ್ರಿ ಮಳೆಗೋಡೆ ಭೇದಿಸುತ್ತ ಮಲೆನಾಡಿನ ಗೊಂಡಾರಣ್ಯದ ಸರ್ಪ ಮಾರ್ಗದಲ್ಲಿ ಈ ಚರಸ್ಮಾರಕವನ್ನು ಓಡಿಸುವುದು ಹೇಗೆ? ಇನ್ನೂ ಒಂದು ತೊಂದರೆ ಕಾದಿತ್ತು. ಚಾಲಕನಿಗೆ ಎದುರಾಗಿ ಅಖಂಡ ಕನ್ನಡಿ ಚೌಕಟ್ಟು – ಗಾಳಿತೆರೆ (ವಿಂಡ್ ಸ್ಕ್ರೀನ್), ಇದೆಯಷ್ಟೆ. ಅದರ ಹೊರಮೈ ಮೇಲೆ ಚಾಮರ ಬೀಸಿ ನೀರೊರೆಸುವ ವೈಪರುಗಳೇ ಇರಲಿಲ್ಲ. ಹೀಗಾಗಿ ರಸ್ತೆ ಒಂದಿಷ್ಟೂ ಕಾಣುತ್ತಿರಲಿಲ್ಲ. ಹಾಗಾದರೆ ಕಾರನ್ನು ಹಿಂತಿರುಗಿಸುವುದೇ?

ಆದರೆ ನಾರಾಯಣ ಅಲ್ಲಿ, ಚಿಕ್ಕಮ್ಮ ಇಲ್ಲಿ, ನಡುವೆ ನಾನು. ನಾವು ಹೋಗಲೇಬೇಕು.
ಪ್ರಾಚೀನ ಕಾಲದ ಯಂತ್ರೋದ್ಯಮದ ಪ್ರತೀಕವಾದ ಹಿಲ್ ಮ್ಯಾನನ ಗಾಳಿತೆರೆಯ ತಿರುಪನ್ನು ಸಡಿಲಗೊಳಿಸಿ ಕೈ ಹಿಡಿಯನ್ನು ತಿರುಗಿಸಿದೆ. ಗಾಳಿತೆರೆ ಹೊರಕ್ಕೆ ತೆರೆದುಕೊಂಡು ಬಾನೆಟ್ಟಿಗೆ ಸಮಾಂತರವಾಗಿ ನಿಂತಿತು. ಅಲ್ಲಿಗೆ ನನಗೂ ಹಾದಿಗೂ ನಡುವಿನ ಅಡಚಣೆ ಇಲ್ಲವಾದಂತಾಯಿತು, ನಿಜ. ಆದರೆ ಈಗ ಮಳೆಯ ನೇರ ಹೊಡೆತಕ್ಕೆ ಅದೂ ಕಾರ್ ಓಡುವಾಗ ಹೆಚ್ಚಿನ ಬಡಿತಕ್ಕೆ ನಾನು ತುತ್ತಾಗುತ್ತಿದ್ದೆ. ಮಳೆಯೂರಿನವನಾದ ನಾನು ಈ ಹೊಡೆತ ಬಡಿತಗಳಿಗೆ ಅಂಜುವ ಮಾಣಿ ಅಲ್ಲ. ಮಡಿಕೇರಿಯಿಂದ ಅಪ್ಪುಕಳದವರೆಗಿನ ಹಾದಿ ಕಂಡುದಾದರೆ ಹೇಗೂ ಹೋಗಬಹುದು. ಎಕ್ಸ್‌ಕಿರಣ ನೇತ್ರಗಳಿರಬಾದಿತ್ತೇ ನನಗೆ?

ಆ ಹಾದಿಯ ಒಂದೊಂದು ತಿರುವು ಮುರುವು, ಏಳುಬೀಳು, ಓರೆಕೋರೆ ಎಲ್ಲವೂ ನನಗೆ ಕಂಠಪಾಠ, ಅಲ್ಲಲ್ಲ ಪಾದಪಾಠ. ಹಾದಿಬದಿಯ ಗಿಡಗಂಟಿ, ಪೊದೆ ಕುರುಚಲು, ಬರೆ ಕೊರಕಲು ಎಲ್ಲವೂ ಆತ್ಮೀಯ ಒಡನಾಡಿಗಳು. ಹಾಗಿದ್ದರೂ ತಿಳಿಯದ ಕಾರನ್ನು ಕಾಣದ ಹೊತ್ತಿನಲ್ಲಿ, ಅರಿಯದ ಗುರಿಯೆಡೆಗೆ, ಆ ಹಾದಿಯಲ್ಲಿ ಒಯ್ದೇನೆಂಬ ಧೈರ್ಯ ಮೂಡಲಿಲ್ಲ. ಕಾರಿನ ಟೈರುಗಳು ಪಾದಗಳಲ್ಲವಷ್ಟೆ. ಹಾಗಾದರೆ ಕಾರನ್ನು ಲಾಯದೊಳಕ್ಕೆ ನುಗ್ಗಿಸುವುದೇ?
ಆದರೆ ನಾರಾಯಣ ಅಲ್ಲಿ, ಚಿಕ್ಕಮ್ಮ ಇಲ್ಲಿ, ನಡುವೆ ನಾನು. ನಾವು ಹೋಗಲೇಬೇಕು.
ಚಿಕ್ಕಮ್ಮನಿಗೆ ಹೇಳಿದೆ, "ನೀವು ಮುಂದಿನ ಆಸನದಲ್ಲಿ ಎಡಗಡೆ ಕುಳಿತುಕೊಳ್ಳಿ. ಮಳೆನೀರಿನಿಂದ ತೋಯದಂತೆ ಕಂಬಳಿ ಹೊದ್ದುಕೊಳ್ಳಿ. ಎಡಗೈಯಲ್ಲಿ ಟಾರ್ಚ್ ಹಿಡಿದು ಅದರ ಬೆಳಕನ್ನು ಡಾಮರು ದಾರಿಯ ಎಡ ಅಂಚು ಸರಿಯಾಗಿ ನನಗೆ ಕಾಣುವಂತೆ ಬೀರುತ್ತಿರಿ. ಆ ಅಂದಾಜಿನ ಮೇಲೆ ನಾನು ಕಾರ್ ಚಾಲಿಸುತ್ತೇನೆ. ನಿಧಾನವಾಗಿ ಹೋಗೋಣ." ಕುರುಡಚಾಲಕ ಕುಂಟಪಯಣಿಗ ಅವರ ಸಹಯೋಗದಿಂದ ಬಂಡಿ ಉರುಳಿತು. ದಾರಿ ಸರಿಯಿತು. ದೂರ ತೀರಕೆ?

ಕಾರನ್ನು ಒಂದನೆಯ ಗಿಯರಿಗೆ ಸರಿಸಿ ಎಂಜಿನ್ ನಾದ ಏರಿದಂತೆ ಎರಡನೆಯ ಗಿಯರಿಗೆ ಬದಲಾಯಿಸಿದೆ. ರಸ್ತೆಯಲ್ಲಿ ಜುಳುಜುಳಿಸುತ್ತಿದ್ದ ನೀರನ್ನು ಇಕ್ಕೆಲಗಳಿಗೂ ಚೇಪುತ್ತ ಎರಡೆರಡು ತಿರುಗಾಸುಗಳನ್ನು ಮಂದಗತಿಯಿಂದ ದಾಟುತ್ತ ಕಾರ್ ಸಾಗಿತು. ಈಗ ಬ್ರಾಹ್ಮಣಕೇರಿಯ ಬಲು ಕಡಿದಾದ ಚಡಾವು ಏರಬೇಕು. ಮೂರನೆಯ ಗಿಯರಿಗೆ ಆ ತಾಕತ್ತು ಬಾರದೆಂದು ಅನಿಸಿದ್ದರಿಂದ, ಜೊತೆಗೆ ಮೂರನೆಯದರಲ್ಲಿ ಹೋಗುತ್ತಿರುವಾಗ ನಡು ಚಡಾವಿನಲ್ಲಿ ವೇಗ ತಗ್ಗಿದರೆ ಗಿಯರನ್ನು ಎರಡನೆಯದಕ್ಕೆ ಇಳಿಸಲು ಬೇಕಾಗುವ ಎದೆಗಾರಿಕೆ ಆಗ ನನಗೆ ಇಲ್ಲದ್ದರಿಂದ – ಹೊಸ ನೀರು, ಹೊಸ ಕಾರು, ಬಲು ಹುಷಾರು ಯಥಾಸ್ಥಿತಿಯನ್ನೇ ಮುಂದುವರಿಸಿದೆ. ಊರ ಒಳಗಿನ ಓಣಿ ಕೇರಿಗಳನ್ನು ಹಿಂದೆ ಹಾಕಿ ಮಡಿಕೇರಿಯ ಗಡಿಯಲ್ಲಿರುವ ಸುಂಕದ ಕಟ್ಟೆ ತಲಪಿದೆವು. ಪೆಟ್ರೋಲ್ ಪಂಪಿನಿಂದ ಕಾರಿಗೆ ಅಮೃತ ಊಡಿಸಿದೆ.

ಇನ್ನು ಮುಂದೆ ನಾವು ೭ ಕಿಮೀಗಳಷ್ಟು ದೂರ ಗೊಂಡಾರಣ್ಯದ ನಡುವೆ, ಬೆಟ್ಟದ ಮಗ್ಗುಲನ್ನು ಕೊರೆದು ಮಾಡಿದ್ದ ಬಳಸುದಾರಿಯ ಮೇಲೆ, ಸುತ್ತುತ್ತ ಬಳುಕುತ್ತ ಇಳಿಯುತ್ತ ಏರುತ್ತ ತೆವಳಬೇಕು. ಮಳೆರಾಯ ಗಿಯರ್ ಏರಿಸಿ ಇನ್ನೂ ತೀವ್ರವಾಗಿ ಜಡಿಯತೊಡಗಿದ. ನಾನೇನು ಕಡಿಮೆ? ನಾನು ಗಿಯರ್ ಏರಿಸಿ ಅಪ್ಪುಕಳದ ಹಾದಿಗೆ, ಗಹನ ತಿಮಿರದ ಬಾಯಿಗೆ, ಅಜ್ಞಾತ ಭವಿಷ್ಯದ ಕೂಪಕ್ಕೆ, ಕಾರನ್ನು ಹೊರಳಿಸಿಯೇ ಬಿಟ್ಟೆ. ಕಾರಿನ ಬಿರಿಗಳು ಸಮರ್ಪಕವಾಗಿಲ್ಲ. ಆದ್ದರಿಂದ ನಾಲ್ಕನೆಯ (ಟಾಪ್) ಗಿಯರ್ ಪೂರ್ಣ ವರ್ಜ್ಯ. ಮೂರನೆಯ

ಗಿಯರಿನಲ್ಲಿ ಹೋಗೋಣವೇ? ಅದರಲ್ಲಿ ಜಾರಿಕೆ, ಎಂದರೆ ಗಿಯರಿನ ಸರಳು ಬೇಕಾದಲ್ಲಿ ನಿಲ್ಲದೆ ತಟಸ್ಥ ಸ್ಥಾನಕ್ಕೆ ಜಾರಿ ಬೀಳುವ ಐಬು. ಆಗ ಎಂಜಿನ್ ಚಾಲೂ ಇದ್ದರೂ ಬಂಡಿ ಓಡದು. ಎರಡನೆಯ ಗಿಯರಿನಲ್ಲಿಯೇ ಇಡೀ ಪಯಣ ಮಾಡೋಣವೇ? ಗತಿ ಅತಿ ಮಂದ. ಎಂಜಿನ್ ತುಂಬ ಬಿಸಿಯಾಗಿ ಕಾದು ಒಡೆದೇ ಹೋಡೀತು. ಆದ್ದರಿಂದ ಮೂರನೆಯ ಗಿಯರೇ ಶರಣು. ಸರಳನ್ನು ಎಡಗೈಯಿಂದ ಅಮರಿಸಿ ಬಿಗಿಹಿಡಿದು ಬಲಗೈಯಿಂದ ಚುಕ್ಕಾಣೀಚಕ್ರ (ಸ್ಟೀಯರಿಂಗ್ ವೀಲ್) ತಿರುಗಿಸುವ ಕರ್ಣನಾದೆ.

ಕಾರು ಮುಂದೆ ಮುಂದೆ ಹರಿಯಿತು, ಅಲ್ಲ, ರಸ್ತೆ ಹಿಂದೆ ಹಿಂದೆ ಜಾರಿತು. ಕಣ್ಣುಗಳಿಗೆ ಮಳೆಹನಿಗಳು ಬಡಿದು ಎವೆ ಮೇಲೆ ಮಿನಿ ಭೂತಗನ್ನಡಿಗಳನ್ನು ರಚಿಸಿದುವು. ಅವುಗಳ ಮೂಲಕ ಕಂಡ ನೋಟವೇ ಬೇರೆ. ಇತ್ತ ಡಾಮರು ರಸ್ತೆಯಲ್ಲಿ ಹರಿಯುತ್ತಿದ್ದ ನೀರ ಹೊನಲಿನಲ್ಲಿ ಪ್ರತಿಫಲಗೊಂಡ ಟಾರ್ಚ್ ಬೆಳಕು ಮಾಯಾಲೋಕವೊಂದನ್ನು ನಿರ್ಮಿಸಿತ್ತು. ದಾರಿ ಯಾವುದಯ್ಯಾ ತಿಳಿಯದೆ ಭಯಗೊಂಡೆ. ಬಲಗಡೆಗೆ ಬರೆ, ಎಡಗಡೆಗೆ ದರೆ, ಎದುರಿಗೋ ಮಳೆಹಿಮಗಳ ದಟ್ಟ ತೆರೆ, ನಡುವೆ ಈ ಮಿಲಿಟರಿ ದೊರೆ! ಟಾರ್ಚಿನ ಸುತ್ತಲೂ ಬೆಳಕಿನ ಮಬ್ಬು ಜೊಂಪೆ, ಅದರಿಂದಾಚೆಗೆ ಗಭೀರ ಶೂನ್ಯ.

ಚಿಕ್ಕ ಕಲ್ಲಿನ ಮೇಲೂ ಚಕ್ರ ಉರುಳಿದಾಗ, ಪುಟ್ಟ ಹೊಂಡವನ್ನೂ ಅದು ದಾಟಿದಾಗ, ಸಣ್ಣ ಕಣಿವೆಯನ್ನೂ ಅದು ಅಡ್ಡ ಹಾಯ್ದಾಗ ಚುಕ್ಕಾಣಿಚಕ್ರ ಅಲುಗುತ್ತಿತ್ತು. ನನ್ನ ಗುಂಡಿಗೆ ಬಡಿತ ತಾರಕ್ಕೆ ಜಿಗಿಯುತ್ತಿತ್ತು. ಎಂಜಿನ್ ನಾದ ಮಂದ್ರಕ್ಕೆ ಕುಸಿಯುತ್ತಿತ್ತು. ಅತ್ತಿತ್ತ ನೋಡುವುದುಂಟೇ? ರಸ್ತೆಯ ಎಡ ಅಂಚೊಂದೇ ನನ್ನ ಧ್ರುವ ತಾರೆ. ಆದರೆ ಎಡ ಅಂಚೇ ನಲುಗಿ ಕರಗಿ ನೀರಾಗಿ ಪ್ರವಹಿಸುತ್ತಿದೆ. ಚಿಕ್ಕಮ್ಮ ಎವೆ ಮುಚ್ಚದೆ ಹಾದಿ ದಿಟ್ಟಿಸುತ್ತ ನನಗೆ ಸೂಚನೆ ನೀಡುತ್ತಿದ್ದಾರೆ. ಅಳ್ಳೇಶಿ ಅರ್ಜುನನ ಟೊಳ್ಳು ಎದೆಗೆ ಕೆಚ್ಚು ತುಂಬುತ್ತಿದ್ದಾರೆ. ಅಂಥದ್ದರಲ್ಲೂ ನನಗೆ ಖಾತ್ರಿ ಇದೆ, ನಮ್ಮ ವಾಹನ ಕೇರೆಹಾವಿನಂತೆ ಅಂಕುಡೊಂಕಾಗಿಯೇ ತೆವಳಿರಬೇಕೆಂದು.

ಐದು ಕಿಮೀ ಉದ್ದದ ಇಳಿಜಾರು ಹಾದಿ ಮುಗಿಯಿತು. ದಾರಿಗೆ ಅಡ್ಡ ಮರ ಬಿದ್ದಿರಲಿಲ್ಲ. ಬಿದ್ದಿದ್ದರೆ ಅದೇ ನಮ್ಮನ್ನು ತಡೆದು ನಿಲ್ಲಿಸಿರುತ್ತಿತ್ತು. ಮೋರಿ ಸೇತುವೆ ಯಾವುದೂ ಕುಸಿದಿರಲಿಲ್ಲ. ಕುಸಿದಿದ್ದರೆ ಅವೇ ನಮ್ಮ ಕಾರನ್ನು ಮುಗ್ಗರಿಸಿ ಕುಕ್ಕರಿಸುವಂತೆ ವಿಧಿಸಿರುತ್ತಿದ್ದುವು. ಈಗ ಬಂದಿದೆ ನಿಜವಾದ ಪರೀಕ್ಷಾ ಕಾಲ. ನನ್ನೂರಿನ ನನಗೆ ಬಲು ಚೆನ್ನಾಗಿ ಗೊತ್ತಿರುವ, ಎಂದೂ ಬದಲಾಗದಿರುವ ಹಾದಿಯೊಂದು, ಸನ್ನಿವೇಶದ ಬದಲಾವಣೆಯಿಂದ ಎಂಥಾ ಸವಾಲಾದೀತೆಂಬುದನ್ನು ಯೋಚಿಸಿ ನಡುಗಿದೆ. ಬಿಗಿ ಸರಿಗೆಯ ಮೇಲೆ ಸಮತೋಲ ತಪ್ಪದೆ ನಡೆದು ಗುರಿ ತಲಪುವ ಅದಟು ನನಗುಂಟೇ? ಮೂರು ಕಿಮೀ ಉದ್ದದ ಉಡುವತ್ತುಮೊಟ್ಟೆ ಚಡಾವನ್ನು ನಾವೀಗ ಏರಬೇಕಾಗಿದೆ. ಅದೆಂಥ ಚಡಾವು? ಏರುಧಾಟಿಯಲ್ಲಿ ಬಳಸುತ್ತ ಸುತ್ತುತ್ತ ಹತ್ತುತ್ತ ಬಳುಕುತ್ತ ಹೋಗಿ ಕೊನೆಯ ಹಂತದಲ್ಲಿ ನೇರ ನೆತ್ತಿಗೇ ನೆಗೆದು ಬಲಕ್ಕೆ ಲಂಬ ಕೋನದಲ್ಲಿ ಒಮ್ಮೆಗೇ ತಿರುಗಿ ದಿಢೀರನೆ ಇಳಿಯಲು ತೊಡಗುವ ಕಾಲನ ಕೋಣನ ಜಾಡು. ಇದರ ಬಹುಭಾಗವನ್ನು ಮೂರನೆಯ ಗಿಯರಿನಲ್ಲಿ ನಿಭಾಯಿಸಬಹುದು. ನಿಜ, ಆದರೆ ಗಿಯರ್ ಜಾರಿಕೆಗೆ ಮದ್ದು? ಚಡಾವು ಏರುವಾಗ ಚುಕ್ಕಾಣಿ ಚಕ್ರದ ಮೇಲೆ ಬೀಳುವ ಒತ್ತಡ ಜಾಸ್ತಿ. ಆದ್ದರಿಂದ ಎರಡು ಕೈಗಳೂ ಅದರ ಮೇಲಿರುವುದು ಅಪೇಕ್ಷಣೀಯ. ಈ ಕಾರಣಕ್ಕಾಗಿ ಎರಡನೆಯ ಗಿಯರಿನಲ್ಲಿ ಹೋಗಲಾದೀತೇ? ಅತಿಯಾಗಿ ಕಾದು ಹೋಗುವ ಎಂಜಿನ್ ಯಾವ ಗಳಿಗೆಯಲ್ಲಿಯೂ ಸ್ಫೋಟಗೊಳ್ಳಬಹುದಾದ ಶಾಶ್ವತ ಅಪಾಯದೊಂದಿಗೆ ಸೆಣಸಾಟ. ಸರಿ, ಹಿಂದಿನಂತೆಯೇ ಎಡಗೈಯಲ್ಲಿ ಗಿಯರ್ ಸರಳು, ಬಲಗೈಯಲ್ಲಿ ಚುಕ್ಕಾಣಿ ಚಕ್ರ ಹಿಡಿದು, ಮೂರನೆಯ ಗಿಯರಿನಲ್ಲಿ ಬಂಡಿ ಚಾಲೂ ಮಾಡಿದೆ.

ಏರಿದೆವು, ಮಳೆ ತಾಡನೆಯನ್ನು ಲೆಕ್ಕಿಸದೆ ಏರಿದೆವು, ಎಂಜಿನ್ನಿನ ನಾದ ತಾರಕ್ಕೇರಿದಂತೆ ಕಾಡಿನ ಗುಹಾಂತರದಿಂದ ಅದರ ಪ್ರತಿಧ್ವನಿ ಭೀಕರವಾಗಿ ಅನುರಣಿಸಿದಂತೆ ಮೇಲೆ ಮೇಲೆ ಏರಿದೆವು. ಬಲಗಡೆಯ ಬರೆಗೆ ಹೆಟ್ಟದೆ, ಎಡಗಡೆಯ ಕೊರಕಲಿಗೆ ಬೀಳದೆ ಏರಿದೆವು. ಈಗ ಬಂದೇ ಬಂತು ಕೊನೆಯ ಇಪ್ಪತ್ತೈದು ಮೀಟರುಗಳ ಅಗ್ನಿಪರೀಕ್ಷಾ ಸ್ಥಳ. ಮೂರನೆಯ ಗಿಯರಿನಲ್ಲಿಯೇ ಮುಂದುವರಿಯುವುದೇ? ಇಲ್ಲ, ಎಂಜಿನ್ ಹುಯಿಲಿಡುತ್ತಿದೆ "ನಾನಿನ್ನು ಎಳೆಯಲಾರೆ." ಅದರ ಮೊರೆಯನ್ನು ಅಲಕ್ಷಿಸಿ "ಹೋಗಿಯೇ ಹೋಗು" ಎಂದು ವಿಧಿಸಲೇ? ಅದು ನಡು ಚಡಾವಿನಲ್ಲಿ ದುಡುಂ ಸಂಪು ಹೂಡಿ ನಿಂತೇ ಹೋದರೆ? ಒಡನೆ ಗಿಯರ್ ಪೆಟ್ಟಿಗೆ ಒಡೆದೇ ಹೋದೀತು, ಅಥವಾ ಕಾರ್ ಹಿಂದಕ್ಕೆ ದಡದಡನೆ ಧಾವಿಸೀತು. ದುರ್ಬಲ ಬಿರಿಗಳು ಈ ಹಿನ್ಸರಿತವನ್ನು ತಡೆಯಲಾರವು. "ನ್ಯೂಟನ್ ಮಹಾಶಯಾ! ನೀನು ದೂರದ ಇಂಗ್ಲೆಂಡಿನಲ್ಲಿ ಸತ್ತು ಹೋಗಿ ಎರಡು ಶತಮಾನಗಳೇ ಸಂದಿದ್ದರೂ ನಮ್ಮನ್ನು ಕಾಡಿನ ಈ ಸಂದಿನಲ್ಲಿ ಕೂಡ ಗೋಳು ಹುಯ್ದುಕೊಳ್ಳುವುದನ್ನು ಇನಿತೂ ಕಡಿಮೆ ಮಾಡಿಲ್ಲವಲ್ಲ!" ಎಂದು ಅವನಿಗೆ ಮನಸ್ವೀ ಶಾಪ ಹಾಕಿದೆ. ಯೋಚನೆಗೆ ಈಗ ಪುರುಸೊತ್ತಿಲ್ಲ. ಕ್ರಿಯೆ, ಅಧಿಕ ಕ್ರಿಯೆ, ಕಾರ್ ಮುಂದೆ ಹೋಗಲೇಬೇಕು. ಪರ್ವ ಬಿಂದುವನ್ನು ಉತ್ತರಿಸಲೇಬೇಕು. ಜಯ ಲಭಿಸಲೇಬೇಕು.

ಕ್ಲಚ್ ಒತ್ತಿದೆ. ಗಿಯರನ್ನು ಅದೇ ಕ್ಷಣ ತಟಸ್ಥ ಸ್ಥಾನಕ್ಕೆ ಎಳೆದೆ. ಕ್ಲಚ್ ಬಿಟ್ಟೆ, ಆಕ್ಸಿಲರೇಟರ್ ಒತ್ತಿದೆ. ಎಂಜಿನ್ ಬುಸ್ ಗುಂಯ್ ಎಂದಿತು. ಆಕ್ಸಿಲರೇಟರ್ ಬಿಟ್ಟೆ. ಕ್ಲಚ್ ಒತ್ತಿದೆ ಅದೇ ಕ್ಷಣ ಗಿಯರನ್ನು ಬಲಪ್ರಯೋಗಿಸಿ ಎರಡನೆಯ ಸ್ಥಾನಕ್ಕೆ ಎಳೆದೇ ಬಿಟ್ಟೆ. ನಿಧಾನವಾಗಿ ಕ್ಲಚ್ಚನ್ನು ಸಡಿಲಗೊಳಿಸುತ್ತ ಆಕ್ಸಿಲರೇಟರನ್ನು ಒತ್ತತೊಡಗಿದೆ. ಇವೆಲ್ಲ ಕ್ರಿಯೆಗಳೂ ನಡೆದು ಹೋದುದು ಸೆಕೆಂಡಿನ ಅಲ್ಪಾಂಶ ಅವಧಿಯಲ್ಲಿ. ಆ ವೇಳೆ ನಾನೇ ಗಿಯರ್, ನಾನೇ ಕ್ಲಚ್, ನಾನೇ ಆಕ್ಸಿಲರೇಟರ್. ನಾನೇ ಎಲ್ಲವೂ : "ಅಹಂ ಕ್ರತುರಹಂ ಯಜ್ಞ." ಒಮ್ಮೆ ಕಾರ್ ಹಿಂದೆ ಸರಿದಂತಾಯಿತು, ದೇವರೇ ಗತಿ (ಅಂದ ಹಾಗೇ ಶತನಾಸ್ತಿಕನಾದ ನಾನು ದೇವರೇ ಗತಿ ಎಂದು ಮರೆತೂ ಅನ್ನುವಂತಿಲ್ಲ!). ಬಲಗಡೆಗೆ

ಹೋಗಿ ಬರೆಗೆ ಬಡಿದು ನಿಲ್ಲಲಿ, ಎಡಗಡೆಗೆ ಸಾಗಿ ದರೆಗೆ ಬಿದ್ದು ನುಚ್ಚುನುರಿ ಆಗುವುದಕ್ಕಿಂತ ಎಂದು ಬಗೆದು ಚುಕ್ಕಾಣಿಚಕ್ರವನ್ನು ಬಲಗಡೆಗೆ ತಿರುಗಿಸಿದೆ. ಹಿಲ್ ಮ್ಯಾನ್ ಕೈಕೊಡಲಿಲ್ಲ. ಹಸ್ತಾಲಿಂಗನ ನೀಡಿತು! ಎಂಜಿನ್ ಎರಡನೆಯ ಗಿಯರನ್ನು ಒಪ್ಪಿಕೊಂಡು ಘೋರ ಗರ್ಜನೆ ಸಹಿತ ಎಳೆಯತೊಡಗಿತು. 'ನೀರೊಳಗಿರ್ದು ಬೆಮರ್ದ' ನಾನು ಆ ಕ್ಷಣ ಗಾಳಿಯಂತೆ ಹಗುರಾದೆ, ಮಿಂಚಿನಂತೆ ಚುರುಕಾದೆ, ಮಳೆ ಹನಿಯಂತೆ ಮುಕ್ತನಾದೆ. ಚಡಾವಿನ ಕೊನೆಯ ಮಜಲನ್ನು ಕಾರ್ ಯಶಸ್ವಿಯಾಗಿ ಉತ್ತರಿಸಿ ತಿರುಗಾಸಿನಲ್ಲಿ ರಷ್ಯದ ಬ್ಯಾಲೇ ನರ್ತಕಿಯಂತೆ ಬಳುಕಿ ತಿರುಗಿ ಮುಂದಿನ ಇಳಿಜಾರು ಹಾದಿಯಲ್ಲಿ ಓಡಲು ಸಿದ್ಧವಾಗಿತ್ತು.

ಅಲ್ಲಿ ಅದನ್ನು ಕ್ಷಣಕಾಲ ನಿಲ್ಲಿಸಿಕೊಂಡು, ಆದರೆ ಎಂಜಿನ್ನನ್ನು ಚಾಲೂ ಸ್ಥಿತಿಯಲ್ಲಿಯೇ ಇಟ್ಟುಕೊಂಡು, ಕೈ ಮುಸುಡು ಒರೆಸಿಕೊಂಡು ನಿಡು ಉಸಿರು ಎಳೆದುಕೊಂಡು, "ಹೋಗಿನ್ನು ಸಲೀಸಾಗಿ" ಎಂದು ಹಿಲ್ ಮ್ಯಾನನಿಗೆ ಅತ್ಮೀಯತೆಯಿಂದ ಉಸುರಿದೆ. ಅಚ್ಚರಿ ಎಂದರೆ ಈಗ ತೇಜಿ ಮಳೆ ಪೂರ್ತಿ ಬಂದ್ ಆಗಿತ್ತು. ಕಾಡಿನ ಹೆಮ್ಮರಗಳ ಕೊಂಬೆ ರೆಂಬೆ ಎಳೆ ಹೂಗಳ ಮೇಲೆ ಒಟ್ಟಯಿಸಿದ್ದ ನೀರು ತೊಟ್ಟು ತೊಟ್ಟಾಗಿ ಜಿನುಗುತ್ತಿತ್ತು. ನಮ್ಮ ಟಾರ್ಚಿನ ಪ್ರಕಾಶದಲ್ಲಿ (ಈಗದು ಅತಿ ಪ್ರಖರವಾಗಿತ್ತು) ಆ ನೀರ ಹನಿಗಳು ತೋರ ಬೆಂಕಿ ಉಂಡೆಗಳಂತೆ ಪ್ರಜ್ವಲಿಸುತ್ತಿದ್ದುವು. ಮೋಡಗಳ ಎಡೆಯಿಂದ ತಿಂಗಳ ಬೆಳಕು ಮಂದವಾಗಿ ಒಸರಿ ಗಿಡಮರಗಳ ಎಲೆ ಅಡರುಗಳ ಜರಡಿ ಮೂಲಕ ಸೋರಿ ಅಲ್ಲೆಲ್ಲ ತೆಳು ಅರಿಸಿನ ಹುಡಿ ಚೇಪಿರುವಂತೆ ತೋರುತ್ತಿತ್ತು. ಕೇವಲ ಒಂದು ಗಳಿಗೆ ಹಿಂದೆ ಕಾಡಿನ ಏಕಾಂಗೀ ಭೀಕರತೆಯಿಂದ ಭೀತನಾಗಿದ್ದೆ. ಈಗಾದರೋ ಅದರ ರುದ್ರರಮಣೀಯತೆಯಿಂದ ಉಲ್ಲಸಿತನಾಗಿದ್ದೇನೆ.

ಆದರೆ ನಾರಾಯಣ? 'ನಾರಾಯಣಂ ನಮಸ್ಕೃತ್ಯಂ...'

ಕಾರು ದೌಡಾಯಿಸುತ್ತಿದೆ. ಅಪ್ಪುಕಳದ ಶಹರು ಎರಡಂಗಡಿಗಳ ಹಿರಿ ಸಾಲು. ಇನ್ನೇನು ಎದುರಗಲಿದೆ. ಅಲ್ಲಿಂದ ಮುಂದೆ ರಾಜಮಾರ್ಗ ಬಿಟ್ಟು ಎಡಕ್ಕೆ ಹೊಡೆದುಕೊಂಡು ಕೆಸರು ರಾಡಿ ಸೆಗಣಿ ರೊಚ್ಚೆ ತುಂಬಿರುವ ಹಳ್ಳಿಹಾದಿಯಲ್ಲಿ ನಮ್ಮ ಜಮೀನಿಗೆ ಹೋಗಬೇಕು. ಅಲ್ಲಿ ಕಾರ್ ಓಡೀತೇ? ಹೂತು ಹೋಗದೇ? ಮೊಸಳೆ ಹಿಡಿದೆಳೆದಾಗ ಕರಿಯ ಮೊರೆ ಕೇಳಿ ಹರಿಬಂದು ರಕ್ಷಣೆ ನೀಡಿದನಂತೆ. ಆದರೆ ಕಲಿಯುಗದಲ್ಲಿ ಅದೆಲ್ಲ ನಡೆದೀತೇ? ದಾಸವಾಣಿ ಮೊಳಗಿತು, "ಎಲ್ಲಿರುವನೋ ಹರಿ ಎಂಬ ಸಂಶಯವೇಕೆ?" ಹೀಗೆ ಎಣಿಕೆ ಹಾಕುತ್ತಿದ್ದಂತೆಯೇ ಅಪ್ಪುಕಳದ ಶಹರು ಬಂದೇ ಬಂತು. ಆ ತನಕ, ಸುಮಾರು ಒಂದೂವರೆ ತಾಸು, ಎಡೆಬಿಡದೆ ಮಿಡಿದಿದ್ದ ಎಂಜಿನ್ ಅಲ್ಲಿ ಇದ್ದಕ್ಕಿದ್ದಂತೆ ನಿಶ್ಶಬ್ದವಾಯಿತು. ಇನ್ನೂ ಇಳಿಜಾರೇ ಇದ್ದುದರಿಂದ ಜಟ್ಕಾ ಸ್ಟಾರ್ಟ್ ಪ್ರಯತ್ನಿಸಿದೆ. ಸ್ಟಾರ್ಟರ್ ಎಳೆದೆ. ಚೋಕ್ ಕೊಟ್ಟೆ, ಸ್ವಿಚ್ ಕೀಲಿ ಮೇಲೆ ಕೈ ಪರಡಿದೆ. ಆದರೆ ಎಂಜಿನ್ನಿಗೆ ಜೀವ ಬರಲಿಲ್ಲ. ಕಾರಿನಿಂದ ಇಳಿದೆ. ನನಗೆ ಸೊಂಟವಿದೆ, ಮಂಡಿಕೀಲುಗಳೂ ಇವೆ ಎಂದು ಚೆನ್ನಾಗಿ ತಿವಿದು ಹೇಳುವಂತೆ ಅವು ನೋಯುತ್ತಿದ್ದುವು. ಕಾರಿನ ಬಾನೆಟ್ ಮುಟ್ಟಿದೆ. ಅದು ಕಾದು ಕರಗಲು ಸನ್ನದ್ಧವಾಗಿದ್ದ ಕಬ್ಬಿಣವಾಗಿತ್ತು. ಮಳೆಯ ನಿರಂತರ ಅಭಿಷೇಕವೂ ಅದರ ಕಾವನ್ನು ತಗ್ಗಿಸಿರಲಿಲ್ಲ.

ಉಳಿದಿದ್ದ ದೂರ ಕೇವಲ ಅರ್ಧ ಕಿಮೀ ಮಾತ್ರ. ನಡೆದೇ ಹೋದೆವು. ಅಲ್ಲಿಯ ವಠಾರದಲ್ಲಿ ನಾರಾಯಣ ಮಲಗಿದ್ದರೆ ಸರಿ, ಇಲ್ಲವಾದರೆ? ಈ ಯೋಚನೆ ಬೇಕಾಗಲಿಲ್ಲ. ನಾಯಿಗಳು ಬಗುಳಿದುವು, ಕೋಳಿಗಳು ಕೊಕ್ಕೊಕ್ಕೊಕ್ಕೋ ಕೂಗಿ ರಂಪ ಎಬ್ಬಿಸಿದುವು, ಹಂದಿಗಳು ಡುರುಕುತ್ತ ಎಡ್ಡ ತಿಡ್ಡ ಓಡಿದುವು. ಕಾಲ್ನಡೆಗಳು ಘೂಕಾರ ಮಾಡಿ ಮಲೆತುವು. ಒಕ್ಕಲಿನ ಗಂಡಸರು ಹೆಂಗಸರು ಲಾಂದ್ರ ಹಿಡಿದು ಹೊರಗೆ ಬಂದು ಬೊಬ್ಬೆ ಅಬ್ಬರಿಸಿದರು. ಯಾರೋ ಕಳ್ಳರು ಹಂದಿ ಕೋಳಿಗಳನ್ನು ಲಪಟಾಯಿಸಲು ಬಂದಿರಬೇಕೆಂದು ಅವರ ಊಹೆ. ಚಿಕ್ಕಮ್ಮ ಕೂಗಿ ಹೇಳಿದರು ತಾವು ಯಾರೆಂದು.

"ಓ ಅಮ್ಮಾ ನೀವಾ? ಏನು ಈ ಹೊತ್ತಿನಲ್ಲಿ? ಮನೇಲೆಲ್ಲಾ ಚೆನ್ನಾಗಿದ್ದಾರಾ?"

"ನಮ್ಮ ನಾರಾಯಣಸ್ವಾಮೀ. . .?"

ಕೂರಲಗಿನ ಮೇಲೆ ನಿಂತಿದ್ದೇವೆ. ಯಶಸ್ವಿಯಾಗಿ ದಾಟುತ್ತೇವೋ? ಸಿಗಿದು ಉದುರುತ್ತೇವೋ? ಒಕ್ಕಲಿನವರ ಉತ್ತರವನ್ನು ಅವಲಂಬಿಸಿದೆ.

"ನಾರಾಯಣಸ್ವಾಮೀ? ಬಂಗ್ಲೆಯೊಳಗೆ ಮಲಗಿದ್ದಾರಲ್ಲ!"

ಅಳುವ ಕಡಲೊಳು ತೇಲಿ ಬರುತಲಿದೆ
ನಗೆಯ ಹಾಯಿದೋಣಿ
ಆಶೆ ಬೂದಿ ತಳದಲ್ಲು ಕೆರಳುತಿವೆ
ಕಿಡಿಗಳೆನಿತೊ ಮರಳಿ
ಮುರಿದು ಬಿದ್ದ ಮನದ ಕೊರಡೊಳೂ
ಹೂವು ಹೂವು ಅರಳಿ — ಗೋಪಾಲಕೃಷ್ಣ ಅಡಿಗ

೧೯೬೪ರ ಬೇಸಗೆಯಲ್ಲಿ ನಡೆದ ಘಟನೆ

# ನ್ಯಾಯ ಪರಿಪಾಲನೆ
(ಎಂಟನೇ ಕತೆ –೧೮೫೧)

ಲಿಂಗರಾಜನ ವಿಷಯವನ್ನು ಹಿಂದೊಮ್ಮೆ (ಪಂಜರದ ಗಿಳಿ) ಹೇಳಲಾಗಿದೆ. ಒಲಿದರೆ ಶಂಕರನೂ ಮುನಿದರೆ ಭಯಂಕರನೂ ಆಗಿದ್ದ ಲಿಂಗರಾಜನು ಅತಿ ಚಿಕ್ಕ ಪ್ರಾಯದಲ್ಲಿ ಕೊಡಗಿನ ಸಿಂಹಾಸವನ್ನೇರಿದ್ದನು. ಅವನಿಗೆ ಆಗ ಇನ್ನೂ ಹದಿನೈದು ವರ್ಷ ತುಂಬಿರಲಿಲ್ಲ ಆಗಲೇ ಅವನ ತಂದೆ ವೀರರಾಜನು ಶಿವಾಧೀನನಾದನು, ರಾಜಕುಟುಂಬ ದುಃಖಸಾಗರದಲ್ಲಿ ಮುಳುಗಿತ್ತು. ನಡುನೀರಿನಲ್ಲಿ ಬಿರುಗಾಳಿಯ ತೀವ್ರತೆ ಏರಿದ್ದಾಗ ಹಡಗಿನ ಕೂವೆಮರ ಒಡೆಯಿತು. ಅನೇಕ ಸಾಮಂತರಾಜರು ವೀರರಾಜನ ಕರ್ಮಾಂತರಗಳಿಗೆ ಬಂದು ಭಾವೀ ರಾಜನಾದ ಕಿರಿಯ ಲಿಂಗರಾಜನಿಗೆ ತಮ್ಮ ಗೌರವ, ವಿಧೇಯತನಗಳನ್ನು ಸಲ್ಲಿಸಿ ಮರಳಿದರು. ಆದರೆ ಆ ಔಪಚಾರಿಕವಾದ ವಿನಯ ಪ್ರದರ್ಶನಗಳು ಅವರ ಹಿಂದೆಯೇ ತೆರಳಿದುವು. ಕೆಲವು ಉದ್ಧತ ಸಾಮಂತ ಭೂಪಾಲರು ಈ ಒಂದು ಮರ್ಯಾದೆಯನ್ನೂ ತೋರಿಸಲಿಲ್ಲ. ವೀರರಾಜನ ಮರಣವಾರ್ತೆ ಕೇಳಿದಾಗಲೇ ತಾವೇ ಅರಸರೆಂದು ಸಾರಿ ಹಾಗೆ ವರ್ತಿಸತೊಡಗಿದರು. ರಾಜಕುಲವನ್ನು ಸರಿಯಾದ ದಾರಿಯಲ್ಲಿ ನಡೆಯಿಸುವ ಧೀರರು ಯಾರೂ ಇರಲಿಲ್ಲವೆನ್ನುವಂತೆ ತೋರಿತು. ಅನುಭವಿಗಳಾದ ಮಂತ್ರಿಗಳು, ವೃದ್ಧರು ಇರಲಿಲ್ಲ. ರಾಜ್ಯದ ರಕ್ಷಣೆ ಮತ್ತು ಆಡಳಿತ ಎಳೆ ಹರೆಯದ ಲಿಂಗರಾಜನ ಮೇಲೆ ಬಿದ್ದುವು.

ಆ ಕಾಲದಲ್ಲಿ ಕೊಡಗು ಸಂಸ್ಥಾನವು ಮೈಸೂರು ದೇಶದ ಹಲವು ಜಿಲ್ಲೆಗಳಿಂದಲೂ ನೇತ್ರಾವತೀ ನದಿಯವರೆಗೆ ವ್ಯಾಪಿಸಿದ್ದ ದಕ್ಷಿಣ ಕನ್ನಡ ಜಿಲ್ಲೆಯಿಂದಲೂ ಕೂಡಿದ್ದಿತು. ವೀರರಾಜನು ಮೃತನಾದೊಡನೆಯೇ ಮೈಸೂರಿನ ಮತ್ತು ಕನ್ನಡ ಜಿಲ್ಲೆಯ ಆಶ್ರಿತ ರಾಜ್ಯಗಳು ಸ್ವತಂತ್ರವಾದುವು. ಕೊಡಗು ದೇಶದ ಪೂರ್ವ ಗಡಿಯಲ್ಲಿ ಮೈಸೂರಿನವರೂ ಪಶ್ಚಿಮದ ಕೊನೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪಾಳೆಯಗಾರರೂ ಪ್ರಬಲರಾಗಿ ದಂಗೆಗಳನ್ನು ಪ್ರೋತ್ಸಾಹಿಸುತ್ತಿದ್ದರು. ಮಡಿಕೇರಿಯ ಹಲವಾರು ರಾಜಭಕ್ತರು ರಾಜಕುಲವೇ ಅಳಿದು ಹೋಗುವುದೋ ಎಂದು ಹೆದರುತ್ತಿದ್ದರು. ರಾಜಕುಲದ ಅಭ್ಯುದಯಕ್ಕಾಗಿ ಲಿಂಗರಾಜನ ಕ್ಷೇಮಕ್ಕಾಗಿ ನಿತ್ಯವೂ ರಾಜಭಕ್ತರ ಮನೆಗಳಲ್ಲಿ ಪೂಜೆ ಪುರಸ್ಕಾರ ಪ್ರಾರ್ಥನೆಗಳು ನಡೆದುವು. ದೇವಾಲಯಗಳಲ್ಲಿ ಮಹಾಭಿಷೇಕಗಳನ್ನು ಏರ್ಪಡಿಸಲಾಯಿತು. ರಾಜಮಾತೆ – ದಿವಂಗತ ವೀರರಾಜನ ಮಡದಿ ಮಗನ ಕ್ಷೇಮಚಿಂತನೆಯಲ್ಲಿ ಕೊರಗುತ್ತಿದ್ದಳು. ಅನುಭವಿಯೂ ತೀಕ್ಷ್ಣಮತಿಯೂ ಆದ ಆ ಮಹಾಸತಿಯು ಕರಣಿಕ ಸುಬ್ಬಯ್ಯ ಮುಂತಾದ ರಾಜಕಾರಣಿಗಳ ಸಹಾಯ ಸಹಕಾರಗಳಿಂದ ಕೊಡಗನ್ನು ಸುರಕ್ಷಿತವಾಗಿಸಲು ಮುಂದಾದಳು. ಲಿಂಗರಾಜನು ಕಿರಿಯವನಾದರೂ ಆ ಪ್ರಾಯದಲ್ಲಿಯೇ ರಾಜಯೋಗ್ಯ ಶಿಕ್ಷಣವನ್ನು ಪಡೆದಿದ್ದನು. ಶಸ್ತ್ರಕಲೆ, ಸೈನ್ಯ ನಿರ್ವಹಣ ವಿದ್ಯೆ, ರಾಜ್ಯಭಾರ ಕ್ರಮ ಮುಂತಾದುವುಗಳಲ್ಲಿ ತನ್ನ ಪ್ರೀತಿಯ ಪಿತೃವರ್ಯರ ನೇತೃತ್ವದಲ್ಲಿ ಪರಿಶ್ರಮಿಸಿ ಸಿದ್ಧಿಪಡೆದಿದ್ದನು. ತಂದೆಯ ಅಕಸ್ಮಾತ್ ಮರಣ, ಆ ಕಾರಣದಿಂದ ಉಂಟಾದ ದುಃಖ ಮತ್ತು ಶೂನ್ಯತೆಗಳಿಲ್ಲದಿದ್ದರೆ ಲಿಂಗರಾಜನು ಇಡಿಯ ವಿಶಾಲ ಕೊಡಗು ರಾಜ್ಯವನ್ನು ಪಾಲಿಸುವಷ್ಟು ದಕ್ಷತೆ ಚಾಣಾಕ್ಷತೆಗಳಿಂದ ಕೂಡಿದವನಾಗಿದ್ದನು. ವೀರಮಾತೆಯ ಮತ್ತು ರಾಜಹಿತೈಷಿಗಳ ಸಹಾಯದಿಂದ ಲಿಂಗರಾಜನು ಮೊದಲು ಕೊಡಗು ದೇಶದ ರಕ್ಷಣೆ ಭದ್ರತೆಗಳನ್ನು ನಿರ್ವಹಿಸಲು ಮುಂದಾದನು.

ಲಿಂಗರಾಜನು ದಕ್ಷನೂ ಸಮರ್ಥನೂ ಆದ ಪ್ರಭು ಎಂದು ಅರಿವಾದೊಡನೆಯೇ ಅವನ ಸುತ್ತಲೂ ಅನೇಕ ಭಕ್ತರು ಜಮಾಯಿಸಿದರು. ಸೈನ್ಯವು ನವೋತ್ತೇಜನಭರಿತವಾಗಿ ಎಂತಹ ಶತ್ರುವನ್ನು ಎದುರಿಸಲೂ ಶಕ್ತವಾಯಿತು. ಕ್ರಮೇಣ ಲಿಂಗರಾಜನು ಕೊಡಗು ದೇಶದಲ್ಲಿ ಶಾಂತಿಯನ್ನೂ ಸುವ್ಯವಸ್ಥಿತವಾದ ಆಡಳಿತೆಯನ್ನೂ ಸ್ಥಾಪಿಸಿದನು. ರಾಜಕುಲದ ಗೌರವ ಪುನಃ ಶಿಖರಾಭಿಮುಖವಾಗಿ ಏರತೊಡಗಿತು. ಇವುಗಳನ್ನು ಯಶಸ್ವಿಯಾಗಿ ನಿರ್ವಹಿಸುವಾಗ ರಾಜನಿಗೆ ಇಪ್ಪತ್ತು ವರ್ಷಗಳೂ ತುಂಬಿರಲಿಲ್ಲ ಎನ್ನುವುದನ್ನು ಗಮನಿಸುವಾಗ ಅವನು ಸಾಧಿಸಿದುದು ಮಹಾಕಾರ್ಯ ಭೀಮಕಾರ್ಯ ಎಂದು ಹೇಳಲೇಬೇಕು. ಮುಂದೆ ಒಂದೆರಡು ವರ್ಷಗಳಲ್ಲಿಯೇ ಅವನು ದಕ್ಷಿಣ ಕನ್ನಡ ಜಿಲ್ಲೆಯ ಮತ್ತು ಮೈಸೂರು ಸರಹದ್ದಿನ ಪಾಳೆಯಗಾರರನ್ನು ಪುನಃ ಅಂಕೆಯಲ್ಲಿ ತಂದನು. ಅವರ ವಿರುದ್ಧ ಘೋರ ಕದನವೆಸಗಬೇಕಾಯಿತು. ಮೈಸೂರು ಸರಹದ್ದಿನ ಪಾಳೆಯಗಾರ ಸುಲಭವಾಗಿ ವಶವಾದನು. ಆದರೆ ದಕ್ಷಿಣ ಕನ್ನಡ ಜಿಲ್ಲೆಯವರು ಹಾಗಾಗಲಿಲ್ಲ. ಅಲ್ಲಿಯ ನಾಲ್ಕೈದು ಪಾಳೆಯಗಾರರು ಒಂದುಗೂಡಿ ಲಿಂಗರಾಜನ ಮೇಲೆ ತಾವಾಗಿಯೇ ಕತ್ತಿಗಟ್ಟಿದರು. ಕೊಡಗು ದೇಶವನ್ನು ಸ್ವಾಹಾ ಮಾಡಬೇಕೆಂದು ಅವರ ಹಂಬಲವಾಗಿತ್ತು. ಆದರೆ ಅದು ನುಂಗಲಾರದ ತುತ್ತಾಗಿ ಅವರ ಗಂಟಲಿನಲ್ಲಿ ಉಳಿದು ಅವರ ಮರಣವನ್ನು ತಂದಿತು. ಹೀಗೆ ಪ್ರಬಲ ಯುದ್ಧಾನಂತರ ದಕ್ಷಿಣ ಕನ್ನಡ ಪುನಃ ಕೊಡಗು ರಾಜನ ಛತ್ರ ಛಾಯೆಗೆ ಅಧೀನವಾಯಿತು.

ಲಿಂಗರಾಜನ ಈ ದಿಗ್ವಿಜಯ ಯಾತ್ರೆಗಳಲ್ಲಿ ಅವನ ಬಲಗೈ ಬಂಟನಂತಿದ್ದವನು ಬಿಟ್ಟಂಗಾಲದ ಕುಟ್ಟಪ್ಪ. ಸಾಮಾನ್ಯ ಸಿಪಾಯಿಯಾಗಿ ಸೇರಿದ್ದ ಕುಟ್ಟಪ್ಪನು ತನ್ನ ಪರಾಕ್ರಮ, ದುರೀಣತ್ವ, ರಾಜನಿಷ್ಠೆಗಳಿಂದಲೇ ರಾಜನ ದೃಷ್ಟಿಯನ್ನು ಸೆಳೆದ ಗಣ್ಯವ್ಯಕ್ತಿಯಾದನು. ಮೈಸೂರು ಪಾಳೆಯಗಾರನ ವಿರುದ್ಧದ ಹೋರಾಟದಲ್ಲಿ ಒಂದು ಪಡೆಯ ಮುಂದಾಳಾಗಿ ಕುಟ್ಟಪ್ಪನು ಆ ಪಾಳೆಯಗಾರನಿಗೆ ವಿಪರೀತ ನಷ್ಟವನ್ನುಂಟುಮಾಡಿದ್ದನು. ಗೊರಿಲ್ಲಯುದ್ಧ, ಈ ಹೆಸರಿನಿಂದ ತಿಳಿದಿರದಿದ್ದ ಆ ದಿನಗಳಂದು ಕುಟ್ಟಪ್ಪನ ಪಡೆ ಗೊರಿಲ್ಲ ಯುದ್ಧ ಮಾಡಿತು. ಇದೇ ಯುದ್ಧ ಕ್ರಮದಿಂದ ಕುಟ್ಟಪ್ಪನು ಕನ್ನಡ ಜಿಲ್ಲೆಯ ಪಾಳೆಯಗಾರರಲ್ಲಿ ಒಬ್ಬನನ್ನು ಸದೆಬಡಿದನು. ಸುಳ್ಯದ ಸಮೀಪ ಘೋರ ಕದನ ಜರಗಲು ಅಣಿಯಾಗುತ್ತಿತ್ತು. ಕುಟ್ಟಪ್ಪನು ದೂರದರ್ಶಿತ್ವದಿಂದ, ಸ್ವಸಾಮರ್ಥ್ಯದಿಂದ ತನ್ನ ಪಡೆಯನ್ನು ಕಡಮಕಲ್ಲು

ದಾರಿಯಾಗಿ ತೆಗೆದುಕೊಂಡು ಹೋಗಿ ಶತ್ರುವನ್ನು ಅಪರಾತ್ರಿಯಲ್ಲಿ ಹಿಂದಿನಿಂತ ನುಸುಳಿ ಇರಿದನು, ತರಿದು ಬಿಸುಟನು. ಹೀಗೆ ಧೃತಿಗೆಟ್ಟ ಶತ್ರುವನ್ನೂ ಶತ್ರುಸೈನ್ಯವನ್ನೂ ಸದೆಬಡಿದು ಅಟ್ಟಿ ಸೆರೆ ಹಿಡಿಯುವುದು ಲಿಂಗರಾಜನಿಗೆ ಸುಲಭವಾಯಿತು.

"ಕುಟ್ಟಪ್ಪನಂತಹ ಸ್ವಾಮಿಭಕ್ತ ಸಾಮರ್ಥ್ಯಪೂರಿತ ಸೇನಾನಾಯಕನಿಲ್ಲದಿದ್ದರೆ ಲಿಂಗರಾಜನು ಹೆಸರಿಲ್ಲದಾಗುತ್ತಿದನು" ಎಂದು ರಾಜನು ಸ್ವತಃ ಮುಕ್ತಕಂಠದಿಂದ ಆನಂದೋದ್ಗಾರವೆತ್ತಿದಾಗ ಕುಟ್ಟಪ್ಪನು ಮೌನದಿಂದ ವಿಧೇಯತೆಯಿಂದ ತಲೆತಗ್ಗಿಸಿದನು. ರಣಭೀಷಣನಾದ ಶತ್ರುಭಯಂಕರನಾದ ಕುಟ್ಟಪ್ಪನು ರಾಜನ ಮೆಚ್ಚಿನ ಬಂಟನಾದನು.

ದಕ್ಷಿಣ ಕನ್ನಡ ಜಿಲ್ಲೆ ಸಾಮಂತರಾಜ್ಯವನ್ನು ಶತ್ರುರಹಿತವನ್ನಾಗಿ ಮಾಡಲು ರಾಜನಿಗೆ ಕುಟ್ಟಪ್ಪನೇ ನೆರವಾದನು. ಆ ಪ್ರದೇಶದಲ್ಲಿಯೂ ಸುವ್ಯವಸ್ಥಿತವಾದ ಆಡಳಿತೆಯು ಏರ್ಪಟ್ಟಿತು. ಮುಂದೆ ಎಂದೆಂದೂ ದಂಗೆಕೋರರು ತಲೆಯೆತ್ತದಂತೆ ಮಾಡಲು ಬಲಿಷ್ಠನಾದ ಕುಟ್ಟಪ್ಪನನ್ನೇ ರಾಜನು ದಕ್ಷಿಣ ಕನ್ನಡ ಜಿಲ್ಲೆಯ ನಾಯಕನನ್ನಾಗಿ ನೇಮಿಸಿದನು.

"ಕುಟ್ಟಪ್ಪಾ! ನಿನ್ನ ರಾಜನಿಷ್ಠೆಗೆ ಯೋಗ್ಯತೆಗೆ ನಾನು ಕೊಡಬಹುದಾದ ದೊಡ್ಡ ಬಹುಮಾನವಿದು. ನೀನು ರಣರಂಗದಲ್ಲಿ ಎಂತಹ ಭೀಕರ ಕಡುಗಲಿಯೋ ಅಷ್ಟೇ ಕರುಣಾಮಯ ಮೂರ್ತಿಯಾಗಿ ಈ ಪ್ರದೇಶದ ಆಡಳಿತೆಯನ್ನು ನಿರ್ವಹಿಸು. ನಿನ್ನಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ. ಕೊಡಗು ರಾಜಕುಲದವರ ಘನತೆ ಮರ್ಯಾದೆಗಳು ವರ್ಧಿಸುವಂತೆ ನ್ಯಾಯ ಪರಿಪಾಲನೆಮಾಡು. ರಾಜ್ಯಭಾರ ಕಾಯಕದಲ್ಲಿ ದಕ್ಷತೆ ನ್ಯಾಯಪಕ್ಷಪಾತತೆ ಸಹಾನುಭೂತಿ ಇರಲಿ. ನಿನ್ನ ಸೈನಿಕರ ಹಿತವೇ ನಿನ್ನ ಹಿತವೆಂದು ನೀನು ಹೇಗೆ ಪರಿಗಣಿಸಿದೆಯೋ ಹಾಗೆ ಇನ್ನು ಮುಂದೆ ನಿನ್ನ ಜನರ ಹಿತವೇ ನಿನ್ನ ಹಿತವೆಂದು ನೀನು ಭಾವಿಸಿ ರಾಜ್ಯಪರಿಪಾಲನೆ ಮಾಡು. ಸತ್ಯ ಮತ್ತು ಧರ್ಮದ ಋಜುಮಾರ್ಗವನ್ನು ಎಂದೂ ನಿರಾಕರಿಸಬೇಡ. ಈ ಕಾರ್ಯವನ್ನು ನೀನು ಯಶಸ್ವಿಯಾಗಿ ಪರಮೇಶ್ವರನು ಮೆಚ್ಚುವಂತೆ ನೆರವೇರಿಸು" ಎಂದು ಲಿಂಗರಾಜನು ಹರಸಿದನು.

ಕಿರಿಯ ಲಿಂಗರಾಜನಲ್ಲಿ ಎಂತಹ ಉನ್ನತ, ಉದಾತ್ತ ಗುಣಗಳ ಸಂಕಲನ! ಎಂತಹ ಔದಾರ್ಯ! ಔನ್ನತ್ಯದಲ್ಲಿ ಔದಾರ್ಯವು ಆದರ್ಶ.
ಕುಟ್ಟಪ್ಪನು ತಲೆಬಾಗಿ ವಂದಿಸಿ ಆನಂದಪುಳಕಿತನಾಗಿ ಪ್ರಭುವಿನ ಆಜ್ಞೆಯನ್ನು ಶಿರಸಾವಹಿಸಿದನು. ಅಂದಿನಿಂದ ಬಿಟ್ಟಂಗಾಲದ ಕುಟ್ಟಪ್ಪನು ಪಾಳೆಯಗಾರ ಕುಟ್ಟಪ್ಪನಾದನು. ಲಿಂಗರಾಜನಿಗೆ ಕುಟ್ಟಪ್ಪನಾಗಿಯೂ ಇತರರಿಗೆ ಕುಟ್ಟರಸನಾಗಿಯೂ ಆ ಧೀರ ಸೈನಿಕನು ವಿಜೃಂಭಿಸಿದನು. ಕುಟ್ಟಪ್ಪನನ್ನು ದಕ್ಷಿಣ ಕನ್ನಡದ ಪಾಳೆಯಗಾರನನ್ನಾಗಿ ಪುತ್ತೂರಿನಲ್ಲಿ ಪ್ರತಿಷ್ಠಾಪನೆ ಮಾಡಿ ಲಿಂಗರಾಜನು ಮಡಿಕೇರಿಗೆ ಮರಳಿದನು. ಕುಟ್ಟಪ್ಪನು ಸಂಪಾಜೆಯವರೆಗೂ ರಾಜನೊಡನೆ ಬಂದು ಅವನನ್ನು ಬೀಳ್ಕೊಟ್ಟನು. ನೆಚ್ಚಿನ ಪ್ರಭು, ಪ್ರೀತಿಯ ರಾಜನು ಮಡಿಕೇರಿಯ ಘಟ್ಟವೇರಿಹೋದಂತೆ ಕುಟ್ಟಪ್ಪನಿಗೆ ಗಂಟಲು ತುಂಬಿಬಂದಿತು. ಆ ಒಂದು ಕ್ಷಣ ಅವನು ಸೇನಾನಾಯಕ ಕುಟ್ಟಪ್ಪನಾಗಿರಲಿಲ್ಲ, ಮಾನವ ಹೃದಯಿ ಕುಟ್ಟಪ್ಪನಾಗಿದ್ದನು.

ಮುಂದಿನ ಗಳಿಗೆಯಿಂದ ರಾಜ್ಯಭಾರ ಕಾರ್ಯವು ಪ್ರಾರಂಭವಾಯಿತು. ಕುಟ್ಟರಸನು ಬಲವಾಗಿ ಭದ್ರವಾಗಿ ಪುತ್ತೂರಿನಲ್ಲಿ ತಳವೂರಿದನು. ಹಳೆಯ ದಂಗೆಕೋರ ಪಾಳೆಯಗಾರರನ್ನು ಸದೆಬಡಿದಾಗಿದ್ದಿತು. ಆದರೆ ಅವರ ಅನುಯಾಯಿಗಳೂ ಅವರ ಪರ ಸಹಾನುಭೂತಿ ಇರುವವರೂ ಹೇರಳವಾಗಿ ಕನ್ನಡ ಜಿಲ್ಲೆಯಲ್ಲಿ ವ್ಯಾಪಿಸಿದ್ದರು. ಈ ತುಂಡು ಪಾಳೆಯಗಾರರನ್ನು ನಾಶಪಡಿಸದೆ ವಿಧಿಯಿರಲಿಲ್ಲ. ಕಾಡು ನೆಲಸಮಮಾಡಿದ ಮೇಲೆ ಉಳಿಯುವ ಮೋಟುಗಳಂತೆ ಅವರಿದ್ದರು. ವೈರಿವನವು ನಾಶವಾಯಿತು. ಆದರೆ ಕಾಲಿಗೆ ಅಲ್ಲಲ್ಲಿ ತಗಲುವ ಗುತ್ತಿಗಳನ್ನು ತೆಗೆಯುವುದು ಅಷ್ಟೇ ಶ್ರಮಸಾಧ್ಯ ಕಾರ್ಯವಾಯಿತು. ಕುಟ್ಟರಸನು ಈ ರೀತಿಯ ಮೊಂಡು ಶತ್ರುಗಳನ್ನು ಹಿಡಿಸಿ ಕೊಲ್ಲಿಸುವ ಕಾರ್ಯಕ್ರಮವನ್ನು ಪ್ರಾರಂಭಿಸಿದನು. ದಕ್ಷಿಣ ಕನ್ನಡ ಜಿಲ್ಲೆಯಿಡೀ ಕುಟ್ಟರಸನ ಆಪ್ತರು ಅವರ ಹಿಂಬಾಲಕರು ವ್ಯಾಪಿಸಿದರು. ಗೂಢಚಾರರು ಎಲ್ಲ ಕಡೆಗಳಲ್ಲಿಯೂ ಗುಪ್ತವಾಗಿ ಹರಡಿದರು. ಅನೇಕ ಸಂಶಯಾಸ್ಪದವಾದ ಬೀಡುಗಳ ಮೇಲೆ ಬಲಾತ್ಕಾರದಿಂದ ಆಕ್ರಮಣ ಮಾಡಿ ಅಲ್ಲಿಯ ಪತ್ರ ಮುಂತಾದವುಗಳನ್ನು ಶೋಧಿಸಲಾಯಿತು. ರಾಜದ್ರೋಹ ಯಾವ ಯಾವ ಸ್ಥಳದಲ್ಲಿ ಹೇಗೆ ಹುದುಗಿರುವುದು ಎಂದು ಕಂಡುಹಿಡಿಯುವುದು ಸಂಕೀರ್ಣ ಕಾರ್ಯ. ಹಳೆಯ ಪಾಳೇಗಾರರ ಪರವಾಗಿ ವಾದಿಸಿದವರ ಗುಟ್ಟು ಮಾತುಗಳನ್ನು ಗೂಢಚಾರರು ಮರೆಯಾಲಿಸಿ ಕೆಲವು ಸಲ ಎದುರಿನಿಂದಲೇ ವಂಚಿಸಿ ಪ್ರಶ್ನಿಸಿ ಅರಿತುಕೊಂಡು ಕುಟ್ಟರಸನಿಗೆ ಅರುಹಿದರು. ಗೃಹಶೋಧನೆಗಳಲ್ಲಿ ರಾಜದ್ರೋಹದ ಪತ್ರಗಳು ದೊರೆತು ಆ ಪತ್ರ ಬರೆದವರೂ ಅವರ ಬಂಧುಗಳೂ ವಿಚಾರಣೆಗೊಳಗಾದರು. ರಾಜದ್ರೋಹ ನಿರ್ಮೂಲನ ಕಾರ್ಯ ಪರಿಷ್ಕಾರವಾಗಿ ಮುಂದುವರಿಯಿತು.

ಹಳೆಯ ಪಾಳೆಯಗಾರನ ನಿಲಯವನ್ನು ಶೋಧಿಸುತ್ತಿದ್ದಾಗ ಅಲ್ಲಿ ಒಂದು ಪತ್ರವು ದೊರೆಯಿತು. ಅದರ ಒಕ್ಕಣೆ ಹೀಗಿತ್ತು:

ಮಹಾಪ್ರಭುಗಳ ಪಾದಾರವಿಂದಗಳಿಗೆ

ಲಿಂಗರಾಜನ ಒಂದು ಪಡೆ ಕಡಮಕಲ್ಲು ಮಾರ್ಗವಾಗಿ ಬರುವುದೆಂದು ತಿಳಿದಿದ್ದೇನೆ. ಪ್ರಭುಗಳವರು ಆ ದಾರಿಯಲ್ಲಿ ರಕ್ಷಣೋಪಾಯಗಳನ್ನು ಬಲಪಡಿಸಬೇಕಾಗಿ ಸೇವಕನ ನಮ್ರ ವಿನಂತಿ.

ಪ್ರಭುಗಳ ಪಾದಸೇವಕ

ಉಗ್ಗಪ್ಪಶೆಟ್ಟಿ

ಕುಟ್ಟರಸನು ಈ ಪತ್ರವನ್ನು ನೋಡಿ ಬಹುವಾಗಿ ಕೆರಳಿದನು. ಈ ಉಗ್ಗಪ್ಪ ಶೆಟ್ಟಿಯು ಸಾಮಾನ್ಯ ಬೇಹಿನವನಲ್ಲ. ತಾನು ಅತಿ ಗುಪ್ತವಾಗಿ ಸೈನ್ಯವನ್ನು ಕಡಮಕಲ್ಲು ಮಾರ್ಗವಾಗಿ ತಂದರೂ ಅವನಿದನ್ನು ಅರಿತು ತನ್ನ ಪಾಳೆಯಗಾರನಿಗೆ ವರದಿಮಾಡಿದ್ದಾನೆ. ಆದರೆ ಶತ್ರುವಿಗೆ ಸಮಯದ ಅಭಾವವೋ ತನ್ನ ಚಾಕಚಕ್ಯವೋ ತನಗೆ ದೈವದ ಸಹಾಯವೋ ತಾನು ಯಾವ ಪ್ರತಿರೋಧವನ್ನೂ ಎದುರಿಸದೇ ಆ ಪಾಳೆಯಗಾರನನ್ನು ನಾಶಪಡಿಸಲು ಶಕ್ತನಾದೆನು. ಉಗ್ಗಪ್ಪ ಶೆಟ್ಟಿಯ ದ್ರೋಹ ಗುರುತರವಾದುದು. ಪರಮನೀಚನಾದ ಆ ಸ್ವಾಮಿದ್ರೋಹಿಯನ್ನು ಈಗಲೇ ಸೆರೆಹಿಡಿದು ಚಿತ್ರಹಿಂಸೆಯಿಂದ ಸಂಹರಿಸಬೇಕು ಎಂದು ಕುಟ್ಟರಸನು ಆಲೋಚನೆಯನ್ನು ಮಥಿಸಿದನು. ಕ್ರೋಧದಿಂದ ಅವನ ಮನಸ್ಸು ಕುದಿಯಿತು. ಆ ಕ್ಷಣದಲ್ಲಿ ಶೆಟ್ಟಿಯು ಕುಟ್ಟರಸನ ಎದುರಿದ್ದಿದ್ದರೆ ಅವನು ಅರಸನ ಕ್ರೋಧಾಗ್ನಿಯಿಂದ ಭಸ್ಮೀಭೂತನಾಗಿ ಹೋಗುತ್ತಿದ್ದನು. ಅವನ ತೀಕ್ಷ್ಣ ವಾಕ್ಯಗಳಿಂದ ನುಚ್ಚುನೂರಾಗಿ ಹೋಗುತ್ತಿದ್ದನು. ಕುಟ್ಟರಸನು ತನ್ನ ಭದ್ರ ಮುಷ್ಟಿಯಿಂದ ಮೇಜಿಗೆ ಕುಟ್ಟಿ ಎದ್ದ ರಭಸದಲ್ಲಿ ಆ ಮೇಜಿನ ಹೊಸ ಹಲಗೆಯೂ ಒಡೆದುದರಲ್ಲಿ ಆಶ್ಚರ್ಯವಿಲ್ಲ.

ಉಗ್ಗಪ್ಪ ಶೆಟ್ಟಿಯನು ಅರಸಲು ಚಾರರನ್ನೂ ಅಟ್ಟಲಾಯಿತು. ಯಾವ ಉಗ್ಗಪ್ಪ ಶೆಟ್ಟಿ? ಅವನ ವಾಸಸ್ಥಾನವೆಲ್ಲಿ? ಅವನನ್ನು ಹೇಗೆ ಅರಸುವುದು? ಚಾರರು ಎಲ್ಲೆಲ್ಲಿಯೋ ಅಲೆದು ಹಲವಾರು ಉಗ್ಗಪ್ಪಶೆಟ್ಟಿಗಳಿದ್ದುದರಿಂದ ಏನು ಮಾಡುವುದು ಯಾರನ್ನು ಸೆರೆ ಹಿಡಿದು ತರುವುದು ಎಂದು ತಿಳಿಯದೇ ಹತಾಶರಾಗಿ ಅರಸನಲ್ಲಿಗೆ ಬಂದು ತಮ್ಮ ಗೊಂದಲವನ್ನು ಅರುಹಿದರು.

"ಈ ಪಾತಕಿ ಶೆಟ್ಟಿಯನ್ನು ನಾನು ಹಿಡಿದು ತರುವೆನು. ಅವನ ಕಾರಸ್ತಾನ ನನ್ನ ಮುಂದೆ ಪರಿಣಾಮಕಾರಿಯಾಗದು" ಎಂದು ಸ್ಥಳಿಕ ಸ್ವಾಮಿನಿಷ್ಠನೊಬ್ಬನು ಅರುಹಿದನು.

"ಬೇಗ ಹೋಗು" ಎಂದು ಕುಟ್ಟರಸನು ಅವನನ್ನು ಅಟ್ಟಿದನು. ಅವನ ಹಿಂದೆಯೇ ನಾಲ್ಕು ಜನ ರಾಜದೂತರೂ ಹೋದರು, ಕೈದಿಯನ್ನು ಸೆರೆಹಿಡಿದು ತರಲೆಂದು. ಪುತ್ತೂರಿನಲ್ಲಿಯೇ ಇದ್ದ ಉಗ್ಗಪ್ಪ ಶೆಟ್ಟಿಯನ್ನು ಹಿಡಿದು ತರಲು ವಿಳಂಬವಾಗಲಿಲ್ಲ.

"ಮಹಾರಾಜರೇ! ಈ ಕೃತ್ರಿಮ ಜೀವಿಯೇ ಈ ವಿಷ ಜಂತುವೇ ಆ ಕಾಗದ ಬರೆದವನು" ಎಂದನು ಸ್ವಾಮಿನಿಷ್ಠ ಮಾಯಿಲ ರೈ.

"ಏನಂತಿಯೋ?" ಅರಸನ ಪ್ರಶ್ನೆ.

"ಯಾವ ಕಾಗದ ಪ್ರಭುಗಳೇ?" ಉಗ್ಗಪ್ಪ ಶೆಟ್ಟಿಯು ಹೆದರಿ ಪ್ರಶ್ನಿಸಿದನು, ನುಡಿ ನಡುಗುತ್ತಿತ್ತು.

"ಕಾಗದ ಬರೆದೂ ಬರೆದೂ ಯಾವ ಕಾಗದವಂತೇ!"

"ಈ ದೀನನು ಯಾವ ಅಪರಾಧವನ್ನೂ ಮಾಡಲಿಲ್ಲ..."

"ಸುಳ್ಳು ಹೇಳಲು ಮೊಳದುದ್ದ ನಾಲಗೆಯುಂಟೇನೋ ನಿನಗೆ? ಮತ್ತೆ ಹೇಗೋ ಮಾಯಿಲ ರೈ ನಿನ್ನನ್ನು ಹಿಡಿದು ತಂದ?" ಮಾಯಿಲ ರೈ ಮೇಲೆ ಅರಸನಿಗೆ ಅತುಲ ವಿಶ್ವಾಸ, ಅಭಿಮಾನ.

"ನನಗೊಂದೂ ತಿಳಿದಿಲ್ಲ ಮಹಾಪ್ರಭುಗಳೇ! ಮಾಯಿಲ ರೈ ನಾನು ಮದುವೆಯಾಗಬೇಕೆಂದಿದ್ದ ಹುಡುಗಿಯನ್ನು. . ."

"ಪ್ರಭುಗಳೇ, ಅವನು ಕೃತ್ರಿಮ ಮನುಷ್ಯನೆಂದು ನಾನು ಮೊದಲೇ ಅರುಹಲಿಲ್ಲವೇ? ಈಗ ನನ್ನ ಮೇಲೆ ಮಿಥ್ಯಾರೋಪ. ಕುನ್ನಿಯ ಹುಡುಗಿಯನ್ನು ನಾನು ಬಯಸುತ್ತೇನೆಯೇ?" ಮಾಯಿಲ ರೈ ಹೀಗೆ ಹೇಳದೆ ನಿರ್ವಾಹವಿರಲಿಲ್ಲ.

"ಉಗ್ಗಪ್ಪ ನೀನು ಬಾಯಿಮುಚ್ಚು. ನಿನ್ನ ಮೇಲೆ ರಾಜದ್ರೋಹದ ಪ್ರಬಲಾರೋಪಣೆ ಹೇರಲ್ಪಟ್ಟಿದೆ. ಅದಕ್ಕೆ ನಮಗೆ ಆಧಾರವಿದೆ. ನೀನೇನನ್ನುವೆಯೋ?"

"ನಾನು ಬಡವ ಸ್ವಾಮಿ. ದ್ರೋಹವೆಂದರೇನೆಂದೇ ತಿಳಿಯದವನು."

"ನಿನ್ನ ವಂಚನೆ ಆ ಮೋಸದ ಸೋಗು ಬೇಡ. ಕುಟ್ಟರಸನ ಮುಂದೆ ಅವು ನಡೆಯಲಾರವು. ಈಗ ನೋಡು ಈ ಕಾಗದ" ಎಂದು ಅರಸನು ಆ ಕಾಗದವನ್ನು ಶೆಟ್ಟಿಗೆ ಕೊಟ್ಟನು.

ಶೆಟ್ಟಿಯು ಅದನ್ನು ಓದಿ ನಡುಗುವ ಕೈಗಳಿಂದ ಹಿಂದೆ ಕೊಟ್ಟನು. ಮುಗ್ಧತೆಯನ್ನೇ ಮುಖವು ಪ್ರದರ್ಶಿಸುತ್ತಿದ್ದಿತ್ತು. ಅರಸನ ಮತ್ತು ಸ್ವಾಮಿನಿಷ್ಠನ ಮುಖಗಳು ಆ ಕ್ಷಣದಲ್ಲಿ ರಂಗಿನಲ್ಲಿ ಏರಿದುವು. ಶೆಟ್ಟಿಯ ವಿವರ್ಣ ಮುಖದ ಮೇಲೆಯೂ ಒಂದು ಮೃದುಲಾಸ್ಯ ಮೂಡಿತು.

"ಏನು ಹೇಳುತ್ತೀಯೋ ದ್ರೋಹೀ? ಕಾಗದವನ್ನು ಬರೆದವನು ನೀನಲ್ಲವೇನೋ?"

"ನಾನಲ್ಲ ಮಹಾಸ್ವಾಮೀ" ಕಿರು ನಗು ಶೆಟ್ಟಿಯ ತುಟಿಗಳಲ್ಲಿ ಮೂಡಿ ಅರಸನ ದೃಷ್ಟಿ ಪ್ರಖರತೆಯಿಂದ ಅಲ್ಲಿಯೇ ಹಿಂಗಿತು.

"ನಿನ್ನ ಕ್ಷುದ್ರತೆಯ ನಗು ಈಗಲೇ ಆರುವುದು. ನೀನು ಬರೆದವನಲ್ಲವಂತೆ. ಮೇಲೆ ಮೋಸದ ನಗು. ನೀನು ಬರೆದವನಲ್ಲವೆನ್ನಲು ನಿನ್ನಲ್ಲೇನು ಆಧಾರವಿದೆಯೋ?" ಅರಸನು ತೀಕ್ಷ್ಣ ದೃಷ್ಟಿಯನ್ನು ಬೀರಿದನು.

"ಮಹಾಸ್ವಾಮೀ! ಇಲ್ಲಿ ಯುದ್ಧ ನಡೆದ ಸಮಯದಲ್ಲಿ ನಾನಿಲ್ಲಿ ಇರಲೇ ಇಲ್ಲ."

"ಮತ್ತೆಲ್ಲಿ ಸತ್ತಿದ್ದಿಯೋ ಕತ್ತೆ?"

"ಆಗ ನನ್ನ ಮದುವೆಯು ನಡೆಯುತ್ತಿತ್ತು. ಪ್ರಭುಗಳಿಗೆ ನಾನು ಮಂಜೇಶ್ವರದಲ್ಲಿ ನನ್ನ ಮಾವನ ಮನೆಯಲ್ಲಿ ಇದ್ದೆನು. ನಾವು ಗಂಡಹೆಂಡತಿ ಪುತ್ತೂರಿಗೆ ಬಂದು ತಿಂಗಳೂ ಸಂದಿರುವುದಿಲ್ಲ."

ಕ್ರೂರಿಯಾದ ಅರಸನಲ್ಲಿ ಏನೋ ಕರುಣೆಯ ಕಿಡಿಯು ಬೆಳಗಿತು.

"ನಿನ್ನ ಹೇಳಿಕೆಗೆ ರುಜುವಾತೇನು?"

"ನನ್ನ ಹೆಂಡತಿಯನ್ನು ನನ್ನ ಸಂಬಂಧಿಕರನ್ನು ಯಾರನ್ನು ಬೇಕಾದರೂ ಪ್ರಶ್ನಿಸಬಹುದು ಮಹಾಪ್ರಭುಗಳು. ನಾನು ಈ ಕಾಗದವನ್ನು ಬರೆದವನಲ್ಲ." ತೃಪ್ತಿಯ ಆತ್ಮವಿಶ್ವಾಸನ ಕಿರುನಗು ಶೆಟ್ಟಿಯ ತುಟಿಗಳಲ್ಲಿ ಮಿನುಗಿತು.

"ನಾನು ವಿಚಾರಿಸುತ್ತೇನೆ. ಇವನನ್ನು ಈಗ ತುರಂಗಕ್ಕೆ ಹಿಡಿದುಕೊಂಡು ಹೋಗಿರೋ."

ಸ್ವಾಮಿನಿಷ್ಠನು ಮಾತಾಡಲು ಮುಂದಾದನು. ಅವನು ಬಾಯಿ ತೆರೆಯುವಾಗಲೇ ಕುಟ್ಟರಸನು "ಮಾಯಿಲ ರೈ, ನೀನು ಈಗಿಂದೀಗಲೇ ಈ ಉಗ್ಗಪ್ಪ ಶೆಟ್ಟಿಯ ಹೆಂಡತಿಯನ್ನು ಇಲ್ಲಿಗೆ ವಿಚಾರಣೆಗೆ ಕರೆದುಕೊಂಡು ಬಾ" ಎಂದು ಅಪ್ಪಣೆ ಮಾಡಿದನು.

ಸ್ವಾಮಿನಿಷ್ಠನು ತನ್ನ ಮಾತನ್ನು ಹೇಳಲು ಧೈರ್ಯವಿಲ್ಲದೆ, ಅತೃಪ್ತಿಯಿಂದ, ರಾಜಾಜ್ಞೆ ಪಾಲಿಸಲು ಸಾಗಿದನು.

ಗಂಡನು ರಾಜದೂತರೊಡನೆ ಹೋದಾಗಲೇ ಅಕ್ಕಬ್ಬೆಯ ಮನಸ್ಸು ಮುದುರಿ ಹೋಗಿದ್ದಿತ್ತು. ಆ ಎಳೆಯ ಜೀವ, ಸಂಸಾರದಲ್ಲಿ ಪ್ರಥಮವಾಗಿ ಕಾಲಿಟ್ಟಿದ್ದ ಆ ಸುಂದರ ಪುಷ್ಪ ಜರ್ಜರಿತವಾಗಿತ್ತು. ಗಂಡನಲ್ಲಿ ಯಾವ ದೋಷವನ್ನೂ ಯಾವ ರಾಜದ್ರೋಹ ಭಾವವನ್ನೂ ಅವಳು ಕಂಡಿರಲಿಲ್ಲ. ಹೀಗೆಲ್ಲ ಚಿಂತಿಸುತ್ತ ಪರಿಪರಿಯಾಗಿ ದುಃಖಿಸುತ್ತ ಗಂಡನ ಕ್ಷೇಮವರ್ಧನೆಗಾಗಿ ಎಲ್ಲಾ ದೇವರಲ್ಲಿಯೂ ಮೊರೆಯಿಡುತ್ತಿದ್ದಾಗಲೇ ಪುನಃ ದೂತರ ಆಗಮನವಾಯಿತು. ಅವರ ಮಧ್ಯೆ ತನ್ನ ಮನಸ್ಸಿನ ಪುತ್ತಳಿಯಿಲ್ಲದೆ ಕುಸಿದು ಹೋದಳು. ಆದರೆ ರಾಜಾಜ್ಞೆ, ಪತಿದೇವನ ರಕ್ಷಣೆ ತನ್ನಿಂದ ಆಗುವುದಾದರೆ ಆಗಲಿ ಎಂದು ಧೈರ್ಯ ಮನಸ್ಸು ಮಾಡಿ ದೂತರೊಡನೆ ಹೊರಟಳು. ದೂತರ ಜೊತೆ ಕಾಣಿಸಿಕೊಳ್ಳದೆ ಅನಂತರ ಹಿಂಬಾಲಿಸುತ್ತ ಬಂದ ಮಾಯಿಲ ರೈಯನ್ನು ನೋಡಿ ಮುಖ ಮುರಿದಳು. ಈ ಶನಿಯ ಕಾಟವೇ ಈ ಪಿತೂರಿ ಎಂದು ಬಗೆದಳು.

ದುಃಖದಿಂದ ಸೊರಗಿ ನಾಚಿಕೆಯಿಂದ ಕುಸಿದು ಮಧ್ಯಾಹ್ನದ ಬಿಸಿಲಿನ ಝಳದಿಂದ ಬಾಡಿ ಕಂಗಾಲಾದ ಅಕ್ಕಬ್ಬೆಯು ಕುಟ್ಟರಸನ ಮುಂದೆ ನಿಂತಾಗ ಇನ್ನಷ್ಟು ಕಂಗೆಟ್ಟಳು. ರಾಜದರ್ಪದ ಮುಂದೆ, ವೀರ ಸೈನಿಕನ ಗಂಡುದನಿಯ ಎದುರು ಈ ಮುಗ್ಧೆ ಕೋಮಲೆ ಧೃತಿಗೆಟ್ಟಳು. ಅವಳಿಗೆ ಕಣ್ಣು ಕತ್ತಲೆಹೋಯಿತು. ಅಲ್ಲಿಯೇ ಕುಳಿತುಹೋದಳು. ಮರುನಿಮಿಷ ಸ್ಥಾನದ ಗಂಭೀರತೆಯ, ಪರಿಸ್ಥಿತಿಯ ಭಯಂಕರತೆಯ ಅರಿವಾಗಿ ಎದ್ದು ನಿಂತಳು.

ಸುಂದರ ವಸ್ತುವು ಹೇಗಿದ್ದರೂ ಚಂದ. ಅದರ ವಿವಿಧ ರೂಪಗಳು ಸೌಂದರ್ಯದ ವಿವಿಧ ಮುಖಗಳು. ಕೋಮಲೆ, ಸುರಸುಂದರಿ ಅಕ್ಕಬ್ಬೆಯ ಮೃದುತ್ವ, ಸೌಂದರ್ಯ ಅಂಗಸೌಷ್ಠವ ವೀಕ್ಷಿಸಿದ ಕುಟ್ಟರಸನು ಒಂದು ಕ್ಷಣ ತನ್ನನ್ನು ತಾನು ಮರೆತನು. ಆ ರಕ್ಷಣಾಹೀನ ಕರುಣಾಜನಕ ಪರಿಸ್ಥಿತಿ ಅವಳನ್ನು ಇನ್ನಷ್ಟು ಸುಂದರಿಯನ್ನಾಗಿ ಮಾಡಿದ್ದುವು. ಕುಟ್ಟರಸನು ರಾಜದಂಡದ ಮದದಿಂದ ಕೊಬ್ಬಿದವನು ಆ ನಿಮಿಷ ಸೇವಕರನ್ನೂ ಸ್ವಾಮಿನಿಷ್ಠನನ್ನೂ ಅಲ್ಲಿಂದ ಹೊರಟುಹೋಗಲು ಆಜ್ಞೆ ಗುಡುಗಿದನು. ಸಿಂಹವು ತನ್ನ ಕೊಳ್ಳೆಯನ್ನು ಹೊಡೆಯುವಾಗ ನರಿಗಾಗುವ ಹತಾಶೆಯ ಮುಖಭಂಗಿಯಿಂದ ಸ್ವಾಮಿನಿಷ್ಠನು ಅಲ್ಲಿಂದ ಕದಲಿದನು.

"ನಿನ್ನ ಗಂಡನ ಮೇಲೆ ಗುರುತರವಾದ ರಾಜದ್ರೋಹದ ಆರೋಪಣೆಯನ್ನು ಹೊರಿಸಲಾಗಿದೆ. ಅದಕ್ಕೆ ನಮ್ಮೊಡನೆ ಬಲವಾದ ಪುರಾವೆಯಿದೆ. ನಾವು ಕೊಡಗು ದೇಶದಿಂದ ಇಲ್ಲಿಗೆ ಯುದ್ಧ ಮಾಡಲೂ ಬರುತ್ತಿದ್ದಾಗ ಅವನು ನಮ್ಮ ವಿರುದ್ದ ಸಂಚು ನಡೆಸುತ್ತಿದ್ದನು."

"ಖಾವಂದರು ಕ್ಷಮಿಸಬೇಕು. ಇಲ್ಲಿ ಯುದ್ಧ ನಡೆಯುತ್ತಿದ್ದಾಗ ಮಂಜೇಶ್ವರದಲ್ಲಿ ನಮ್ಮ ಮದುವೆ ನಡೆಯುತ್ತಿದ್ದಿತು. ಅವರು ಎಂದೆಂದೂ ರಾಜದ್ರೋಹ ಬಗೆಯದವರು. ಅವರನ್ನು ಕ್ಷಮಿಸಬೇಕು ಮಹಾಸ್ವಾಮಿಯವರು."

"ನೀನು ಗಂಡನ ಪರ ವಾದಿಸದೇ ಏನು ಮಾಡಿಯೇ? ಆದರೆ ನಮ್ಮಲ್ಲಿ ಅದಕ್ಕೆ ಬಲವಾದ ಕಾರಣವಿದೆ."

"ಇರಲಾರದು ಪ್ರಭುಗಳೇ."

"ಮುಚ್ಚು ಬಾಯಿ ಹುಚ್ಚು ಹೆಂಗಸೇ. ಈ ಪಾತಕಕ್ಕೆ ಶಿಕ್ಷೆಯಾಗಿ ನಾಳೆಯ ದಿನ ನಿನ್ನ ಗಂಡನನ್ನು ತೂಗಿ ಕೊಂದುಬಿಡಲಾಗುವುದು. ನೀನೇನನ್ನುತ್ತೀಯಾ?" ಕುಟ್ಟರಸನು ಕಠಿಣನಾದನು.

ಅಕ್ಕಬ್ಬೆಯು ಹಲುಬಿದಳು. "ನನ್ನ ಜೀವವನ್ನು ನನಗೆ ದಾನ ಮಾಡಿಬಿಡಿ ಪ್ರಭುಗಳೇ. ಅವರು ತಪ್ಪಿತಸ್ಥರಲ್ಲ" ಹೆದರಿದ ಪಾರಿವಾಳದಂತೆ ನೋಡತೊಡಗಿದಳು.

"ನಿನ್ನ ಜೀವ ನಿನಗೆ ದಾನ ಕ್ಷುದ್ರ ಹೆಂಗುಸೇ. . . ನಿನ್ನ ಗಂಡನನ್ನು ನಿನಗೆ ಕೊಡಬಹುದು. ಆದರೆ. . ."

ಈ ಸಂತೋಷದ ಕಿರಣದಿಂದ ಅಕ್ಕಬ್ಬೆಯ ಮುಖಕಮಲ ಅಪೂರ್ವ ಸೌಂದರ್ಯ ತಾಳಿ ಥಳಥಳಿಸಿತು. ಆ ಕ್ರೂರ ವಾತಾವರಣದಲ್ಲಿ ಈ ದಿವ್ಯ ಪ್ರಭೆಯಿಂದ ಶಾಂತಿಯು ಮಿಂಚಿದಂತಾಯಿತು. ಇದರಿಂದ ಇನ್ನಷ್ಟು ಮೋಹಿತನಾಗಿ ಕಾಮಾಂಧನಾದ ಕುಟ್ಟರಸನು "ಆದರೆ ಸುಂದರೀ. . ."ಎಂದು ಅವಳೆಡೆಗೆ ಮುಗುಳ್ನಗೆಯಿಂದ ಮುಂದುವರಿದನು.

ಅಕ್ಕಬ್ಬೆಯು ಹೆದರಿ "ನಾನು ಹೋಗುತ್ತೇನೆ. ನನ್ನನ್ನು ಕಳಿಸಿಬಿಡಿ" ಎಂದು ರೋದಿಸುತ್ತ ಬಾಗಿಲಿನೆಡೆಗೆ ಧಾವಿಸಿದಳು.

"ಮೂರ್ಖ ಹೆಂಗುಸೇ, ನಾಳೆ ಬೆಳಗಾಗುವುದನ್ನು ನಿನ್ನ ಗಂಡ ನೋಡಲಾರ" ಎಂದು ಅಬ್ಬರಿಸಿದನು ಕುಟ್ಟರಸ. ಆ ಆರ್ಭಟೆಯ ತರಂಗವೊಂದು ಅಕ್ಕಬ್ಬೆಯನ್ನು ಕ್ರೂರವಾಗಿ ಬೀದಿಯೆಡೆಗೆ ದಬ್ಬಿತು.

ಮಧ್ಯಾಹ್ನದ ಸೂರ್ಯನ ತೀಕ್ಷ್ಣತೆ, ಮನಸ್ಸಿನ ಉದ್ವೇಗದ ತೀವ್ರತೆ, ಅಪಮಾನ, ಚಿಂತೆ, ದುಃಖಗಳ ಪರಮಾವಧಿ. ಅಕ್ಕಬ್ಬೆಯು ನಡೆದಳೋ ತೇಲಿದಳೋ ಓಡಿದಳೋ ಕಾಲುಗಳು ಅವಳನ್ನು ತುರಂಗದೆಡೆಗೆ ಒಯ್ದಿದ್ದುವು. ತುರಂಗಪಾಲಕನೊಡನೆ ತಾನು ಉಗ್ಗಪ್ಪಶೆಟ್ಟಿಯ ಪತ್ನಿಯೆಂದೂ ಅವನನ್ನು ನೋಡಲು ತನ್ನನ್ನು ಬಿಡಬೇಕೆಂದೂ ಅರಿಕೆ ಮಾಡಿದಳು. ಪಾಲಕನು ಅವಳನ್ನು ಒಳಗೆ ಹೋಗಲು ಬಿಟ್ಟು ಹೊರಗೆ ಗಸ್ತು ತಿರುಗುತ್ತಿದ್ದನು.

ಯಾರು ಬಂದಾರು, ಹೇಗೆ ವಿಮೋಚನೆಯಾದೀತು, ಬೆಳಕನ್ನು ಕಂಡೇನೇ ಎಂದು ಅತಿ ಚಿಂತಾಗ್ನಿಯಿಂದ ದಗ್ಧನಾಗಿದ್ದ ಶೆಟ್ಟಿಯು ಈ ಹೊಸ ಸದ್ದನ್ನು ಕೇಳಿದೊಡನೆಯೇ ಬಾಗಿಲೆಡೆಗೆ ಧಾವಿಸಿ ಬಂದನು. ಅಕ್ಕಬ್ಬೆಯನ್ನು ಕಂಡಕೂಡಲೇ "ಓ ದೇವೀ, ನನ್ನ ದೇವಿ ಬಂದೆಯಾ" ಎಂದು ಉನ್ಮತ್ತನಂತೆ ಹಾರಿ ಬಂದು ಅವಳನ್ನು ಅಪ್ಪಿಕೊಂಡನು.

ಅಕ್ಕಬ್ಬೆ ಅಲ್ಲಿ ಕಂಡುದು ತನ್ನ ಪತಿಯನ್ನಲ್ಲ, ತನ್ನ ಮುದ್ದಿನ ಮನದನ್ನನಲ್ಲ. ಪ್ರೇತ ಕಳೆಯಿಂದ ಜೀವಚ್ಛವವಾಗಿದ್ದ ಒಂದು ಮನುಷ್ಯ ಸ್ವರೂಪವನ್ನು. ಆ ಕೆಲವು ಗಂಟೆಗಳಲ್ಲಿ ಮರಣದಂಡನೆಯ ಭಯ, ಸಾವಿನ ಅಸ್ಪಷ್ಟ, ಕರಾಳ ಸ್ಪರ್ಶ ಶೆಟ್ಟಿಯ ಪ್ರಾಯವನ್ನು ೮೦ ವರ್ಷಗಳಿಗೆ ಏರಿಸಿದ್ದುವು. ಸಂತೋಷದಿಂದ ನಲಿದುಲಿಯುವ ಉಗ್ಗಪ್ಪ ಅಲ್ಲಿರಲಿಲ್ಲ. ಜೀವದಾಸೆಗಾಗಿ ಹಾತೊರೆಯುವ ಪೆಟ್ಟು ತಿಂದ

ಮುದಿ ನಾಯಿ ಅಲ್ಲಿದ್ದಿತು. ಮೃದು ಲಾಸ್ಯದಿಂದ ಮನೋಹರವಾಗಿ ತೋರುತ್ತಿದ್ದ ಅವನ ಅಧರಗಳು ಈಗ ಕಪ್ಪಾಗಿ ಆ ಮಬ್ಬು ಬೆಳಕಿನ ತುರಂಗದಲ್ಲಿ ವಿಕಾರವಾಗಿ ತೋರುತ್ತಿದ್ದುವು. ಕಣ್ಣುಗಳು ಗುಂಡಿಗಿಳಿದು ತಲೆಗೂದಲು ನರೆತು ಅವನಾಗಲೇ ಮೃತಿಹೊಂದಿದಂತಿದ್ದನು, ಮರಣದ ತಾಂಡವ.

"ಓದೇವೀ ಓ ದೇವೀ" ಎನ್ನುವ ಅವನ ಚಿರಪರಿಚಿತ, ಈಗ ಭಯವಿಹ್ವಲ ಮತ್ತು ಕರ್ಣ ಕಠೋರ ಕಂಠ ಆಲಿಸಿ ಅಕ್ಕಬ್ಬೆಯು ಅರ್ಧ ಜೀವಪಡೆದಳು. ಪತಿಯು ಬದುಕಿರುವನೆಂದು ತೃಪ್ತಿಯಾಯಿತು.

"ನನ್ನನ್ನು ನಿಷ್ಕಾರಣವಾಗಿ ನಾಳೆ ಬೆಳಗ್ಗೆ ಕೊಂದುಬಿಡುತ್ತಾರೆ ದೇವೀ ಹೇಗೆ ಬದುಕಲಿ, ಹೇಗೆ ಉಳಿಯಲಿ?"

"ನೀವು ತಪ್ಪಿತಸ್ಥನಲ್ಲವೆಂದು ನಾನು ಹೇಳಿದೆ, ಆದರೆ. . ."

"ಅಯ್ಯೋ ನಾನು ನಿರ್ದೋಷಿ. ನಾಳೆ ಬೆಳಗ್ಗೆ ತೂಗಿ ಕೊಂದುಬಿಡುವರಂತೆ. ಈ ಕುತ್ತಿಗೆಯ ನರವನ್ನು ತುಂಡುಮಾಡಿ ಕೊಲ್ಲುವರಂತೆ. . . ನನಗೆ ಉಳಿಗಾಲವಿಲ್ಲವೇ ದೇವೀ?"

ತುರಂಗದ ಬಾಗಿಲಿನವರೆಗೆ ಅಕ್ಕಬ್ಬೆಯನ್ನು ಪಾಲಕನು ಎಳೆದುಕೊಂಡು ಹೋದನು.

ಅಕ್ಕಬ್ಬೆಯ ಮನಸ್ಸಿನಲ್ಲಿ ಏನೋ ಹೊಳೆಯಿತು. ಇನ್ನೊಂದು ಕ್ಷಣ ತನ್ನ ಗಂಡನೊಡನೆ ಮಾತನಾಡಿ ಬರಲು ಅನುಮತಿಯನ್ನು ಯಾಚಿಸಿದಳು. ಅವಳ ದೈನ್ಯವನ್ನು ಕಂಡು ತುರಂಗಪಾಲಕನು ಕೂಡಲೇ ಮರಳಬೇಕೆಂದು ಆಜ್ಞಾಪಿಸಿ ಕಳಿಸಿದನು.

"ಹಾಗಾದರೆ ನನಗೆ ಉಳಿಗಾಲವಿಲ್ಲವೇ ದೇವಿ?"

"ಉಂಟು ನನ್ನ ದೇವರೇ. . . ಆದರೆ. . ."

"ಅಯ್ಯೋ ಹಾಗಾದರೆ ನನ್ನನ್ನೇಕೆ ನೀನು ಬಿಡಿಸಲಿಲ್ಲ?"

"ಆದರೆ. . . ಆದರೆ. . ."

"ಅದು ಯಾವುದೇ ಆದರೂ ನಾನು ಬದುಕಬೇಡವೇ? ನಮ್ಮ ಆಸ್ತಿಯೆಲ್ಲವೂ ಹೋದರೂ ಪರವಾ ಇಲ್ಲ. ನಾನು ಹೊರ ಬಂದ ಮೇಲೆ ಸಂದಾಯಿಸಿಯೇನು!"

"ಆದರೆ. . ."

"ಮತ್ತೇನು ಆದರೆ? ನಮ್ಮ ಮನೆ ಅವನು ತೆಗೆದುಕೊಳ್ಳಲಿ, ನಮ್ಮ ಹಣವೆಲ್ಲವೂ ಅವನ ಬೊಕ್ಕಸ ಸೇರಲಿ. ನಾನು ಬದುಕಿದರೆ ಅವನ್ನು ಮತ್ತೆ ಸಂಪಾದಿಸಬಹುದು. ನನ್ನ ಜೀವಕ್ಕೆ ಮಿಗಿಲಾದುದು ಯಾವುದಿದೆ?"

"ಅದು ಗೊತ್ತಿದೆ ನನ್ನ ದೇವರೇ. ಆದರೆ ನಿಮ್ಮ ಪ್ರಾಣ ಉಳಿಯಲು ನಾನು ತೆರಬೇಕಾದುದು ಇವೆಲ್ಲವುಗಳಿಗಿಂತಲೂ ಹೆಚ್ಚಿನದು."

"ಏನು ನಿನ್ನ ಜೀವವೇ?"

"ನೀವು ಉಳಿಯುವುದಾದರೆ ನಾನು ಅದನ್ನು ತೆರಲು ಸಂತೋಷದಿಂದ ಒಪ್ಪುತ್ತಿದ್ದೆ. ನನ್ನ ಜೀವಕ್ಕಿಂತಲೂ ಪ್ರಿಯವಾದ..."

"ನನ್ನ ಜೀವ ಉಳಿಯುವುದಾದರೆ ನಾವು ಏನನ್ನು ಬೇಕಾದರೂ ತ್ಯಾಗ ಮಾಡಲು ಸಿದ್ಧರಿರಬೇಕು. ನೀನೇಕೆ ಹಿಂಜರಿಯುತ್ತೀಯೆ? ಅದೇನು ಬೇಕಂತೆ ಆ ನರಶ್ವಾನಕ್ಕೆ?"

"ನನ್ನ ಪವಿತ್ರವಾದ ಶೀಲವನ್ನು ಆ ನರಾಧಮನಿಗೆ ಒಪ್ಪಿಸಿದರೆ..." ಇಷ್ಟು ಹೇಳುವಾಗ ಅಕ್ಕಬ್ಬೆಗೆ ಮಾತುಹೊರಡಲಿಲ್ಲ, ಭಾವೋದ್ವೇಗದಿಂದ ಉಸಿರುಕಟ್ಟಿತು, ಸ್ವಲ್ಪ ಹೊತ್ತು ಮೌನ.

"ಅದಕ್ಕಾದರೂ ಒಪ್ಪಿ ನೀನು ನನ್ನ ಹರಣವನ್ನೇಕೆ ಉಳಿಸಬಾರದು?"

ತುಂಬಿದ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದವರು ಮರದ ಅಡರನ್ನು ಹಿಡಿಯುವಂತಹ ಮಾತು ಶೆಟ್ಟಿಯದು. ಕಾಲಪುರುಷನ ಕರಾಳ ದಂಷ್ಟ್ರದೊಳಗೆ ಸಿಕ್ಕಿ ಬದುಕಲು ಮಿಲಿಮಿಲಿಗುಟ್ಟುತ್ತಿರುವ ಪ್ರಾಣಿಗೆ ನೀತಿಯು ಹೇಗೆ ಅರ್ಥವಾದೀತು?

ತನ್ನ ಕೊನೆಯ ವಾಕ್ಯದಿಂದ ತನ್ನ ಪ್ರಿಯ ಪತಿಯು ಭಾವಪರವಶನಾಗಿ "ಬೇಡ, ಬೇಡ. ಸಂಭಾವಿತರಿಗೆ ಮಾನವೇ ದೊಡ್ಡದು. ನನ್ನ ಜೀವ ಹೋದರೂ ತೊಂದರೆಯಿಲ್ಲ. ನೀನು ನಿನ್ನನ್ನು ಮಾರಿಕೊಂಡು ನನ್ನನ್ನು ಉಳಿಸಬೇಕಾಗಿಲ್ಲ" ಎಂದು ಮುಂತಾದ ಧೀರೋದ್ಗಾರಗಳು ಹೊರಡಬಹುದೆಂದು ನಿರೀಕ್ಷಿಸಿದ್ದ ಅಕ್ಕಬ್ಬೆಯು ಈಗ ನಿಜವಾಗಿಯೂ ಜರ್ಜರಿತಳಾಗಿದ್ದಳು. ಕುಟ್ಟರಸನ ಕಟು ಅವಮಾನಕರ ನುಡಿಗಳಿಂದಾಗದ ಗಾಸಿ ಅವಳಿಗೆ ಪತಿಯ ಈ ಮಾತುಗಳಿಂದಾಯಿತು. ಬದುಕಲು ಹಾತೊರೆಯುತ್ತಿದ್ದ ಜೀವದಾಸೆಯಲ್ಲಿ ಬೇರೆ ಎಲ್ಲವನ್ನೂ ಮರೆತಿದ್ದ ಉಗ್ಗಪ್ಪ ಶೆಟ್ಟಿಯಲ್ಲಿ ಅಂತಹ ನೈತಿಕೌನ್ನತ್ಯವನ್ನು ಅವಳು ನಿರೀಕ್ಷಿಸಿದುದು ಅಸ್ವಾಭಾವಿಕ?

"ನನ್ನ ಪ್ರಾಣಪದಕವೇ ನಿಮ್ಮನ್ನು ಹೇಗಾದರೂ ಉಳಿಸುವುದು ನನ್ನ ಕರ್ತವ್ಯ. ನೀವು ಹಗುರವಾಗಿರಿ. ನಾಳೆ ನಿಮ್ಮನ್ನು ನೋಡುತ್ತೇನೆ" ಎಂದು ಅಕ್ಕಬ್ಬೆಯು ಯಾಂತ್ರಿಕವಾಗಿ ನುಡಿದು ತುರಂಗದಿಂದ ಸಾಗಿದಳು.

"ಹಾಗಾದರೆ ನಾನು ಬದುಕುತ್ತೇನೆಯೇ?" ಎಂದು ಸಂತೋಷದಿಂದ ಪತಿಯು ಹೇಳಿದುದು ಆ ವಿಧೇಯ ಪತ್ನಿಯ ಕಿವಿಗಳಲ್ಲಿ ಅನುರಣಿತವಾಗುತ್ತಿತ್ತು.

ವೇಳೆಯು ಸಂಜೆಯನ್ನು ಸಮೀಪಿಸಿತು. ಅಕ್ಕಬ್ಬೆಯು ಮನೆಗೆ ಹೋದಳು. ಅವಳ ಮನಸ್ಸು ಕದಡಿಹೋಗಿದ್ದಿತು. ಒಂದು ಕಡೆ ತನ್ನ ಮಾನಸಂರಕ್ಷಣೆಯ ಪವಿತ್ರವಾದ ಹೊಣೆ; ಮತ್ತೊಂದು ಕಡೆ ತನ್ನ ಪ್ರಾಣಸರ್ವಸ್ವನ ಜೀವರಕ್ಷಣೆಯ ಧರ್ಮ. ಯಾವುದು ಹೆಚ್ಚಿನ ಮಹತ್ತ್ವದ್ದು? ಎಷ್ಟೋ ಹೊತ್ತು ಅವಳು ಕ್ಷೋಭೆಯಿಂದ ಅತ್ತಿತ್ತ ಅಡ್ಡಾಡಿದಳು. ಕಾಲಮೀರುತ್ತಿತ್ತು. ಚಿಂತಿಸಿ ಚಿಂತಿಸಿ ಕೊನೆಗೆ ಪಾಳೆಯಗಾರನಲ್ಲಿಗೆ ಹೋಗುವುದೆಂದು ನಿರ್ಧರಿಸಿದಳು. ಇಷ್ಟು ಚಿಂತಿಸುವಾಗ ಅವಳ ಮನಸ್ಸಿನಲ್ಲಿ ಆಗಾಗ ಮಿಡಿಯುತ್ತಿದ್ದ ದುಃಖದ ಶ್ರುತಿ ಅವಳ ಪತಿದೇವನ ವಾಕ್ಯ "ಅದಕ್ಕಾದರೂ ಒಪ್ಪಿ ನೀನು ನನ್ನ ಹರಣವನ್ನೇಕೆ ಉಳಿಸಬಾರದು?"

ರಾತ್ರಿ ಚೆನ್ನಾಗಿ ಕವಿದಿತ್ತು. ಸುಂದರಿಯಲ್ಲ, ಮುಗ್ಧೆಯಲ್ಲ, ಅಭಿಸಾರಿಕೆಯಲ್ಲ, ಉದ್ದೇಶಪೂರ್ವಕವಾಗಿ ಪಾಪಕೂಪಕ್ಕೆ ದುಮುಕುವ ಸ್ತ್ರೀ. ಆದರೆ ಅದು ಪಾಪಕಾರ್ಯವಲ್ಲ. ಅವಳ ಮಂದಹಾಸ ಮಾಯವಾಗಿದ್ದಿತು. ಅವಳ ಕೋಮಲತೆ ಅಳಿದುಹೋಗಿದ್ದಿತು. ಅವಳು ಪ್ರಶಾಂತಳಾಗಿದ್ದಳು. ಅಕ್ಕಬ್ಬೆಯು ಕುಟ್ಟರಸನ ಪಾಪಕಲುಷಿತ ಮಂದಿರವನ್ನು ಪ್ರವೇಶಿಸಿದಳು. ದ್ವಾರಪಾಲಕನಿಂದ ವಿಷಯವರಿತ ಅರಸನು ಕೊಳ್ಳೆಯು ಅನಾಯಾಸವಾಗಿ ತನ್ನ ಬಲೆಗೆ ಬಿದ್ದಿತೆಂದು ಸಂತೋಷಪಟ್ಟನು. ಅಕ್ಕಬ್ಬೆಯು ಮೌನವಾಗಿ ಮಂದಗಮನದಿಂದ ದೃಢತೆಯಿಂದ ಬಂದಳು. ದೃಷ್ಟಿಯು ನೆಲವನ್ನು ಇರಿಯುತ್ತಿತ್ತು.

"ಪುನಃ ಏಕೆ ಬಂದೆ? ಆಗ ಅನಾಗರಿಕಳ ಹಾಗೆ ನೇರ ಓಡಿಹೋಗಿದ್ದೆಯಲ್ಲ?"

"ಮಹಾಪ್ರಭುಗಳು ಆಗಲೇ ಅಪ್ಪಣೆಕೊಡಿಸಿದಿರಲ್ಲ  ಒಂದು ಷರತ್ತಿನ ಮೇಲೆ ನನ್ನ ಪತಿದೇವರ ಬಿಡುಗಡೆಯಾಗಬಹುದೆಂದು."

"ಗುರುತರವಾದ ರಾಜಕಾರ್ಯವಿದೆ. ನೀವೆಲ್ಲ ಇಲ್ಲಿಂದ ಹೋಗಿ" ಸೇವಕರು ಮರೆಯಾದರು. "ಹೌದು ಸುಂದರೀ ಆ ಷರತ್ತಿಗೆ ಒಪ್ಪುವೆಯಾ?"

"ನನ್ನ ಗಂಡನನ್ನು ಉಳಿಸುವುದಾದರೆ. ."

ಮರುದಿನ ಮಂಗಳಾವಾರ. ಅಮಂಗಳಕರವಾಗಿ ಬೆಳಗಾಯಿತು  ಇಲ್ಲ, ಇನ್ನೂ ಮಬ್ಬುಗತ್ತಲೆ. ತೇಜೋವಿಹೀನ ಶವಸದೃಶ ಅಕ್ಕಬ್ಬೆಯು ಅರಸನ ನಿಲಯದಿಂದ ತುರಂಗದೆಡೆಗೆ ಒಂದು ಪತ್ರವನ್ನು ಹಿಡಿದುಕೊಂಡುದು ಧಾವಿಸಿದಳು. ಈ ಮಲಿನವದನೆಯ ಮುಖವನ್ನು ಸ್ಪರ್ಶಿಸಲು ನಾಚಿಯೋ ಏನೋ ಸೂರ್ಯನು ಮೋಡಗಳಿಂದ ಮುಖವನ್ನು ಮರೆಮಾಡಿಕೊಂಡಿದ್ದನು. ಶ್ಮಶಾನ ರುದ್ರತೆ ಭೀಕರವಾಗಿ ವ್ಯಾಪಿಸಿದ್ದಿತು. ಮರುಳಿನಂತೆ ಅಕ್ಕಬ್ಬೆಯು ಗಂಡನೆಡೆಗೆ ಸಾಗಿದಳು. ತುರಂಗಪಾಲಕರಿಗೆ ಈ ಕಾಗದವಿತ್ತಳು.

"ಈ ಸ್ತ್ರೀಯ ಪತಿ ಉಗ್ಗಪ್ಪಶೆಟ್ಟಿಯನ್ನು ಅವಳ ವಶಕೊಡುವುದು  ಕುಟ್ಟರಸ."

ಅರಸನ ಅಕ್ಷರದ ಈ ಪತ್ರವನ್ನೋದಿ ತುರಂಗಪಾಲಕನು ನಿಡುಸುಯ್ದನು; ಮಾತನಾಡಲಿಲ್ಲ, ಪತ್ರವನ್ನು ಅವಳಿಗೆ ಹಿಂದೆ ಕೊಟ್ಟನು.

"ಎಲ್ಲಿ ನನ್ನ ಪತಿ?" ಅಕ್ಕಬ್ಬೆಗೆ ಕಣ್ಣೇ ಸರ್ವಸ್ವವಾಯಿತು.

ಆತ ನೀರವ.

"ಎಲ್ಲಿ ನನ್ನ ಪತಿ? ಒಳಗಿಲ್ಲವೇ?"

ಬಾಗಿಲು ಬೀಗ ತೆರೆದು ಅವಳನ್ನು ಒಳಗೆ ಹೋಗಲು ಆ ರಕ್ಷಕ ದಾರಿ ತೋರಿಸಿದನು. ವಿದ್ಯುದ್ವೇಗದಿಂದ ಅಕ್ಕಬ್ಬೆಯು ಪತಿಯಿದ್ದೆಡೆಗೆ ಚಿಮ್ಮಿದಳು. ಮಲಗಿದ್ದ ಅವನನ್ನು ಎತ್ತಿ ಕುಳ್ಳಿರಿಸಿದಳು. ಆದರೆ ಅವನು ಕುಸಿದು ಅಲ್ಲಿಗೆ ದೊಪ್ಪನೆ ಬಿದ್ದನು. ಅವನ ಗೋಣು ಮುರಿದಿತ್ತು.

"ಇಗೋ ನಿಮಗಾಗಿ ಹತಭಾಗ್ಯೆ ಬಂದಿದ್ದೇನೆ. ಮಾತಾಡಿ ನನ್ನ ದೇವರೇ. ನಿಮ್ಮ ಬಿಡುಗಡೆಯ ಪತ್ರ ತಂದಿದ್ದೇನೆ. ಏಳಿ ನಗಾಡಿ" ಅವನ ಕಳೇಬರ ಎತ್ತಿದಳು. ಆದರೆ ಅವನು ಶಾಶ್ವತವಾಗಿ ಬಿಡುಗಡೆಗೊಂಡು ಆಗ ಮೂರು ನಾಲ್ಕು ಗಂಟೆ ಸಂದಿದ್ದುವು. ಅಕ್ಕಬ್ಬೆಯು ಪರಿಪರಿಯಾಗಿ ಹಲುಬಿದಳು. ಅವಳ ಮನದನ್ನ ನೀರವ. ಅವನು ಅದೃಶ್ಯರೂಪದಿಂದ ಮೂಕಾಶ್ರು ಪ್ರವಾಹ ಹರಿಸುತ್ತಿದ್ದಿರಬೇಕು. ಹುಚ್ಚಿಯಂತೆ ಅಕ್ಕಬ್ಬೆಯು ಸೆರೆಮನೆಯಿಡೀ ತನ್ನ ವಲ್ಲಭನ ಜೀವವನ್ನು ಅರಸಿ ಅರಸಿ ಅವನಿಗಾಗಿ ಹಲುಬಿ ಹಲುಬಿ ನೊಂದುಹೋದಳು, ಸೊರಗಿಹೋದಳು.

ಕ್ರಮೇಣ ಭಾವೋದ್ವೇಗದ ಮೇಲೆ ಪುನಃ ಬುದ್ಧಿಯ ಅಧಿಕಾರ ನಡೆಯಲಾರಂಭಿಸಿತು. "ನನ್ನ ಸ್ವಾಮಿಯ ಬಿಡುಗಡೆಯ ಕಾಗದ ನಿಮಗೆ ಕೊಟ್ಟಿರುವಾಗ ಅವನನ್ನು ಹೇಗೆ ತೂಗಿಕೊಂದಿರಿ?" ಆವೇಶದಿಂದ ಪ್ರಶ್ನಿಸಿದಳು.

"ಇಲ್ಲ ತಾಯೀ. ನಮಗೆ ರಾಜಾಜ್ಞೆಯಿತ್ತು ಅವನನ್ನು ಮಧ್ಯರಾತ್ರಿಯಲ್ಲಿಯೇ ತೂಗಿ ಕೊಂದುಬಿಡಬೇಕೆಂದು" ಪಾಲಕನಿಗೂ ದುಃಖವಾಗಿತ್ತು.

"ಲಂಪಟ, ನೀಚ, ಪಾತಕಿ, ದ್ರೋಹಿ" ಅಕ್ಕಬ್ಬೆಯು ಅರಸನನ್ನು  ಕೆಟ್ಟರಸನನ್ನು  ವಿಧವಿಧವಾಗಿ ಶಪಿಸಿ ಪುನಃ ಅವನಿದ್ದೆಡೆಗೆ ಓಡಿದಳು.

"ಏನು ನಿನ್ನ ಗಂಡ ಸಿಕ್ಕಿದನೋ ಅಥವಾ ಆ ಗಂಡವೇ ನಿನಗೆ ತಪ್ಪಿಹೋಯಿತೋ ಸುಂದರೀ" ಅರಸನ ಕೊಂಕುನುಡಿ.

"ನೀನು ನಿನ್ನ ವಾಗ್ದಾನದಂತೆ ನಡೆಯಲಿಲ್ಲ."

"ಓಹೋ ಹೋ ಏನು ನನ್ನ ಮಹಾ ವಾಗ್ದಾನ? ಆ ಕಾಗದಲ್ಲಿರುವಂತೆ ನಿನ್ನ ಗಂಡನನ್ನು ನಿನಗೆ ಕೊಡಿಸಿರುವೆನಲ್ಲ. ಇನ್ನು ಅವನ ತೊಂದರೆಯೇ ಇಲ್ಲ. ನನ್ನ ಅಂತಃಪುರ ಸೇರಿಬಿಡು" ಅರಸನ ವಿಕಟಾಟ್ಟಹಾಸ.

"ವಿಶ್ವಾಸಘಾತಕಿಗೆ ಪರಮಾತ್ಮನು ಯಾವ ವಿಧದಲ್ಲಿಯಾದರೂ ಶಿಕ್ಷೆ ವಿಧಿಸದೇ ಇರಲಾರನು" ಎಂದು ಅಕ್ಕಬ್ಬೆಯು ಗರ್ಜಿಸಿ ಅಲ್ಲಿಂದ ಓಡಿಹೋದಳು. ಕುಟ್ಟರಸನು ಅಕ್ಕಬ್ಬೆಯನ್ನು ಆಗಲೇ ಮರೆತನು. ಮತ್ತೆ ರಾಜ್ಯದ ಕಾರ್ಯ ಎಂದಿನಂತೆ ಕ್ರೌರ್ಯದಿಂದ ದಕ್ಷತೆಯಿಂದ ಸಾಗಿತು.

ಲಿಂಗರಾಜನು ವೈಭವಶಾಲಿಯಾದ ಅರಸು. ಮಡಿಕೇರಿಯಲ್ಲಿದ್ದಾಗ ಪ್ರತಿ ಸಾಯಂಕಾಲವೂ ಅವನು ರಾಜಠೀವಿಗೊಪ್ಪುವ ಉನ್ನತ ಅಶ್ವವನ್ನೇರಿ ವಾಯುವಿಹಾರಾರ್ಥ ಹೋಗುತ್ತಿದ್ದನು. ಆಪ್ತ ಜನಪರಿವೇಷ್ಟಿತನಾಗಿ ಸಾಗುತ್ತಿದ್ದ ಈ ಯುವಕ ಮಹಾರಾಜನ ಪರಿವಾರ, ಪಟ್ಟಣದ ಹಿರಿಯರಲ್ಲಿ ರಾಜನ ವಿಷಯ ಗೌರವಾಭಿಮಾನಗಳನ್ನೂ ಕಿರಿಯರಲ್ಲಿ ಭಯ ಮರ್ಯಾದೆಗಳನ್ನೂ ಬೀರುತ್ತಿದ್ದಿತು.

ಒಂದು ದಿನ ಸಾಯಂಕಾಲ ರಾಜನು ರಾಜಾಸೀಟಿನಲ್ಲಿ (ಈಗಿನ ನಾಮಧೇಯ) ಕುಳಿತು ದಿವ್ಯ ಸ್ವರ್ಗೀಯ ದೃಶ್ಯಾವಲೋಕನ ಮಾಡುತ್ತಿದ್ದನು. ಪಶ್ಚಿಮದಲ್ಲಿ ಬೆಟ್ಟಗಳ ಸಾಲಿನ ಮೇಲೆ ಸಂಜೆಯ ಸೂರ್ಯನು ಮಿರಮಿರನೆ ಮಿರುಗುತ್ತಿದ್ದನು, ಚೆಂಬೆಳಕಿನ ರಸವನ್ನು

ಸುರಿಯುತ್ತಿದ್ದನು. ಮೇಘ ಸಮೂಹಗಳ ಮಧ್ಯೆ ಸೂರ್ಯಕಿರಣ ಕುಂಚಗಳು ಪ್ರವೇಶಿಸಿ ಅವುಗಳಿಗೆ ಪರಿಪರಿಯ ಸುಂದರ ವರ್ಣಗಳನ್ನೂ ಸ್ವರೂಪಗಳನ್ನೂ ಬಳಿದಿದ್ದುವು. ವನರಾಶಿ ಜ್ಯೋತಿಸಮುದ್ರದಲ್ಲಿ ಮುಳುಗಿ ಮೂಕಾನಂದವನ್ನು ಅನುಭವಿಸುತ್ತಿತ್ತು. ರಾಜನು ಪ್ರಕೃತಿಯ ಈ ದಿವ್ಯ ಸನ್ನಿಧಾನದಲ್ಲಿ ಈ ರಸಮಯ ಸನ್ನಿವೇಶದಲ್ಲಿ ತಾದಾತ್ಮ್ಯ ಹೊಂದಿ ಪಾರವಶ್ಯವನ್ನೈದಿದ್ದನು. ರಾಜಕಾರ್ಯವೆಲ್ಲವೂ ಆ ಕ್ಷಣ ಅವನಿಂದ ದೂರವಾಗಿದ್ದುವು. ಅನಂತವನ್ನು ಮನಸ್ಸು ಅರಸುತ್ತಿದ್ದಿತು. ಈ ಸೌಂದರ್ಯದ ನೆಲೆ ಎಂತಹುದು ಇಂತಹ ದೇದೀಪ್ಯಮಾನ ಚೈತನ್ಯವಿರುವ ಪ್ರಕೃತಿಯ ರಹಸ್ಯವೆಂತಹುದು ಎಂದು ಮನಸ್ಸು ಆಲೋಚಿಸುತ್ತಿದ್ದಿತು. ಇಲ್ಲ, ಆಲೋಚನೆಯೂ ಒಂದು ಕಾರ್ಯ. ಮನಸ್ಸು ತನ್ನಿಂದ ತಾನೇ ಹಾಗೆಯೇ ಮೋಡಗಳೆಡೆಯಲ್ಲಿ ತೇಲುತ್ತ ಕಾಂತಾರ ಸಮೂಹಗಳ ಮಧ್ಯೆ ವ್ಯಾಪಿಸುತ್ತ ಈ ರೀತಿಯ ಭಾವನೆಗಳನ್ನು ರೂಪಿಸುತ್ತಿದ್ದಿತು. ಮನಸ್ಸು ಸ್ವೇಚ್ಛೆಯಾಗಿ ವಿಹರಿಸುತ್ತಿದ್ದಂತೆಯೇ ಸೂರ್ಯನು ಮರೆಯಾಗಿ ಕೆಂಪು ಬಣ್ಣವು ಮಾಯವಾಯಿತು. ರಾಜನು ಭಾವಸಮಾಧಿಯಿಂದ ಮರಳಿದನು ಅರಮನೆಗೆ ಹೊರಡಲು ಅನುವಾದನು. ಇನ್ನೇನು ಕುದುರೆಯನ್ನು ಚಬುಕಿಸಬೇಕು. ಆಗಲೇ ಪಶ್ಚಿಮ ದಿಕ್ಕಿನ ಬೆಟ್ಟದಂಚಿನಿಂದ "ರಾಜಾ ಮಹಾಪ್ರಭೂ! ನ್ಯಾಯಪರಿಪಾಲನೆಯಾಗಬೇಕು" ಎಂದು ಕೂಗು ಕೇಳಿತು.

ರಾಜನು ಕುದುರೆಯ ಲಗಾಮು ಜಗ್ಗಿ ಆ ಕಡೆಗೆ – ಎಡಗಡೆಗೆ, ತಿರುಗಿದನು. ಸಂಜೆಗತ್ತಲಿನ ಹಿನ್ನೆಲೆಯಲ್ಲಿ ದೇಹಪೂರ್ಣ ವಸ್ತ್ರಾಚ್ಛಾದಿತ ವ್ಯಕ್ತಿಯೊಂದು ರಾಜನ ಕುದುರೆಯ ಬುಡದಲ್ಲಿ ಬಂದು ಬಿದ್ದು "ನ್ಯಾಯಪರಿಪಾಲನೆಯಾಗಬೇಕು" ಎಂದು ಒರಲಿತು.

ಸ್ತ್ರೀಯ ಸ್ವರ, ಕರುಣಾಜನಕವಾಗಿದೆ.

"ನ್ಯಾಯ ಕೇಳಿದವರಿಗೆ ಲಿಂಗರಾಜನು ಇಲ್ಲವೆಂದೆನ್ನುವುದಿಲ್ಲ. ಆದರೆ ದಾರಿಯಲ್ಲಿ ಅವನು ವಿಚಾರಣೆ ಮಾಡುವುದಿಲ್ಲ. ನಮ್ಮ ಹಿಂದೆಯೇ ಅರಮನೆಗೆ ನೀನು ಬಾ" ರಾಜನ ನಿರ್ಧಾರಪೂರಿತ ಸ್ಪಷ್ಟವಾಣಿ.

ಅರಮನೆಯಲ್ಲಿ ಲಿಂಗರಾಜನು ಹತಭಾಗ್ಯೆಯ ಕತೆ ವಿಚಾರಿಸಿದನು. ಅಕ್ಕಬ್ಬೆಯು ನಡೆದ ಸಂಗತಿಯನ್ನು ಹೇಳಿದಳು. ಲಿಂಗರಾಜನ ಹೃದಯ ಕ್ಷೋಭೆಗೊಂಡಿತು. ಹುಬ್ಬು ಗಂಟಿಕ್ಕಿ "ಇದು ಸಾಧ್ಯವೇ? ಕುಟ್ಟಪ್ಪನು ಹೀಗೆ ಮಾಡಿರಬಹುದೇ" ಎಂದು ಪ್ರಶ್ನಿಸಿಕೊಂಡನು.

"ನಿಜ ಮಹಾಪ್ರಭು. ಅನಾಥೆಯನ್ನು ರಕ್ಷಿಸಬೇಕು. ನನಗೆ ನ್ಯಾಯ ದೊರೆಯಬೇಕು."

ಅಕ್ಕಬ್ಬೆಯ ದೀನವದನ, ಅವಳ ಸ್ವರೂಪ, ಅವಳ ಕಥನರೀತಿ ಇವುಗಳಿಂದ ಲಿಂಗರಾಜನು ಅವಳ ಹೇಳಿಕೆಯ ಬಗೆಗೆ ಸಂಶಯಪಡಲಿಲ್ಲ. ಆದರೆ ಸ್ವಾಮಿ ಭಕ್ತ ಅತುಳ ಪರಾಕ್ರಮಿ ಕುಟ್ಟಪ್ಪನು ಒಂದು ಹೆಂಗುಸಿಗೆ ಈ ರೀತಿಯ ಅನ್ಯಾಯ ಮಾಡಿರಬಹುದೇ? ರಾಜನ ಅಂತರಾತ್ಮ ಕುಟ್ಟಪ್ಪನು ದೋಷಿಯಾಗಿರಲಾರ ಎಂದೆನ್ನುತ್ತಿದ್ದಿತು. ದೃಷ್ಟಿ ಅಂತರ್ಮುಖದೊಡನೆ ಕುಟ್ಟಪ್ಪನು ಹಾಗೆ ಮಾಡಿರಲಾರನೆಂದೂ ಅದು ಬಾಹ್ಯಮುಖಿಯಾಗಿ ಈ ಸಹಾಯಹೀನ ಸ್ತ್ರೀಯನ್ನು ನೋಡಿದಾಗ ಅವನು ಹಾಗೆ ಮಾಡಿರಲೂಬಹುದು ಎಂದೂ ರಾಜನಿಗ ಅನ್ನಿಸಿತು. ಈ ಸಂದಿಗ್ಧ ಪರಿಸ್ಥಿತಿಯಿಂದ ವಿಮೋಚನೆ ಹೇಗೆ? ರಾಜನಿಗೆ ಮಾರ್ಗ ಹೊಳೆಯಿತು.

"ಅದಿರಲಿ, ನಿನ್ನಲ್ಲಿ ಏನಾದರೂ ರುಜುವಾತಿದೆಯೇ?"

ಕುಟ್ಟರಸನು ತುರಂಗಪಾಲನಿಗೆ ಸ್ವಹಸ್ತದಿಂದ ಬರೆದು ರಾಜಮುದ್ರೆ ಸಹಿತವಾಗಿ ಕೊಟ್ಟ ಪತ್ರವನ್ನು ಅಕ್ಕಬ್ಬೆಯು ರಾಜನಿಗೆ ಒಪ್ಪಿಸಿದಳು.

ಅದನ್ನು ಓದಿದಂತೆ ರಾಜನ ಆಕ್ರೋಶ ಮಿತಿಮೀರಿತು. ಆ ತಾರುಣ್ಯದ ದುಂಡುಮೊಗವು ಸಂಜೆಯ ಸೂರ್ಯನಂತೆ ಕೆಂಪಾಗಿ ಬಿರಿಯುವಂತಾಯಿತು.

"ನೀಚಾ ಅಧಮಾ ನೀನೇನು ಮಾಡಿಬಿಟ್ಟೆಯೋ? ನಮ್ಮ ಕುಲಕ್ಕೆ ದೇಶಕ್ಕೆ ಅವಮಾನವಾಯಿತು. ನನ್ನ ಅಭಿಮಾನಕ್ಕೆ ಧಕ್ಕೆ ಬಂದಿತು" ಎನ್ನುವ ಕೂರುನುಡಿಗಳು ರಾಜನ ಬಾಯಿಯಿಂದ ಭೋಂಕನೆ ಉದುರಿದುವು.

"ಈ ಪತ್ರವು ನನ್ನಲ್ಲಿಯೇ ಇರಲಿ. ನಿನಗೆ ನ್ಯಾಯ ದೊರೆಯುವುದು, ಹೆದರಬೇಡ. ನಿನ್ನನ್ನು ಇನ್ನೊಮ್ಮೆ ಕರೆಯಿಸುವವರೆಗೆ ನಮ್ಮ ಪರಿವಾರದವರ ಜತೆಯಲ್ಲಿ ಅರಮನೆಯಲ್ಲಿಯೇ ಇರು" ಎಂದು ರಾಜನು ಆಜ್ಞಾಪಿಸಿದನು.

ಪಾಳೆಯಗಾರ ಕುಟ್ಟರಸನಿಗೆ ಲಿಂಗರಾಜನ ಕರೆಬಂದಾಗ ಅವನಿಗೆ ಬಹಳ ಹೆಮ್ಮೆಯಾಯಿತು. ಇನ್ನೂ ಬಹುಮಾನ ರಾಜನಿಂದ ತನಗೆ ದೊರೆಯುವುದು. ತಾನು ದಕ್ಷತೆಯಿಂದ ರಾಜ್ಯಪರಿಪಾಲನೆ ಮಾಡುತ್ತಿರುವುದಕ್ಕೆ ಮೆಚ್ಚಿ ಅವನು ಪಾರಿತೋಷಿಕವನ್ನೀಯುವನು. ಅಂತಹ ಸುಸಂದರ್ಭವೇನೋ ಈಗ ಬಂದಿರಬೇಕೆಂದು ಅವನು ಸಂತೋಷೋತ್ಸಾಹಗಳಿಂದ ಕೊಡಗಿಗೆ ಹೊರಟು ಲಗುಬಗೆಯಿಂದ ಸಾಗಿದನು. ತನಗೇನೋ ನಿಧಿಯು ಕಾದಿದೆ ಎಂದು ತೀವ್ರಗತಿಯಿಂದ ಬಂದನು. ಮಡಿಕೇರಿಯನ್ನು ಯಾವಾಗ ಸೇರಿ ರಾಜನಿಗೆ ತನ್ನ ವಿನಯಪೂರ್ವಕ ಪ್ರಣಾಮಗಳನ್ನು ಅರ್ಪಿಸಿ, ತನ್ನ ಆಳ್ವಿಕೆಯ ಸಾರ್ಥಕ್ಯವನ್ನು ವಿವರಿಸಿ ಪ್ರಶಂಸೆಯನ್ನೂ ಉಡುಗೊರೆಯನ್ನೂ ಪಡೆದೇನು ಎಂದು ಅತ್ಯುತ್ಸುಕತೆಯಿಂದ ಧಾವಿಸಿಬಂದನು. ಆ ಜಂಬದ ಹುಂಜ ಗರ್ವದಿಂದ ತಲೆಯೆತ್ತಿ ಬೀಗುತ್ತ ಬಂದಿತು.

ಕುಟ್ಟರಸನು ಅರಮನೆಯ ಮುಂದೆ ಬಂದೊಡನೆಯೇ ಅವನನ್ನು ರಾಜನೆಡೆಗೆ ಮರ್ಯಾದೆಸಹಿತ ಒಯ್ದರು. ಈ ಒಂದು ಉಪಚಾರದಿಂದ ಅವನಿಗೆ ಇನ್ನಷ್ಟು ಸಂತೋಷವಾಯಿತು. ರಾಜನಿಗೆ ಪ್ರಣಾಮವರ್ಪಿಸುವಾಗಲೇ "ಕುಟ್ಟಪ್ಪಾ! ಈ ಹೆಂಗುಸನ್ನು ಕಂಡಿದ್ದೀಯಾ?" ಎಂದು ಲಿಂಗರಾಜನು ಗರ್ಜಿಸಿದನು ಘೋರ ಪರಿಸ್ಥಿತಿ!

ಇಂತಹ ಒಂದು ಪ್ರಸಂಗವನ್ನು ಎಲ್ಲೆಲ್ಲಿಯೂ ಎಂದೆಂದಿಗೂ ಕನಸಿನಲ್ಲಿಯೂ ನೆನಸಿನಲ್ಲಿಯೂ ನೆನೆಸಿರದ ಊಹಿಸಿರದ ಕುಟ್ಟರಸನು, ಗರ್ವಿಷ್ಠನು, ರಾಜನ ಪ್ರಶ್ನೆಯ ಶೀವಿಯಿಂದ ಧ್ವನಿಯಿಂದ ಬೆಚ್ಚಿ ಧಕ್ಕೆಗೊಂಡು ಸ್ತಂಭಿತನಾದನು, ಮೂಕನಾದನು. ಅವನ ದುರಭಿಮಾನಕ್ಕೆ ಭಯಂಕರಾಘಾತ ಬಿದ್ದಿತು. ರಾಜನನ್ನೇ ಅವನು ದಿಟ್ಟಿಸಿದನು.

ರಾಜನ ಕಣ್ಣುಗಳು ಗರಗರನೆ ತಿರುಗಿದುವು "ಹೇಳು ನಾಯೀ! ನೀನು ಈ ಹೆಂಗುಸನ್ನು ಎಂದಾದರೂ ಕಂಡಿರುವೆಯಾ? ಆ ಕಡೆ ತಿರುಗಿ ನೋಡು ದ್ರೋಹೀ." ಅಪಮಾನದ ಗಾಯದ ಮೇಲೆ ನಿಂದನೋಕ್ತಿಯ ಬರೆ.

ಕುಟ್ಟಪ್ಪನು ಬಲಾತ್ಕಾರದಿಂದ ಹಿಂತಿರುಗಿ ಅಕ್ಕಬ್ಬೆಯನ್ನು ನೋಡಿ ಬೆಚ್ಚಿದನು. ಆದರೆ ಅದನ್ನು ತೋರ್ಪಡಿಸಲಿಲ್ಲ. ಅವನೇನು ಸಾಮಾನ್ಯ ವ್ಯಕ್ತಿಯಲ್ಲ. ಮಹಾ ಮಹಾ ಸಮರಗಳಲ್ಲಿ ಭಾಗಿಯಾಗಿ ಜಯಸಂಪಾದಿಸಿದವನು. ಪ್ರಸಂಗದ ಕಠಿಣತೆಯನ್ನು ಅರಿತು ಮನಸ್ಸಿಗೆ ಸಮಾಧಾನ ತಂದುಕೊಂಡು ತೊದಲಿದ ನಾಲಗೆಯನ್ನು ಸರಿಪಡಿಸಿಕೊಂಡು "ಮಮಮಹಾಪ್ರಭುಗಳಿಗೆ ದೀನ ಸೇವಕನ ಮೇಲೆ ಏನೋ ಕೋಪ ಬಂದಿರುವ ಹಾಗಿದೆ. . ."

"ಮುಚ್ಚು ಬಾಯಿ. ನನ್ನ ಪ್ರಶ್ನೆಗೆ ನೇರ ಉತ್ತರಕೊಡು. ಈ ಹೆಂಗುಸನ್ನು ನೀನು ಈ ಮೊದಲು ನೋಡಿರುವೆಯಾ?"

"ಇಲ್ಲ ಪ್ರಭುಗಳೇ, ಖಂಡಿತವಾಗಿಯೂ ಇಲ್ಲ."

"ನಿನ್ನಿಂದ ಆ ಉತ್ತರವನ್ನು ನಿರೀಕ್ಷಿಸಿದ್ದೆ. ನೋಡಲಿಲ್ಲವಂತೆ ವಂಚಕ ಈ ಕಾಗದ ನೋಡು" ರಾಜನು ಅಕ್ಕಬ್ಬೆಯಿಂದ ಪಡೆದ್ದ ಕಾಗದವನ್ನು ಕುಟ್ಟಪ್ಪನಿಗೆ ಕೊಟ್ಟನು.

ಕುಟ್ಟಪ್ಪನು ದಿಙ್ಮೂಢನಾದನು. ನೀರವ.

"ಹೇಳು ನಾಯೀ ಇವಳ ಪರಿಚಯ ನಿನಗೀಗಲಾದರೂ ಆಯಿತೇ?" ಅರಸನು ಉಕ್ಕಿನ ದೃಷ್ಟಿಯಿಂದ ಕುಟ್ಟಪ್ಪನನ್ನು ಇರಿಯುತ್ತಿದ್ದನು.

"ಹೌದು ಪ್ರಭುಗಳೇ. ಅವಳ ಸ್ವರೂಪ ಬದಲಾಗಿ ಹೋಗಿದೆ. ನನಗೆ ತಿಳಿಯಲಿಲ್ಲ."

"ಕಾರಣ ಯಾರೋ ಮಡೆಯಾ? ನಿಷ್ಕಾರಣವಾಗಿ ಅವಳ ಜೀವನವನ್ನೇ ಹಾಳು ಮಾಡಿದೆ."

"ರಾಜಕಾರಣದ ಮಹಾ ವಿಚಾರದ ಮುಂದೆ ಒಂದೆರಡು ವ್ಯಕ್ತಿಗಳು ನಾಶವಾದರೂ ರಾಜ್ಯದ ಹಿತದ ದೃಷ್ಟಿಯಲ್ಲಿ ಮಹಾಪ್ರಭುಗಳು ಅದನ್ನು ಪರಿಗಣಿಸಬಾರದು."

"ಕುಟ್ಟಪ್ಪಾ! ನಿನ್ನ ನಾಲಗೆ ಬಹಳ ಹರಿತವಾಗಿದೆ. ನಿನ್ನನ್ನು ನ್ಯಾಯಪಾಲನೆ ಮಾಡಲು ಅಲ್ಲಿ ಬಿಟ್ಟು ಬಂದರೆ ಈ ರೀತಿ ನೀನು ನೀತಿನ್ಯಾಯಬಾಹಿರನಾಗಿ ವರ್ತಿಸುವುದೇ? ರಕ್ಷಣಾಹೀನರ ದುರವಸ್ಥೆಯನ್ನು ದುರುಪಯೋಗಪಡಿಸಿಕೊಳ್ಳುವುದೇ? ನಿನ್ನ ಹೇಯ ಕಾಮಾಗ್ನಿಗೆ ಮುಗ್ಧ ಸ್ತ್ರೀಯರನ್ನು ಬಲಿಗೊಡುವುದೇ? ನೀನೇನು ಮನುಷ್ಯನೋ ಪಶುವೋ ಅಥವಾ ಶನಿಯೋ? ನಿನ್ನ ರಕ್ತದಲ್ಲೇನು ವಿಷ ಹರಿಯುತ್ತಿದೆಯೇ? ಪರಿಗಣಿಸಬಾರದಂತೆ ರಾಜ್ಯದ ಹಿತದೃಷ್ಟಿಯಲ್ಲಿ ಒಂದೆರಡು ವ್ಯಕ್ತಿಗಳ ನಾಶವನ್ನು. ನಿನ್ನಂತಹ ಅಧಮ ನರಕೀಟಗಳ ನಾಶದಿಂದ ರಾಜ್ಯದ ಹಿತವು ವರ್ಧಿಸುವುದು."

ಕುಟ್ಟರಸನು ನೆಲನೋಡುತ್ತ ಔಡುಗಚ್ಚಿದ್ದನು. ನೆಲವನ್ನು ಕೆರೆಯುತ್ತಿದ್ದನು, ಮೌನ.

"ಈಕೆಯ ಪತಿಯು ಅಪರಾಧಿಯೋ ನಿರಪರಾಧಿಯೋ ಆ ಪ್ರಶ್ನೆ ಇಲ್ಲಿ ಅಸಮಂಜಸ. ಅವನ ಬಿಡುಗಡೆಗೆ ನೀನು ಅತ್ಯಂತ ಹೇಯವಾದ ಪಾಪಕರವಾದ ಪ್ರತಿಫಲವನ್ನು ಅಪೇಕ್ಷಿಸಿದೆ, ಅದೂ ನಿನಗೆ ದೊರೆಯಿತು. ಆದರೆ ನಿನ್ನ ಪಾಲಿನ ಕರ್ತವ್ಯ, ಆ ಷರತ್ತನ್ನು ನೀನು ಪಾಲಿಸಿದೆಯೋ?"

"ನಾ ನಾ ನಾ. . ನು ಒಂದು ಮ ಮಾರ್ಗ…"

"ಬೊಗಳೋ ನಿನಗೆ ಜೀವದ ಮೇಲೆ ಆಸೆಯಿದ್ದರೆ ಇದಕ್ಕೆ ಪರಿಹಾರ ಉಂಟೇನೋ"?

ರಾಜನ ಬಾಯಿಯಿಂದ ತಿಳಿದೋ ತಿಳಿಯದೆಯೋ ಪರಿಹಾರ ಎನ್ನುವ ಶಬ್ದ ಹೊರಟುಬಿಟ್ಟಿತು. ಕುಟ್ಟರಸನು ಮರುಕ್ಷಣದಲ್ಲಿ ಪರಿಹಾರವನ್ನು ಸೂಚಿಸಿದನು. ನೀತಿಯ ಸೂಕ್ಷ್ಮವನ್ನರಿಯದ ದಪ್ಪತಲೆಯ ಕುಟ್ಟಪ್ಪನು ಪರಿಹಾರ ಹೇಳಿದನು.

"ನಾನು ಪರಿಹಾರ ಸೂಚಿಸಬಲ್ಲೆ ಮಹಾಪ್ರಭೂ."

"ಓಹೋ ಪರಿಹಾರ, ಅದೇನೋ ಪರಿಹಾರ? ಅವಳ ಗಂಡನಿನ್ನು ಬದುಕುವನೇನೋ?"

"ನಾನೇ ಅವಳ ಗಂಡನಾಗುತ್ತೇನೆ. ನನ್ನಂತಹ…"

"ಬೇಡ ಬೇಡ ನಾನು ಆತ್ಮಹತ್ಯೆಯನ್ನಾದರೂ ಮಾಡಿಕೊಂಡು ಸಾಯುವೆನು" ಅಕ್ಕಬ್ಬೆಯು ರೋದನ ಧ್ವನಿಯಲ್ಲಿ ಕೂಗಿದಳು.

ರಾಜನು ಅವಳಿಗೆ ಅಲ್ಲಿಂದ ಹೊರಟುಹೋಗಲು ಹೇಳಿದನು. ಸೇವಕರು ಅವಳನ್ನು ಕರೆದುಕೊಂಡು ಹೋದರು.

"ನೀನು ಅವಳಿಗೆ ಗಂಡನಾದರೆ?" ಲಿಂಗರಾಜನ ಕೆಂಡದಂತಹ ಮುಖ ಲಘುಹಾಸ್ಯದ ತುಸುನಗೆಯನ್ನು ತಳೆಯಿತು.

ಇದರಿಂದ ಧೈರ್ಯಗೊಂಡ ಕುಟ್ಟಪ್ಪನು "ಮಹಾರಾಜರೇ! ನನಗೆ ಹೇಗೂ ಮದುವೆಯಾಗಿರುವುದಿಲ್ಲ. ಅವಳನ್ನೇ ನಾನು ವರಿಸುವೆನು. ಹೋದ ಗಂಡನಿಗಿಂತಲೂ ಯೋಗ್ಯ ಉತ್ತಮ ಪತಿ ಅವಳಿಗೆ ದೊರೆತಂತಾಯಿತು ಪ್ರಭುಗಳೇ!" ಎಂದು ವಿಜ್ಞಾಪಿಸಿದನು.

ಲಿಂಗರಾಜನ ಮುಖಪರಿವರ್ತನೆ ಅತ್ಯದ್ಭುತವಾಗಿದ್ದಿತು. ಆ ಕ್ಷಣ ಅವನು ಹಸನ್ಮುಖದಿಂದ "ಅದು ಒಳ್ಳೆಯ ಉಪಾಯ ಕುಟ್ಟಪ್ಪ. ನೀನು ಈ ದಿನ ಹೋಗಿ ವಿಶ್ರಾಂತಿ ಪಡೆದುಕೋ. ನಾಳೆಯ ದಿನ ನಮ್ಮ ಸಮಕ್ಷಮದಲ್ಲಿ ಮದುವೆಯು ನೆರವೇರಬೇಕು ಆಗಬಹುದೇ?"

"ಮಹಾರಾಜರ ಚಿತ್ತ… ಈ ಬಡವನು ಕನ್ನಡ ಜಿಲ್ಲೆಯಲ್ಲಿ ಪ್ರಭುಗಳ ಹೆಸರು ಸ್ಥಿರವಾಗುವಂತೆ ಏನೆಲ್ಲ ಕೆಲಸ ಮಾಡಿದ್ದಾನೆಂದು ತಾವು ಕೇಳಬೇಕು, ಬಿನ್ನವಿಸಲೇ?"

"ಶುಭ ಕಾರ್ಯ ಮೊದಲು ನೆರವೇರಲಿ. ಆ ಮೇಲೆ ಆ ವಿವರವನ್ನೂ ತಿಳಿಯೋಣ. ಈಗ ಹೋಗು" ಎಂದು ರಾಜನು ಒಳ ನಡೆದನು. ರಾಜನಿಗೆ ನಮಸ್ಕರಿಸಿ, ತನ್ನ ಬುದ್ಧಿವಂತಿಕೆಯಿಂದ ಪುನಃ ರಾಜನ ಕೃಪೆಯನ್ನು ಸಂಪಾದಿಸಿದೆನೆಂದು ಸಂತೋಷದಿಂದ ಕುಟ್ಟಪ್ಪನು ಮರಳಿದನು. ತನಗೆ ಇಂತಹ ವಿಪತ್ತನ್ನು ತಂದೊಡ್ಡಿದ ಆ ಯಃಕಶ್ಚಿತ್ ಸ್ತ್ರೀಯ ಮೇಲೆ ಮನಸ್ಸಿನೊಳಗೆ ಬಹಳವಾಗಿ ರೇಗಾಡಿದನು. ಹೆಸರಿಗೆ ಮದುವೆಯಾಗಲಿ. ಮುಂದೆ ಆ ಹೆಂಗುಸಿನ ನಾಶವನ್ನು ಸುಲಭವಾಗಿ ಗುಪ್ತವಾಗಿ ಸಾಧಿಸಬಹುದೆಂದು ಹಲ್ಕಡಿದು ನಿರ್ಧರಿಸಿದನು.

ಅಕ್ಕಬ್ಬೆಯು ಆ ನರಪಶು, ಘಾತಕಿ ಕುಟ್ಟರಸನನ್ನು ಮದುವೆಯಾಗಲು ಸಮ್ಮತಿಸುವಳೇ? ಎಂದೆಂದಿಗೂ ಇಲ್ಲ. ಲಿಂಗರಾಜನ ಆಶ್ವಾಸನೆ ಭರವಸೆಗಳ ಮೇಲೆ ಭಾರಹಾಕಿ ಭಾರವಾದ ಮನಸ್ಸಿನಿಂದ ದುಃಖಪೂರಿತವಾದ ಹೃದಯದಿಂದ ಈ ಕೃತ್ರಿಮ ವಿವಾಹಕ್ಕೆ ಸಮ್ಮತಿಯಿತ್ತಳು. ಮರುದಿನ ರಾಜಧಾನಿ ಮಡಿಕೇರಿಯಲ್ಲಿ ಸಡಗರವೇ ಸಡಗರ. ಲಿಂಗರಾಜನ ಬಲಗೈ ಬಂಟ ಕುಟ್ಟಪ್ಪನಿಗೆ ರಾಜನೇ ಸ್ವತಃ ಅರಮನೆಯಲ್ಲಿ ಮದುವೆ ಮಾಡಿಸುವನಂತೆ. ಆಶ್ರಿತರಿಗೆ ದಾತಾರ, ರಾಜನಿಷ್ಠ ಸೇವಕರಿಗೆ ಸಾಕ್ಷಾಜ್ಜನಕ ಮಹಾರಾಜ ಈ ಲಿಂಗರಾಜ ಎಂದು ಪ್ರಜೆಗಳು ಅವನನ್ನು ಕೊಂಡಾಡಿದರು. ಮಹಾವಿವಾಹ ಸಂಭ್ರಮಕ್ಕೆ ಆಮಂತ್ರಿತರಾಗಿ ರಾಜನ ಅಧಿಕಾರೀ ವರ್ಗದವರೂ ಪುರದ ಇತರ ಆಢ್ಯ ಮಹನೀಯರೂ ಮಹಿಳೆಯರೂ ಬಂದು ಸೇರಿದ್ದರು. ಮಂಗಳಕರ ಪ್ರಾತಃಕಾಲ ಸುಂದರವಾದ ಅರಮನೆ. ವಾದ್ಯ ಘೋಷದ ವೈಭವ. ಸುಮಂಗಲೆಯರು ನಾನಾ ವಿಧವಾಗಿ ಸಿಂಗರಿಸಿಕೊಂಡು ಬಂದು ಸೇರಿದರು. ಅಧಿಕಾರಿಗಳು ದರ್ಬಾರು ಪೋಷಾಕಿನಿಂದ ಬಂದು ಸಭೆಯನ್ನಲಂಕರಿಸಿದರು. ಸೈನಿಕರು ಸಭೆಯ ಅಂಚಿನಲ್ಲಿ ಕೋಟೆಯ ಗೋಡೆಯಂತೆ ಸಾಲಾಗಿ ನಿಂತು ಸಭೆಗೆ ಕಳೆಗೊಟ್ಟರು.

"ಕುಟ್ಟರಸನು ಅದೃಷ್ಟಶಾಲಿ. ರಾಜನ ಕೃಪೆ ಅವನ ಮೇಲೆ ಚೆನ್ನಾಗಿದೆ" ಎಂದು ಮಹನೀಯರೂ "ನವವಧು ಎಂತಹ ಸುರಸುಂದರಿಯೋ" ಎಂದು ಮಹಿಳೆಯರೂ ಮಾತಾಡಿಕೊಂಡರು.

ಸಭಾಮಧ್ಯದಲ್ಲಿದ್ದುದು ಉನ್ನತವೇದಿಕೆ, ಶೃಂಗರಿಸಿದ ವಿವಾಹಮಂಟಪ. ವಾದ್ಯಘೋಷ ದಿಗ್ದಿಗಂತಗಳಲ್ಲಿ ಅನುರಣಿತವಾಗಿ ಬಾನೆಡೆಗೆ ಪ್ರವಹಿಸುವಾಗ ಕುಟ್ಟಪ್ಪ ಅಕ್ಕಬ್ಬೆಯರ ವಿವಾಹವು ನೆರವೇರಿತು. ರಾಜನೇ ವಧುವಿನ ಕಡೆಯಿಂದ ಅವಳಿಗೆ ತಂದೆಯೂ ತಾಯಿಯೂ ಹಿತೈಷಿಯೂ ಆಗಿ ಧಾರೆಯೆರೆದುಕೊಟ್ಟನು.

"ಸುಮುಹೂರ್ತಾ ಸಾವಧಾನ ಸುಲಗ್ನಾ ಸಾವಧಾನ" ವೇದ ಮಂತ್ರವು ವಿವಾಹಬಂಧನವನ್ನು ಶಾಶ್ವತಗೊಳಿಸಿ ಹರಸಿತು.

ಪ್ರಶಾಂತ ಗಂಭೀರ ಸುಂದರವದನೆ ಅಕ್ಕಬ್ಬೆಯನ್ನು ಸಕಲ ಮಹಿಳೆಯರೂ ತ್ರಿಪುರ ಸುಂದರಿ ಎಂದು ಹೊಗಳಿದರು. ಕುಟ್ಟಪ್ಪನು ಆನಂದವಾರಿಧಿಯಲ್ಲಿ ತೇಲುತ್ತಿದ್ದನೋ ಸುಖಸಾಮ್ರಾಜ್ಯದ ಉದ್ಯಾನವನದಲ್ಲಿ ವಿಹರಿಸುತ್ತಿದ್ದನೋ ಇಂದ್ರಾಸನವನ್ನೇ ಅಲಂಕರಿಸಿದ ಸಂತೊಷವನ್ನು ಸವಿಯುತ್ತಿದ್ದನೋ ಹೇಳಲು ಸಾಧ್ಯವಿರಲಿಲ್ಲ.

ಮದುವೆಯ ವಿಧಿಗಳು ಸಾಂಗವಾಗಿ ಮುಗಿದುವು. ರಾಜನು ಮಂದಹಾಸದಿಂದ ಕುಟ್ಟಪ್ಪನ ಸಮೀಪ ಹೋಗಿ "ಕುಟ್ಟಪ್ಪಾ! ಇಂದಿನಿಂದ ಈ ಸ್ತ್ರೀಯು ನಿನ್ನ ಮಡದಿ, ಧರ್ಮಪತ್ನಿ."

"ಮಹಾಪ್ರಭುಗಳ ಕೃಪೆ."

"ಇವಳೇ ನಿನ್ನ ಪಟ್ಟದರಸಿ."

"ನಿಶ್ಚಯವಾಗಿಯೂ ಮಹಾಪ್ರಭುಗಳೇ."

"ಇಂದಿನಿಂದ ನಿನ್ನ ಅತುಳೈಶ್ವರ್ಯಕ್ಕೂ ನಿನ್ನ ಸ್ಥಿರಚರ ಸೊತ್ತುಗಳಿಗೂ ಇವಳೇ ಉತ್ತರಾಧಿಕಾರಿಣಿ."

"ಅದರಲ್ಲೇನೂ ಸಂದೇಹವಿಲ್ಲ ಮಹಾರಾಜರೆ."

"ಅದೇ ವಿಷಯವನ್ನು ಈ ಕಾಗದದಲ್ಲಿ ಬರೆಯಲಾಗಿದೆ. ಅದರ ಅಡಿಯಲ್ಲಿ ಈ ಸಭೆಯ ಸಮಕ್ಷಮ ನೀನೊಂದು ರುಜುಹಾಕಬೇಕು."

"ಹಾಗೆಂದರೆ?" ಸಂಶಯ ದೃಷ್ಟಿಯಿಂದ ಕುಟ್ಟರಸನು ನೋಡಿದನು.

"ಇದರಲ್ಲಿ ಏನೂ ಕೃತ್ರಿಮವಿಲ್ಲ ಕುಟ್ಟಪ್ಪಾ! ಮನುಷ್ಯ ಸ್ಥಿತಿ ಯಾವಾಗಲೂ ಅಸ್ಥಿರ, ನಂಬಿಕೆಯದಲ್ಲ. ಹಾಗಾಗಿ ಭದ್ರತೆಗಾಗಿ ಮಾತ್ರ ಈ ಪತ್ರ.

ಮನಸ್ಸಿಲ್ಲದಿದ್ದರೂ ಕುಟ್ಟಪ್ಪನು ರುಜುಹಾಕಿಯೇ ಬಿಟ್ಟನು.

ಆ ಒಂದುಕ್ಷಣದಲ್ಲಿ ಲಿಂಗರಾಜನ ಮುಖಛಾಯೆ ಮಾರ್ಪಾಡು ಹೊಂದಿದುದು ಅವರ್ಣನೀಯ. ವೈಶಾಖದ ನಡುಹಗಲು ಕಾರ್ಮೋಡ ಕವಿದು ಜಡಿಮಳೇ ಸುರಿದಂತಹ ಪರಿವರ್ತನೆ. ಹಿಮಾಲಯ ಶಿಖರದ ಔನ್ನತ್ಯದಿಂದ ಶಾಂತ ಸಾಗರದ ಗಭೀರ ಪ್ರಪಾತಕ್ಕೆ ನೆಗೆತ.

"ಕುಟ್ಟಪ್ಪಾ, ನಿನ್ನ ಖಡ್ಗವನ್ನು ಈ ಕಡೆ ಕೊಡು" ರಾಜನ ಸಿಡಿಲು ದನಿಯ ಕಠೋರಾಜ್ಞೆ, ಕುಟ್ಟಪ್ಪನು ಸ್ತಂಭಿತನಾದನು. ಎರಡು ಹೆಜ್ಜೆ ಹಿಂದಿಟ್ಟನು ಅವನ ಅಭಿಮಾನಕ್ಕೆ ಗಾಯವಾತ್ತು. ಸಭಿಕರೆಲ್ಲರೂ ಹೆದರಿ ನಿಶ್ಚಲವಾಗಿ ಎವೆಮುಚ್ಚದೆ ನೋಡುತ್ತಿದ್ದರು.

"ಪಾಪಿಯೇ! ಆ ಖಡ್ಗ ನಿನ್ನಲ್ಲಿರಲು ಯೋಗ್ಯವಲ್ಲ. ಅದನ್ನು ಇಲ್ಲಿ ಕೊಡು" ರಾಜನು ವಜ್ರ ಕಠೋರನಾದನು. ದಿಗ್ಭ್ರಾಂತನಾದ ಕುಟ್ಟಪ್ಪನು ಕ್ರೋಧದಿಂದ ನಡುಗಿದನು. ಖಡ್ಗ ಹಿರಿಯಲು ಕೈ ಸೆಳೆಯುವಾಗಲೇ ರಾಜದೂತರು ಅವನನ್ನು ಬಲವಾಗಿ ಹಿಡಿದಿದ್ದರು. ದೂತನೊಬ್ಬನು ಖಡ್ಗವನ್ನು ಒರೆಯಿಂದೆಳೆದು ರಾಜನಿಗೆ ಕೊಟ್ಟನು.

"ದ್ರೋಹಿಯ ಪಾಪಿಯ ಕೃತ್ಯಗಳಿಂದ ಕಲುಷಿತವಾಗಿರುವ ಈ ಖಡ್ಗ ಉಳಿದಿರಲು ಯೋಗ್ಯವಲ್ಲ" ಎಂದು ರಾಜನು ಅಬ್ಬರಿಸಿ, ಅದನ್ನು ಎರಡು ತುಂಡು ಮಾಡಿ ನೆಲದ ಮೇಲೆ ಎಸೆದನು. ಆ ಭಾಗಗಳು ಕಲ್ಲು ಹಾಸಿದ ನೆಲದ ಮೇಲೆ ಝಣಝಣತ್ಕಾರದಿಂದ ಬಿದ್ದು ಉರುಳಿದಾಗ ಕುಟ್ಟಪ್ಪನಿಗೆ ಪ್ರಾಣವೃಕ್ಷದ ತಾಯಿಬೇರು ಸಡಿಲಿದಂತೆ ಆಯಿತು.

"ನಿನ್ನ ಪಾತಕಕ್ಕೆ ಮರಣದಂಡನೆಯೇ ಶಿಕ್ಷೆ ನಾಯೀ. ಅದೇ ಪರಿಹಾರ. ಇವನನ್ನು ಕಲ್ಲುಬಂಡೆಯಿಂದ ಕೆಳಗೆ ನೂಕಿ ಸಂಹರಿಸಿಬಿಡಿ" ರಾಜಾಜ್ಞೆಯು ಭೀಕರವಾಗಿದ್ದಿತು. ಮಹಿಳೆಯರು ರಾಮಜಪ ಮಡಿದರು. ಮಹನೀಯರ ಎದೆಗಳಲ್ಲಿ ಹಿರಿ ಹೊಯ್ದಾಟ ಆರಂಭವಾಯಿತು. ಕುಟ್ಟರಸನು ಮುಂದೆ ನುಗ್ಗಬೇಕೆಂದು ಪ್ರಯತ್ನಿಸುವಾಗಲೇ ರಾಜದೂತರು ಅವನನ್ನು ಎಳೆದುಕೊಂಡು ಹೋಗಿಯೇ ಬಿಟ್ಟರು.

(ಆಧಾರ: By Order of the Duke by Rafael Sabatini)

# ಚಂದ್ರವರ್ಮನ ಖಡ್ಗ

**(ಒಂಬತ್ತನೇ ಕತೆ – ೧೯೫೨)**

ಗುರುಬಸವನ ಮೇಲೆ ಪಣ್ಯಗ್ರಾಮನಿವಾಸಿಗಳಿಗೆಲ್ಲ ಅತುಲವಾದ ಭಕ್ತಿ ಗೌರವ. ಅವನ ನಿಜವಾದ ಹೆಸರು ಬಸವಯ್ಯ ಎಂದಿದ್ದರೂ ಗ್ರಾಮಸ್ಥರು ಅವನಲ್ಲಿ ತಮಗಿದ್ದ ಅಭಿಮಾನ ಮರ್ಯಾದೆಗಳ ಕುರುಹಾಗಿ ಅವನನ್ನು ಗುರುಬಸವಯ್ಯ ಎಂದು ಕರೆಯುತ್ತಿದ್ದರು. ಗುರುಬಸವಯ್ಯನು ಪಣ್ಯಗ್ರಾಮದಲ್ಲಿ ಗಣ್ಯ ವ್ಯಕ್ತಿಯಾಗಿದ್ದನು. ಅವನ ಅಖಂಡ ಏಕಾಂಗೀ ಜೀವನದಲ್ಲಿ ಗ್ರಾಮಸ್ಥರೆಲ್ಲರೂ, ಹಿರಿಯರು ಕಿರಿಯರು ಎನ್ನುವ ವ್ಯತ್ಯಾಸವಿಲ್ಲದೆ, ಅವನು ಬಂಧುಗಳಾಗಿದ್ದರು, ಬಳಗವಾಗಿದ್ದರು. ಅವನಿಗೆ ಮದುವೆಯಾಗಿದ್ದಿತೋ ಇಲ್ಲವೋ, ಅವನಿಗೆ ಆಪ್ತ ಬಂಧುಗಳು ಇರುವರೋ ಇಲ್ಲವೋ ಯಾರಿಗೂ ತಿಳಿದಿರಲಿಲ್ಲ. ಅಂದರೆ ಅವನು ಪಣ್ಯ ಗ್ರಾಮದಲ್ಲಿ ಹುಟ್ಟಿ ಬೆಳೆದವನಾಗಿರಲಿಲ್ಲ. ಏಕಾಂಗಿಯಾಗಿ ಶಿವಧ್ಯಾನದಿಂದ ಜಂಗಮರಂತೆ ದೇಶಪರ್ಯಟನ ಮಾಡುತ್ತಿದ್ದ ಅವನು ಅಲ್ಲಿ ಬಂದು ನೆಲಸಿದನು. ನೆಲಸಿದವನು ಎನ್ನುವುದಕ್ಕಿಂತಲೂ ಶಿವನು ಅವನನ್ನು ಅಲ್ಲಿಯೇ ಉಳಿಯುವಂತೆ ಪ್ರೇರಣೆಯಿತ್ತನು ಎನ್ನುವುದು ಹೆಚ್ಚು ವಾಸ್ತವಿಕವಾಗುವುದು.

ಗುರುಬಸವನೇ ಒಂದು ಸಲ ಆ ಅನುಭವವನ್ನು ಹೇಳಿದ್ದನು, ಅವನು ಪರಮೇಶ್ವರನ ಧ್ಯಾನಾಸಕ್ತನಾಗಿ ದೇಶದ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತ ಶಿವಶರಣರ ದರ್ಶನ ಸೇವೆಗಳಲ್ಲಿ ಆಯುಷ್ಯ ಸವೆಯುತ್ತಿದ್ದನು. ಮೈಸೂರು ಸಂಸ್ಥಾನದ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಮುಂದೆ ಭಗವಂತನ ಪುತ್ರ ಶ್ರೀ ಸುಬ್ರಹ್ಮಣ್ಯ ದೇವರ ಕೃಪೆ ಆಶೀರ್ವಾದ ಪಡೆಯಲೆಂದು ಸುಬ್ರಹ್ಮಣ್ಯ ಕ್ಷೇತ್ರಕ್ಕೆ ದಯಮಾಡಿಸಿದನು. ಅಲ್ಲಿಂದ ಮುಂದೆ ಘಟ್ಟವನ್ನೇರಿ ಕೊಡಗು ಸಂಸ್ಥಾನವನ್ನು ತಲಪಿದನು. ಈ ಪುಣ್ಯಭೂಮಿಯನ್ನು ಆಗ ದೊಡ್ಡ ವೀರರಾಜನು ಆಳುತ್ತಿದ್ದನು. ರಾಜಕುಲ ಶಿವಭಕ್ತರ ಪಂಗಡವಾಗಿದ್ದಿತು. ಶಂಕರ  ಕಿಂಕರರು ಯಾರೂ ಕೊಡಗು ದೇಶಕ್ಕೆ ಬರದೇ ರಾಜದರ್ಶನ ಮಾಡದೇ ಹೋಗುತ್ತಿರಲಿಲ್ಲ. ಹಾಗೆ ಬಸವಯ್ಯನು ಕೊಡಗು ದೇಶಕ್ಕೆ ಏರಿ ಬಂದನು, ಬರುತ್ತಿದ್ದಂತೆಯೇ – ರಾಜಧಾನಿ ಮಡಿಕೇರಿ ತಲುಪುವ ಮೊದಲೇ – ಬಸವಯ್ಯನನ್ನು ಅಧಿಕ ತೃಷ್ಣೆಯೂ ಹಸಿವೂ ಬಾಧಿಸಿದುವು. ನಿರಾಹಾರ, ಕಠಿಣ ಪ್ರಯಾಣದ ಆಯಾಸ. ಬೋಳು ಗುಡ್ಡೆಯ ಮೇಲೆ ಬೇಸಗೆಯ ಮಧ್ಯಾಹ್ನ ಕಾಲ ಅವನು  ನಡೆಯುತ್ತಿದ್ದನು. ಮುಂದೆ ಒಂದು ಹೆಜ್ಜೆಯನ್ನೂ ಇಡಲಾಗಲಿಲ್ಲ.

"ಶಿವನೇ! ಈ ದೀನನ ಸೇವೆ ಸಾಕಾಯಿತೇ ನಿನಗೆ?" ಎಂದು ಮೊರೆಯಿಟ್ಟನು. ಹಾಗೆಯೇ ಅಲ್ಲಿಯೇ ನೆಲದ ಮೇಲೆ ಕುಳಿತು ಬಸವಳಿದು ಮಲಗಿದನು.

ಬಸವಯ್ಯನಿಗೆ ಕನಸು. ಸುಂದರ ಸುಖಕರ ಮಂಗಳ ಸ್ವಪ್ನ. ಸಾಕ್ಷಾತ್ ಕೈಲಾಸಪತಿಯು ಜಟೆಯಿಂದ ಪ್ರವಹಿಸುವ ಗಂಗಾತೀರ್ಥವನ್ನು ತನ್ನ ಬೊಗಸೆಯಿಂದ  ಬಸವಯ್ಯನ ಬಾಯಿಗೆ ಧಾರೆಯೆರೆಯುತ್ತಿದ್ದಾನೆ. ಭಕ್ತನಲ್ಲಿ ನವಶಕ್ತಿ ಉದಯಿಸಿತು. ಹರ್ಷಭಕ್ತಿಪುಳಕಿತನಾಗಿ ಪ್ರಭುವಿಗೆ ನಮಸ್ಕರಿಸುತ್ತಾನೆ. ಪಾದಧೂಳಿಯನ್ನು ತನ್ನ ಶಿರಸ್ಸಿನ ಮೇಲೆ ಹರಡಿಕೊಂಡು ಕಣ್ಣುಗಳಿಗೆ ಸ್ಪರ್ಶಿಸಿಕೊಳ್ಳುತ್ತಾನೆ.

"ಭಕ್ತನೇ ! ನೀನಿನ್ನು ನನ್ನನ್ನು ಊರೂರಿನಲ್ಲಿ ಅಲೆದು ಅರಸಬೇಕಾಗಿಲ್ಲ. ಈ ಗ್ರಾಮದಲ್ಲಿಯೇ ನೆಲಸು. ಇಲ್ಲಿಯ ಸರಳ ಜನರ ಸೇವೆಯನ್ನು ನೀನು ಮಾಡು. ಅದೇ ನನ್ನ ಸೇವೆಯಾಗುವುದು" ಎಂದು ಪರಶಿವನು ಹರಸಿದನು.

ಆನಂದೋತ್ಸಾಹವಿದ್ಯುತ್ಸಂಚಾರದಿಂದ ಬಸವಯ್ಯನಲ್ಲಿದ್ದ ಉಕ್ಕು ಆಯಸ್ಕಾಂತವಾಯಿತು. ಅವನಲ್ಲಿ ದಿವ್ಯ ಪ್ರಭೆ ಮಿನುಗಿತು. ಬಸವಯ್ಯನು ಕಣ್ತೆರೆದು ಏಳುವಾಗ ದೂರದಲ್ಲಿ, ಬಹುದೂರದಲ್ಲಿ ಕೆಂಜೆಡೆಯ ಶಿವನು ಸೂರ್ಯಸ್ವರೂಪಿಯಾಗಿ ಪಶ್ಚಿಮದಿಗಭಿಮುಖಿಯಾಗಿ ಸಾಗುತ್ತಿದ್ದನು. ಒಂದರ ಮೇಲೊಂದು ಮೆಟ್ಟಲು ಮೆಟ್ಟಲಾಗಿ ಏರಿ ಹೋಗುತ್ತಿದ್ದ ಹಸುರು ಬಣ್ಣ ಮೆತ್ತಿದಂತಿದ್ದ ಬೆಟ್ಟಗಳು ಆ ಭಗವತ್ಸ್ವರೂಪನಿಗೆ ಸಂಧ್ಯಾ ಸಮಯದ ಅರ್ಘ್ಯವನ್ನು ಅರ್ಪಿಸುತ್ತಿದ್ದುವು. ತಂಗಾಳಿ ಮೃದುವಾಗಿ ಹಿತಕರವಾಗಿ ತೀಡಿದುದು. ಆ ನವಪ್ರಭೆಯಲ್ಲಿ ಆ ಚೈತನ್ಯಮಯ ವಾತಾವರಣದಲ್ಲಿ ತಾದಾತ್ಮ್ಯವನ್ನು ಹೊಂದಿ ಬಸವಯ್ಯನು ಭಗವಂತಸ್ವರೂಪದಲ್ಲಿ ಲೀನನಾದನು. ಸಮಾಧಿ ಹೊಂದಿದನು. ಸುಂದರ ಸನ್ನಿವೇಶದಲ್ಲಿ ಐಕ್ಯರಾಗುವವರೇ ಮಹಾನುಭಾವರು, ಸರಳ ಹೃದಯಿಗಳು.

ಚೈತನ್ಯದ ಕಡಲಿನಲ್ಲಿ ಮಿಂದು ಏಳುವಾಗ ಬಸವಯ್ಯನಿಗೆ ನವೋತ್ಸಾಹ ಮೂಡಿಬಂದಿದ್ದಿತು. ಸಂಧ್ಯಾಗಾನವನ್ನು ಹಾಡುತ್ತಿದ್ದ ವಿಹಂಗಮಗಳು ಮಾಯವಾದಂತೆ, ಪ್ರಕೃತಿದೇವಿಗೆ ರಾತ್ರಿಯಲ್ಲಿ ದಿಗ್ದರ್ಶಕಗಳೂ ರಕ್ಷಕಗಳೂ ಆಗಿರುವ ನಕ್ಷತ್ರಮಣಿಗಳು ಒಂದೊಂದಾಗಿ ಮೂಡಿದಂತೆ ಬಸವಯ್ಯನು ಎದ್ದು ಶಿವಧ್ಯಾನ ಮಾಡುತ್ತ ಮುಂದೆ ಸಾಗಿದನು. ಪಣ್ಯಗ್ರಾಮದಲ್ಲಿ ಅವನಿಗೆ ವಸತಿ ದೊರೆಯಲು ಕಷ್ಟವಾಗಲಿಲ್ಲ. ಭಕ್ತರಿಗೆ ಪರಮಾತ್ಮನು ಮಾರ್ಗವನ್ನು ತೆರೆದಿಡುತ್ತಾನೆ.

ಅಂದಿನಿಂದ ಬಸವಯ್ಯನು ಪಣ್ಯದ ಗುರುಬಸವನಾದನು. ಗುರುಬಸವನಿಗೆ ಪ್ರಚಾರದ ಆಸೆಯಿರಲಿಲ್ಲ. ರಾಜನ ಕೃಪೆಯ ಅವಶ್ಯಕತೆಯಿರಲಿಲ್ಲ. ಹಾಗಾಗಿ ಅವನ ಇರುವು ಶಿವಭಕ್ತ ವೀರರಾಜನಿಗೆ ತಿಳಿಯಲೇ ಇಲ್ಲ. ತಿಳಿದಿದ್ದರೆ ಈ ಭಕ್ತನ ಏಕಾಂತತೆಗೆ ಬಹುಶಃ ಭಂಗಬರುತ್ತಿದ್ದಿತೋ ಏನೋ!



ಪಣ್ಯಗ್ರಾಮದಲ್ಲಿ ಒಂದು ಕಿರುತೊರೆಯ ದಡದಲ್ಲಿ ಬಸವಯ್ಯನ ಕುಟೀರವು ಎದ್ದಿತು. ಸಮೀಪದಲ್ಲೇ ಒಂದು ಆಲದ ಸಸಿ. ಅದರ ನೆರಳಿನಲ್ಲಿ ಶಿವಮಂದಿರ. ತೊರೆಯಲ್ಲಿ ನೀರು ಸದಾ ಸಮೃದ್ಧ. ಭಕ್ತರಲ್ಲಿ ಶಿವಭಕ್ತಿ ಅಪಾರ, ಶುಭ್ರವಾದ ಶುದ್ಧವಾದ ಸಲಿಲ ಬುಳುಬುಳನೆ ಹರಿದುಹೋಗುವ ಸೊಬಗು ಅವರ್ಣನೀಯ. ಶಿವಂ ಸುಂದರಂ. ಅದರಲ್ಲಿ ಮಿಂದು ಸೂರ್ಯನಾರಾಯಣನಿಗೆ ಅರ್ಘ್ಯವಿತ್ತು ಮುಂದೆ ಪರ್ಣಕುಟೀರ ನಿವಾಸಿ ಕೈಲಾಸಪತಿಯನ್ನು ಅರ್ಚಿಸಲು ಬಸವಯ್ಯನು ಸಾಗಿದನೆಂದರೆ ಶಿವನೇ ಈ ರೂಪದಲ್ಲಿ ನಡೆಯುತ್ತಿರುವನೋ ಎಂದು ಜನರಿಗೆ ಅನ್ನಿಸುತ್ತಿತ್ತು: ದೀರ್ಘವಾದ ಜಟೆ, ವಿಶಾಲವಾದ ನೊಸಲಿನ ಮೇಲೆ ತ್ರಿಪುಂಡ್ರಧಾರಣೆ, ದೇಹದ ಮೇಲೆಯೂ ಅಲ್ಲಲ್ಲಿ ಶೋಭಿಸುತ್ತಿರುವ ವಿಭೂತಿಯ ಪವಿತ್ರ ರೇಖೆಗಳು. ಪ್ರತಿದಿನವೂ ದೇವರ ಮಂಗಳಾ**ರತಿ** ಸಮಯದಲ್ಲಿ ಅಲ್ಲಿಗೆ ಬಂದು ದೇವರ ದಿವ್ಯಜ್ಯೋತಿಯಿಂದ ಬೆಳಗಿಸಲ್ಪಟ್ಟು ಪ್ರಸಾದವನ್ನು ಸ್ವೀಕರಿಸಿ ಪುನೀತರಾಗಿ ಸಾಗುವುದು ಆ ಹಳ್ಳಿಗರ ಪರಿಪಾಠವಾಯಿತು. ಬಸವಯ್ಯನಾದರೂ ಭಗವಂತನ ರೂಪವನ್ನೇ ಆ ಭಕ್ತರಲ್ಲಿ ಕಾಣುತ್ತ ತನ್ನ ಕಾರ್ಯವನ್ನು ಭಕ್ತಿಯಿಂದಲೂ ಶ್ರದ್ಧೆಯಿಂದಲೂ ನೆರವೇರಿಸುತ್ತಿದ್ದನು.

ಪುರುಷರೂಪದಿಂದ ಪುಣ್ಯವೀ ಪಣ್ಯಗ್ರಾಮಕ್ಕೆ ಬಂದು ನೆಲಸಿದೆ ಎಂದು ಬಸವಯ್ಯನ ಆಗಮನಾನಂತರ ಗ್ರಾಮಸ್ಥರು ಸ್ಪಷ್ಟವಾಗಿ ಹೇಳುತ್ತಿದ್ದರು. ಅಂದಿನಿಂದ ಅವರ ದನ ಎಮ್ಮೆಗಳನ್ನು ಹುಲಿಗಳು ಹಿಡಿದುದಾಗಲೀ, ಅಕಾಲ ಮೃತ್ಯುವಿಗೆ ಅಲ್ಲಿ ಯಾರಾದರೂ ತುತ್ತಾದುದಾಗಲೀ, ಅತಿವೃಷ್ಟಿಯಿಂದ ಬೆಳೆಗಳಿಗೆ ಮನೆಗಳಿಗೆ ನಾಶವುಂಟಾದುದಾಗಲೀ ಇರಲಿಲ್ಲ. ಸಸ್ಯ ಸಮೃದ್ಧಿಯಾಗಿ ಪೈರು ಪುಷ್ಕಳವಾಗಿ ಜನರು ಹರ್ಷಾನಂದಭರಿತರಾದರು. ಗುರುಬಸವನು ದೇವಭಕ್ತನಾಗಿದ್ದಂತೆಯೇ ಕಾಯಕಷ್ಟವನ್ನು ಅರಿತವನೂ ಆಗಿದ್ದನು. ಆಲದ ಮರದಡಿಯಲ್ಲಿ ಕಾಣುತ್ತಿದ್ದ ಪರಮೇಶ್ವರನನ್ನು ಅವನು ಭೂಮಿಯಲ್ಲಿಯೂ ಜನರಲ್ಲಿಯೂ ದನಗಳಲ್ಲಿಯೂ ಕಾಣುತ್ತಿದ್ದನು, ಇಂತಹ ಪುಣ್ಯಪುರುಷನ ಸಾನ್ನಿಧ್ಯ ಲಭಿಸಿ ಪಣ್ಯಗ್ರಾಮವು ವರ್ಧಿಸತೊಡಗಿತು. ಪುಣ್ಯಪುರುಷರ ಸಂಗವೇ ಸಂಸ್ಕೃತಿಯ ಆರಾಧನೆ, ಅದೇ ಸದ್ವಿದ್ಯಾಭ್ಯಾಸ.

ಗುರುಬಸವನು ಆ ಭೂಮಿಯಲ್ಲಿ ನಡೆದಂತೆಯೇ ಜನರು ಅವನಿಗೆ ಸಾಕ್ಷಾತ್ ಪರಮಶಿವನೇ ದಯಮಾಡಿಸುತ್ತಿರುವನು ಎಂದು ಭಕ್ತ್ಯಭಿಮಾನಗಳಿಂದ ಅಭಿವಂದಿಸುತ್ತಿದ್ದರು. ಅವನು ಹೋದ ಮನೆ ಪುಣ್ಯವಂತರ ಬೀಡಾಗುತ್ತಿತ್ತು, ಅವನು ಮಾತಾಡಿದ ವ್ಯಕ್ತಿಯಲ್ಲಿ ಹುಮ್ಮಸ್ಸು ಉಕ್ಕುತ್ತಿತ್ತು. ಅವನು ಸಂದರ್ಶಿಸದ ಮನೆ ಮತಾಡದ ವ್ಯಕ್ತಿ ಗ್ರಾಮದಲ್ಲಿಯೇ ಇರಲಿಲ್ಲ.

ಗುರುಬಸವನ ಕಾರ್ಯಕ್ಷೇತ್ರ ಪಣ್ಯಗ್ರಾಮಕ್ಕೇ ಸೀಮಿತವಾಗಿರಲಿಲ್ಲ.

ಒಂದು ಸಾಯಂಕಾಲ. ಅವನು ಪಶ್ಚಿಮ ಘಟ್ಟಗಳ ಕಡೆಗೆ ದೃಷ್ಟಿಯನ್ನು ಬೀರಿ ಹಾಗೆಯೇ ಮುಂದೆ ಮುಂದೆ ನಡೆದನು. ಸುಬ್ರಹ್ಮಣ್ಯ ಕ್ಷೇತ್ರಾಭಿಮುಖವಾಗಿ ಸಾಗಿದನು. ಸಂಜೆಯ ಬೆಳಕಿನ ಚಿನ್ನದ ಹೊನಲು ಅಲ್ಲೆಲ್ಲ ತುಂಬಿ ಪ್ರವಹಿಸುತ್ತಿದ್ದಿತು. ತೇಲುತ್ತಿದ್ದ ಎರಡು ದೊಡ್ಡ ಬಿಳಿಯ ಮೋಡಗಳಿಗೆ ಮಿರಮಿರನೆ ಮಿರುಗುವ ಬೆಳ್ಳಿಯ ಅಂಚನ್ನು ಕಲಾವಿದ ಸೂರ್ಯನು ಕಿರಣ ಕುಂಚಗಳಿಂದ ಬಿಡಿಸಿದ್ದನು. ಗಿರಿಶಿಖರಗಳಿಗೆ ನವಕಾಂತಿಯನ್ನು ಬೀರಿದ್ದನು. ಭಗವಂತನ ಲೀಲೆಯಲ್ಲಿ ಮೈಮರೆತು ಗುರುಬಸವ ಸಾಗುತ್ತಿದ್ದ ಹಾಗೆಯೇ ಅವನ ಏಕಾಗ್ರತೆಗೆ ಭಂಗಬಂದಿತು. ದೂರದಲ್ಲಿ ದಿಗಂತದ ಸಮೀಪದಲ್ಲಿ ದೊಡ್ಡದಾಗಿ ಗಲಭೆ ಕೇಳಿಸಲಾರಂಭಿಸಿತು.

“ಹೋಯ್ ಹೊಡಿ ಬಾರೋ…” ಎಂದು ಮುಂತಾದ ಕೆಲವು ಶಬ್ದಗಳು ಮಾತ್ರ ಆ ಮಹಾ ಗಲಭೆಯಲ್ಲಿ ಸ್ಪಷ್ಟವಾಗುತ್ತಿದ್ದುವು. ಗುರುಬಸವನು ಕುತೂಹಲ ದೃಷ್ಟಿಯಿಂದ ಆ ಕಡೆಗೆ ನೋಡಿದನು. ಕಪ್ಪಾಗಿ ಭಯಂಕರವಾಗಿ ದಟ್ಟವಾಗಿ ಹೊಗೆಯು ಮೇಲೇ**ರುತ್ತಿ**ದ್ದುದನ್ನು ಕಂಡನು. ಸುಳಿ ಸುಳಿಯಾಗಿ ತೆರೆ ತೆರೆಯಾಗಿ ವಿಸ್ತಾರವಾಗಿ ವ್ಯಾಪಿಸುತ್ತ ಮೇಲೆ ಮೇಲೆ ಸಾಗುತ್ತಿದ್ದ ಆ ಧೂಮಸಮೂಹವನ್ನು ನೋಡಿ ಕೂಡಲೇ ಏನೋ ಅನಾಹುತ ಸಂಭವಿಸಿದೆ ಎಂದು ಶಿವಭಕ್ತನು ನಿಶ್ಚಯಿಸಿದನು. ಆ ಕಡೆಗೆ ತೀವ್ರಗತಿಯಿಂದ ಓಡಿದನು.

ಓಡಿ ಓಡಿ ಅಲ್ಲಿಗೆ ತಲುಪಿದನು. ನೋಡುವುದೇನನ್ನು? ಒಂದು ಹುಲ್ಲು ಮನೆಗೆ ಬೆಂಕಿಯು ಬಿದ್ದಿದೆ, ಸಾರ್ವತ್ರಿಕವಾಗಿ ವ್ಯಾಪಿಸಿರುವ ಅಗ್ನಿ ಪೂರ್ಣಾಹುತಿಯನ್ನು ತೆಗೆದುಕೊಳ್ಳತೊಡಗಿದೆ. ಬಿದಿರು ಗಳಗಳು ಚಿಟಿಲ್ ಚಿಟಲ್ಲನೆ ಸಿಡಿದು ಒಡೆದು ಮೇಲೆ ಹಾರಿ ಅಗ್ನಿಜಿಹ್ವೆಯಿಂದ ಸೆಳೆಯಲ್ಪಟ್ಟು ಅಲ್ಲಿಯೇ ಬಿದ್ದು ಉರಿದು ಭಸ್ಮವಾಗುತ್ತಿವೆ. ಮಾಡಿಗೆ ಹೊದೆಸಿದ ಹುಲ್ಲು ಇರ ಇರನೆ ಹೊತ್ತಿ ಬೂದಿಯಾಗುತ್ತಿದೆ. ಜನರ ಕೂಗೇ ಕೂಗು. ಬೇಸಗೆಯ ದಿನಗಳು. ನೀರನ್ನು ತಂದು ಸುರಿಯುವುದು ಎಲ್ಲಿಂದ? ಬಾವಿಯಿಂದ ಸೇದಿ ಸೇದಿ ಕೈಯ್ಯಿಂದ ಕೈಗೆ ಬಿಂದಿಗೆಗಳನ್ನು ಸಾಗಿಸಿ ನೀರನ್ನು ಸುರಿದರು. ಆದರೆ ಎಲ್ಲಿಗೆ? ಸರ್ವವನ್ನೂ ಲೇಲಿಹ್ಯಮಾನವಾಗಿ ಸ್ವಾಹಾ ಮಾಡುತ್ತಿರುವ ಅಗ್ನಿ ರಾಕ್ಷಸನಿಗೆ ಆ ಬಿಂದಿಗೆ ನೀರು ಲೆಕ್ಕವೇ ಇರಲಿಲ್ಲ. ಆದರೂ ಸುರಿದರು. ಬಾಳೆಯ ಮರಗಳನ್ನು ಕಡಿಕಡಿದು ಬೆಂಕಿಯ ಮೇಲೆ ಬಿಸಾಡಿದರು, ಅರಿವೆಗಳನ್ನೂ ಮತ್ತೇನೇನು ದೊರೆಯಿತೋ ಅವುಗಳೆಲ್ಲವನ್ನೂ ನೀರಿನಲ್ಲಿ ಒದ್ದೆಮಾಡಿ ಮೇಲೆಸೆದರು.

ಮಣ್ಣನ್ನು ಅಗೆದಗೆದು ಬೆಂಕಿಯ ಮೇಲೆರಚಿದರು. ಯಾರಿಗೂ ಏನು ಕೆಲಸ ಮಾಡುತ್ತ ಇರುವೆವೆನ್ನುವ ಪರಿವೆಯಿರಲಿಲ್ಲ. ಆ ದುರ್ಧರ ಕಠಿಣ ಪ್ರಸಂಗದಲ್ಲಿ ಒಂದು ರೀತಿಯ ಭಯಂಕರ ರುದ್ರೋತ್ಸಾಹದಿಂದ ಪ್ರೇರಿತವಾಗಿ ತೀವ್ರಗತಿಯಿಂದ ಕಾರ್ಯವನ್ನು ಮುಂದುವರಿಸುತ್ತಿದ್ದರು.

ಗುರುಬಸವನಿಗೆ ಶಿವನ ತಾಂಡವ ನೃತ್ಯ ಕಂಡು ಗಂಟಲು ಉಬ್ಬಿ ಬಂದಿತು. ಹೊಟ್ಟೆಯಲ್ಲಿ ಬೆಂಕಿ**ಯು** ಉರಿದಂತೆ ಆಯಿತು.

"ಓ ಪರಮೇಶ್ವರನೇ ಈ ರೀತಿಯಲ್ಲೂ ನೀನು ಭಕ್ತರನ್ನು ಪರೀಕ್ಷಿಸುವುದೇ? ನಿನ್ನ ಲೀಲೆಯನ್ನು ಕಂಡವರು ಯಾರೋ?" ಎಂದು ಮನಸ್ಸಿನಲ್ಲಿಯೇ ದೇವರಲ್ಲಿ ಮೊರೆಯಿಟ್ಟನು.

ಕರ್ತವ್ಯ ಮೊದಲು.

"ಮನೆಯೊಳಗೆ ಯಾರಾದರೂ ಇರುವರೇ?" ಇದು ಗುರುಬಸವನ ಮೊದಲಿನ ಪ್ರಶ್ನೆ.

ಈ ಒಂದು ಆಗಂತುಕ ವ್ಯಕ್ತಿಯ ವಿಚಿತ್ರ ಸ್ವರೂಪ, ಅಪರಿಚಿತ ಮುಖ. ಪ್ರಶ್ನೆಯ ಗಂಭೀರತೆ ಇವುಗಳಿಂದ ನೀರು ಸುರಿಯುತ್ತಿದ್ದವರು ಕೆಲವರು ನಿಂತು ಏನೆಂದು ಮರುಪ್ರಶ್ನೆ ಹಾಕಿದರು.

"ಈ ಉರಿಯುತ್ತಿರುವ ಮನೆಯೊಳಗೆ ಜನರು ಇದ್ದಾರೋ?" ಎಂದು ಪುನಃ ಗುರುಬಸವನು ಕೇಳಿದನು.

"ಆ ಹೆಂಗಸಿನ ಸಣ್ಣ ಮಗು ಉಂಟಂತೆ. ಆದರೆ ನಮಗೆ ಯಾರಿಗೂ ಈ ಬೆಂಕಿಯ ಒಳಗೆ ನುಗ್ಗಿ ಅದನ್ನು ಹೊರಗೆ ತರಲು ಆಗಲಿಲ್ಲ" ಎಂದರು ಹತ್ತೆಂಟು ಜನರು ಒಟ್ಟಿಗೆ.

ಮಾತು ಮುಗಿಯುವ ಮೊದಲೇ ಗುರುಬಸವನು ಮುನ್ನುಗ್ಗಿ ಆ ಅಗ್ನಿ ಕುಂಡಕ್ಕೆ ದುಮುಕಿಬಿಟ್ಟಿದ್ದನು. ಅಲ್ಲಿದ್ದ ಜನರು ಇವನಿಗೇನು ಮರುಳೇ ಎಂದು ದಿಗ್ಭ್ರಾಂತರಾಗಿ ನೋಡಿದರು. ಕೆಲವರು ಅವನನ್ನು ಹಿಡಿದೆಳೆಯಲೂ ಹೋದರು. ಆದರೆ ಅಷ್ಟರಲ್ಲಿಯೇ ಅವನು ಮನೆಯನ್ನು ಆ ಅಗ್ನಿರಾಶಿಯನ್ನು ಪ್ರವೇಶಿಸಿಯಾಗಿದ್ದಿತು.

"ಬೆಂಕಿಯ ಪ್ರಾರಂಭ ಸ್ಥಿತಿಯಲ್ಲಿಯೇ ನಮಗೆ ನುಗ್ಗಲಾಗಲಿಲ್ಲ. ಈಗ ಇವನೊಬ್ಬ ಅವಿವೇಕಿ ಸಾಗಿದ. ಸರಿ, ಒಂದು ಸಣ್ಣ ಜೀವದ ಜತೆಗೆ ಇನ್ನೊಂದು ದೊಡ್ಡ ಜೀವ" ಎಂದು ಉದ್ಗಾರವೆಳೆದನು ಒಬ್ಬ ಕೊಡಪಾನ ಹೊತ್ತವನು.

"ಮುದುಕರೂ ಹುಚ್ಚರೂ ಮಕ್ಕಳೂ ಒಂದೇ ಎಂದು ಹೇಳಿಕೆಯಿದೆ. ಈಗ ಹೋದವನು ಮುದುಕನೂ ಹೌದು ಹುಚ್ಚನೂ ಹೌದು. ಒಳಗೆ ಮಗುವಿದೆ ಅಂತೂ ಇವರಿಗೆ ಅಗ್ನಿಸಮಾಧಿ. ನಮಗೆ ಸುಡುವ ತಾಪತ್ರಯವಿಲ್ಲ" ಎಂದು ಆ ಭೀಕರ ಸನ್ನಿವೇಶದಲ್ಲಿಯೂ ಒಂದು ನಗುವಿನ ರೇಖೆಯನ್ನು ಇನ್ನೊಬ್ಬನು ತರಲು ಪ್ರಯತ್ನಿಸಿ ವಿಫಲನಾದನು.

ಇವರ ಮಾತು ಮರುಮಾತು ಮುಗಿಯುವ ಮೊದಲೇ ಗುರುಬಸವನು ಎಷ್ಟು ರಭಸದಿಂದ ಅಗ್ನಿಗರ್ಭಕ್ಕೆ ದುಮುಕಿದ್ದನೋ ಅಷ್ಟೇ ರಭಸದಿಂದ ಹಿಂದಕ್ಕೆ ನೆಗೆದಿದ್ದನು. ಮಗುವು, ಒಂದು ವರ್ಷದ ಗಂಡು ಮಗುವು, ಅವನ ಕೈಯಲ್ಲಿ ಸುಖವಾಗಿ ಮಲಗಿಕೊಂಡಿತ್ತು. ಅಗ್ನಿಪೂತನಾದ ಈ ಮಹಾನುಭಾವನನ್ನು ಎಲ್ಲರೂ ಆ ಕ್ಷಣ ಆವರಿಸಿದರು. ಯಾರು ಅವನನ್ನು ಆ ಹಿಂದಿನ ಗಳಿಗೆಯಲ್ಲಿ ಮರುಳನೆಂದು ಕೊಂಕುನುಡಿ ನುಡಿದಿದ್ದರೋ ಅವರೆಲ್ಲ ಅತ್ಯಧಿಕ ಅಭಿಮಾನ ಗೌರವ ಮರ್ಯಾದೆಗಳಿಂದ ಈ ವೃದ್ಧನನ್ನು ಆವರಿಸಿದರು. ಹೊಸಬನು ಮನೆಯೊಳಗೆ ಹಾರಿದುದೂ ಅಲ್ಲಿಂದ ಹೊರಗೆ ಬಂದುದೂ ಎಲ್ಲರಿಗೂ ಕಂಡಿದ್ದಿತು. ಅಂತಹ ರುದ್ರಪ್ರಸಂಗದಲ್ಲಿಯೂ ಈ ಸಂತೋಷದ ಗಳಿಗೆಯು ಬಂದಾಗ ಎಲ್ಲರೂ ಅವರವರ ಕೆಲಸ ಮರೆತುಬಂದು ಮುದುಕಯ್ಯನ ಸುತ್ತಲೂ ಮುತ್ತಿದರು. ಮಗುವಿಗೆ ಎಚ್ಚರವಾಯಿತು. ಅದು ಕೈಕಾಲು ಬಡಿದುಕೊಂಡು "ವೇ ವೇ ವೇ" ಎಂದು ಅಳುತ್ತಿತ್ತು. ಅಗ್ನಿಯು, ತನ್ನ ಗ್ರಾಸವನ್ನು ಇತರರು ಅಪಹರಿಸಿದರೆಂದು ಕೋಪಾ**ನಲ**ದಿಂದ ಇನ್ನಷ್ಟು ಪ್ರಜ್ವಲಿಸಿ ಸಿಡಿಮಿಡಿಗೊಂಡು ಭಯಂಕರವಾಗಿ ಉರಿಯಲಾರಂಭಿಸಿತು. ಗುರು ಬಸವ ಮಗುವನ್ನು ಮೃದು**ವಾ**ಗಿ ಎತ್ತಿಕೊಂಡು ಸಮಾಧಾನಪಡಿಸುತ್ತ ಆ ಶಾಖ ಉರಿಗಳಿಂದ ದೂರಹೋಗಲು ಮುಂದಾದನು. ಅವನ ಹರಕು ಬಟ್ಟೆಯಲಿದ್ದ ಬೆಂಕಿಯ ಕಿಡಿಗಳನ್ನು ಹಿಂಬಾಲಕರು ಹಿಡಿದು ಆರಿಸಿದರು. ಮಗು ತನ್ನ ಪುಟ್ಟ ಕಣ್ಣುಗಳನ್ನು ಅರಳಿಸಿ ಹೊಸಬನನ್ನು ನೋಡಿ ಹೆದರಿ ಇನ್ನೂ ಗಟ್ಟಿಯಾಗಿ ಚೀರಿತು: ಕೈಕಾಲು ಬಡಿದು ಬಡಿದು ಕೂಗಿತು.

"ಶಿವ, ನೀನು ಹೆದರಬೇಡ" ಎಂದು ಗುರುಬಸವನು ಅದನ್ನು ಸಮಾಧಾನಪಡಿಸಲು ತೊಡಗಿದನು.

ಮನೆಗೆ ಬೆಂಕಿಬಿದ್ದಾಗ ಆಗದಿದ್ದ ದುಃ**ಖ** ಉದ್ವೇಗ ಉಮ್ಮಳ ಗೌ**ರಾ**ಂಗನೆಗೆ ತನ್ನ ಪುಟ್ಟ ಕಂದಮ್ಮನು ಉಳಿಯುವುದಿಲ್ಲ ಎಂದು ತಿಳಿದಾಗ ಆಯಿತು. ಬೆಂಕಿಬಿದ್ದಾಗ ಅವಳು ಹಟ್ಟಿಯಲ್ಲಿದ್ದಳು. ಯಾರೋ ಮನೆಗೆ ಬೆಂಕಿಬಿದ್ದಿತು ಎಂದು ಕೂಗಿ ಹೇಳಿದಾಗ ಅವಳು ಧಾವಿಸಿಬಂದಳು. ಆಗಲೇ ಬೆಂಕಿಯು ಪರಾಕಾಷ್ಠೆಯನ್ನು ಮುಟ್ಟುವುದರಲ್ಲಿತ್ತು.

"ನನ್ನ ಮಗನನ್ನು ರಕ್ಷಿಸಿ ರಕ್ಷಿಸಿ" ಎಂದು ಅವಳು ಮೊರೆಯಿಟ್ಟಳು. ತಾನೇ ಬೆಂಕಿಯನ್ನು ಭೇದಿಸಿ ಮುನ್ನುಗ್ಗಲು ಧಾವಿಸಿದಳು. ಆದರೆ ಅಲ್ಲಿ ಸೇರಿದ್ದ ಜನ ಅವಳನ್ನು ಹೋಗಗೊಡಲಿಲ್ಲ. ಹಿಡಿದು ಹಿಂದೆ ಕೂರಿಸಿದರು. ಕೆಲವು ಗಂಡಸರು ಮನೆಯೊಳಗೆ ನುಗ್ಗಲು ಹಾರಿದರು. ಆದರೆ ಅಗ್ನಿರಾಕ್ಷಸನ ಪ್ರಹಾರಗಳಿಂದ ಜರ್ಜರಿತವಾಗಿ ಹಿಂದೆ ನೆಗೆದರು. ಮಗುವು ಉಳಿಯುವುದಿಲ್ಲ ಎಂದು ತಿಳಿದಿದ್ದ ಗೌರಾಂಗನೆಗೆ ಅಷ್ಟರಲ್ಲಿಯೇ ಮೂರ್ಛೆಯು ಬಂದಿದ್ದಿತು. ಮಗುವಿಗೆ ಅಂತಹ ಅಪಮೃತ್ಯು. ಅದನ್ನುಳಿದ ಆ ತಾಯಿ ಜೀವ ಆ ಒಂಟಿ ಜೀವ ಹೇಗೆ ಉಳಿಯಬಲ್ಲದು?

ಬೆಂಕಿಯ ಶಾಖ ಮತ್ತು ಸನ್ನಿವೇಶದ ಕಾವು ಸಾಯಂಕಾಲದ ತಂಗಾಳಿ ಮತ್ತು ಗೌರಾಂಗನೆಯ ಮಗು ಬದುಕಿ ಉಳಿದ ಸಂತೋಷಗಳಿಂದ **ಕೊನೆಗಂಡುವು**. ಮಗುವಿನ ರೋದನ ಮಾತ್ರ ಏರುತ್ತಿದ್ದಿತು.

"ಈ ಮಗುವಿನ ತಾಯಿ ತಂದೆಗಳೆಲ್ಲಿ?" ಎಂದು ಗುರುಬಸವನು ಜನರನ್ನು ಪ್ರಶ್ನಿಸಿದನು.

ಈಗಾಗಲೇ ಅವನು ಆ ಜನರ ದೃಷ್ಟಿಯಲ್ಲಿ ಮಹಾಮಹಿಮಾನ್ವಿತ ಪುರುಷನಾಗಿದ್ದನು. ನೆರೆ ಗ್ರಾಮದಲ್ಲಿ ಒಂದೆರಡು ಸಲ ಅವನನ್ನು ನೋಡಿ ಅರಿತಿದ್ದ ಕೆಲವರಂತೂ **ಗು**ರುಬಸವ ಮಹಿಮೆಯನ್ನು ಅಧಿಕಾಧಿಕವಾಗಿ ವರ್ಣಿಸಿ ಅವನ ಸ್ಥಾನವನ್ನು ಇತರರ ದೃಷ್ಟಿಯಲ್ಲಿ ಮಹೌನ್ನತ್ಯಕ್ಕೆ ಕೊಂಡೊಯ್ದರು.

ಮಗುವಿನ ತಾಯಿಯನ್ನು ಕರೆದುಕೊಂಡು ಬರಲು ಕೆಲವರು ಓಡಿದರು. ಹೆಂಗುಸರ ಶೈತ್ಯೋಪಚಾರದಿಂದ ಗೌರಾಂಗನೆಯು ಆಗಲೇ ಮೂರ್ಛೆಯಿಂದ ಜಾಗ್ರ**ತಾ**ವಸ್ಥೆಗೆ ಬಂದಿದ್ದಳು. ಆದರೆ ಅವಳ ಹಂಬಲ ಒಂದೇ **"**ನನ್ನ ಕಂದಮ್ಮನೆಲ್ಲಿ?**"** ಎಂದು. ಹೀಗೆ ಹಲಬುತ್ತಿದ್ದಾಗಲೇ ಅವಳ ಪುಟ್ಟ ಮಗುವಿನ ಕೂಗಿನ ಪ್ರೀತಿಯ ಕರೆ ಅವಳಿಗೆ ಬಂದಿತು. ಅವಳನ್ನು ಕರೆದುಕೊಂಡು ಹೋಗಲು ಬಂದವರು ಅವಳಿಗೆ ಆ ಮಗು ಬದುಕಿ ಉಳಿದಿರುವ ಆನಂದದ ಸುದ್ದಿಯನ್ನು ತಿಳಿಸಿದಾಗ ಅವಳಿಗಾದ ಸಂತೋಷ ಕೃತಜ್ಞತೆ ಅಪಾರ. ಗಾಳಿಯಲ್ಲಿ ತೇಲಿ ಸಾಯಂಕಾಲದ ಮಂದಪ್ರಕಾಶದಲ್ಲಿ ಪಸರಿಸಿ ಅವಳು ಗುರುಬಸವ ಸನ್ನಿಧಾನಕ್ಕೆ ತಲುಪಿದಳು. ಮಗುವು ತನ್ನ ಪುಟ್ಟ ಪುಷ್ಟಿಯಾದ ಕೈಗಳನ್ನು ಚಾಚಿ ಚಾಚಿ ಅವಳನ್ನು ಸ್ವಾಗತಿಸಿತು. ಕಾಲುಗಳನ್ನು ಬಡಿದ ರಭಸದಲ್ಲಿ ಅದು ಗುರುಬಸವನ ಕೈಯಿಂದ ಜಾರಿ ಬಿದ್ದುಹೋಗುತ್ತಿತ್ತು. ಅದುವರೆಗೆ ಒಂದೇ ಶುತ್ರಿಯಲ್ಲಿದ್ದ ಅದರ ಅಳು ಈಗ ದೂರಿಡುವ ರಾಗವಾಯಿತು. ಅದು ನಲಿವಿನ ವರಿಸೆಯಾಯಿತು. ಕಣ್ಣಿನಲ್ಲಿ ನೀರೊಸರದ ಕೂಗಾಯಿತು. ತಾಯಿಯ ಕೈಗಳನ್ನು ಮಗು ಸೇರಿ ಉಲಿದು ಅವಳ ಹೆಗಲಿನಿಂದ ಇತರರನ್ನು ಇಣುಕಿ ನೋಡಿ ದಂತವಿಹೀನ ನಗುವನ್ನು ಪ್ರದರ್ಶಿಸಿತು. ಪುನಃ ಪುನಃ ತಾಯಿಯ ಹೆಗಲಿಗೆ ಕೈಗಳನ್ನು ಬಡಿದು ಬಡಿದು ತನ್ನ ಹರ್ಷವನ್ನು ವ್ಯಕ್ತಪಡಿಸಿತು.

**"**ಅಮ್ಮಾ, ನಿಮ್ಮ ಮಗುವನ್ನು ಉಳಿಸಿದ ಮಹಾನುಭಾವರು ಇವರೇ**"** ಎಂದು ಹತ್ತಿರದವರು ಹೇಳಿದಾಗ ಮಗುವು ಗುರುಬಸವನ ಕಡೆಗೆ ತಿರುಗಿ ಕೈಚಾಚಿತು.

ಅವನು ಅದರ ಕೈಯ್ಯನ್ನು ಹಿಡಿದು **"**ಏನು ಪುಟ್ಟಂಬೆ! ಬರುತ್ತೀಯಾ?**"** ಎಂದು ಕೈಚಾಚಿದಾಗ ಅದು ಚುಳ್ಳನೆ ತಿರುಗಿ ತಾಯಿಯ ಹೆಗಲ ಮೇಲೆ ಮುಖವಿಟ್ಟು ಕೈಗಳಿಂದ ಬಲವಾಗಿ ಚಟಪಟನೆ ಅವಳಿಗೆ ಹೊಡೆಯಿತು.

ಗೌರಾಂಗನೆಗೆ ಆ ಪರಿಚಯ ಅಗತ್ಯವಿರಲಿಲ್ಲ, ಆಗಿನ ಪ್ರಸಂಗದಲ್ಲಿ ಅವಳ ಕೃತಜ್ಞತಾಪೂರ್ಣ ಮನಸ್ಸು ಗುರುಬಸವನ ಸತ್ಕೃತ್ಯವನ್ನು ಗ್ರಹಿಸಿದ್ದಿ**ತು.** ಮಗುವನ್ನೆತ್ತಿಕೊಂಡೇ ಅವಳು ವೃದ್ಧ ಗುರುಬಸವ**ನ** ಪಾದಾರವಿಂದಗಳನ್ನು ಮುಟ್ಟಿ ನಮಸ್ಕರಿಸಿದಳು. ಅವಳ ಕಣ್ಣುಗಳಿಂದ ಜಗುಳಿದ ಬಾಷ್ಪಾಂಬುವೇ ಆ ಪುಣ್ಯ ಪಾದಯುಗಳನ್ನು ತೊಳೆಯುವ ಜಲವಾಯಿತು. ಅಮಂಗಳಕರವಾದ ಸಂಧ್ಯೆಯು ಮಂಗಳಕರವಾಗಿ ಕೊನೆಗೊಂಡಿತು. ತಾಯಿಯ ಹೃದಯ ಪಾತ್ರೆಯಲ್ಲಿ ಕೃತಜ್ಞತಾಸಲಿಲವು ತುಂಬಿ ಪ್ರವಹಿಸಲಾರಂಭಿಸಿತು.

ಗುರುಬಸವನು ಗೌರಾಂಗನೆ ಯೋಗಕ್ಷೇಮವನ್ನು ವಿಚಾರಿಸಿದನು. ಆ ಎಳೆ ಹರೆಯದ ಸಾಧ್ವಿಯ ಬಾಯಿಯಿಂದ ಗುರುವರ್ಯನಿಗೆ ತಿಳಿದ ವಿಷಯವಿಷ್ಟು: ಅವಳು ಶಿವಭಕ್ತರ ಕುಟುಂಬಕ್ಕೆ ಸೇರಿದವಳು. ಅನಾಥೆ. ಚಿಕ್ಕಂದಿನಲ್ಲಿಯೇ ಜನ್ಮದಾತರು ತೀರಿಹೋಗಿದ್ದರು. ದೂರದ ಸಂಬಂಧಿಕರಲ್ಲಿ ಬೆಳೆದಳು. ವಿವಾಹಯೋಗ್ಯ ಪ್ರಾಯದಲ್ಲಿ ಸತ್ಕುಲ ಪ್ರಸೂತ ದೇವಭಕ್ತನೊಬ್ಬನೊಡನೆ ಆಕೆಯ ವಿವಾಹವಾಗಿತ್ತು. ಅದು ನಡೆದುದು ಈಗ ಮೂರು ವರ್ಷಗಳ ಹಿಂದೆ. ಅಂದಿನಿಂದ ಗಂಡನೂ ಹೆಂಡತಿಯೂ ವ್ಯವಸಾಯದಲ್ಲಿ ತನ್ಮಯರಾಗಿ ತಮ್ಮ ಸಂಸಾರ ಜೀವನವನ್ನು ಸುಖಸಂತೋಷಗಳಿಂದ ನಡೆಸುತ್ತಿದ್ದರು. ಅವರಿಗೆ ಯಾವುದಕ್ಕೂ ಕೊರತೆಯಿರಲಿಲ್ಲ. ಶಂಕರನು ಸಕಲ ಸೌಭಾಗ್ಯಗಳನ್ನು ಅವರಿಗೆ ಅವರಿಗೆ ದಯಪಾಲಿಸಿದ್ದನು. ಮುಂದೆ ಗೌರಾಂಗನೆಗೆ ಬಯಕೆಯುಂಟಾಯಿತು. ಗಂಡ ಹೆಂಡಿರು ಶಿವನನ್ನು ಆರಾಧಿಸಿದರು. ಪತ್ನಿಯು ತನಗೆ ಹೆಜ್ಜೇನಿನ ಎರಿಯನ್ನು ತಿನ್ನಬೇಕೆನ್ನುವ ತನ್ನ ಅಭಿಲಾಷೆಯನ್ನು ಪ್ರಾಣಪ್ರಿಯನೊಡನೆ ವ್ಯಕ್ತಿಪಡಿಸಿದಳು. ಅವನು ಆ ರಾತ್ರಿಯೇ ಕಾಡಿನೆಡೆಗೆ ನಡೆದನು. ದೊಡ್ಡ ಒಂದು ಮರದ ಎತ್ತರದ ಕೊಂಬೆಯಲ್ಲಿ ಹೆಜ್ಜೇನಿನ ಗೂಡು ಇದ್ದಿತು. ಮರವನ್ನು ಹತ್ತಿ ಬೆಂಕಿಯ ಹೊಗೆಯನ್ನು ಗೂಡಿಗೆ ಬೀರಿದನು. ಜೇನ್ನುಮ್ಬಿಗಳು ಸಿಕ್ಕಾಬಟ್ಟೆ ಹಾರಿ ಹೋದುವು. ಹಲವಾರು ಭೃಂಗಗಳು ಸತ್ತುಹೋದವು. ಆ ಕೊಂಬೆಯಲ್ಲಿ ಅವನು ಮುಂದೆ ಸಾಗಿದನು. ಜೇನುಗೂಡಿಗೆ ಕೈಹಾಕಿ ಎರಿಗಳನ್ನು ಕೊಯ್ಯುತ್ತಿದ್ದ ಹಾಗೆಯೇ ಅವಳ ಮಾಂಗಲ್ಯ ಬಿರಿಯಿತು. ಗೌರಾಂಗನೆಯ ಗಂಡ ಮರುನಿಮಿಷ ನೆಲದ ಮೇಲೆ ಪಾತಾಳದ ಗಹ್ವರೆಯಲ್ಲಿ ಕೆಡೆದು ಬಿದ್ದಿದ್ದನು. ಮರದ ಶಾಖೆಯು ತುಂಡಾಗಿದ್ದಿತು. ಪತ್ನಿಯ ಇಚ್ಛೆಯನ್ನು ಪೂರ್ತಿಗೊಳಿಸುವ ಉತ್ಸಾಹದಲ್ಲಿ **ಅವನು** ಕೊಂಬೆಯ ಮಿತಿಯನ್ನು ಲಕ್ಷಿಸಿರಲಿಲ್ಲ. ಅದು ಅವನ ಜೀವವನ್ನೇ ಹಿಂಡಿದ್ದಿತು. ಹೀಗೆ ಅಪಮೃತ್ಯವಿಗೊಳಗಾದ ಪತಿಯ ಪವಿತ್ರ ಸ್ಮಾರಕವಾಗಿ ಅವಳ ಪಾಲಿಗೆ ಉಳಿದಿದ್ದುದು ಆರು ತಿಂಗಳ ಅನಂತರ ಜನಿಸಿದ ಆ ಗಂಡು ಮಗು. ಆ ಮಗುವನ್ನು ಅವಳಿಗೆ ಮೃತ್ಯುವಿನ ಕರಾಳದಂಷ್ಟ್ರದಿಂದ ರಕ್ಷಿಸಿ ಕೊಟ್ಟ ಗುರುಬಸವನನ್ನು ಅವಳು ಹೃದಯ **ತುಂಬಿ** ಅಭಿವಂದಿಸಿದಳು.

ಗೌರಾಂಗನೆಯ ಜೀವನ ಚರಿತ್ರೆಯನ್ನು ಕೇಳಿದ. ಗುರುಬಸವನಿಗೆ ಕರುಣೆಯು ತುಂಬಿ ಬಂದಿತು. ಪರಮಾತ್ಮನು ಜೀವಿಗಳಿಗೇಕಿಷ್ಟು ಕಷ್ಟ ಕೊಡುವನೋ ಎಂದು ಆ ಕ್ಷಣ ಅವನ ಮನಸ್ಸಿನಲ್ಲಿ ಪ್ರಶ್ನೆಯು ಮೂಡಿತು. ಮರುಕ್ಷಣ **"**ಎಲ್ಲವೂ ನಿನ್ನ ಲೀಲೆ. ಇಲ್ಲವಾದರೆ ಈ ಹಸುಳೆಯನ್ನು ನಾನು ರಕ್ಷಿಸಿಕೊಡುತ್ತಿದ್ದೆನೇ? ಶಿವನೇ ನನ್ನ ದೇಹದಲ್ಲಿ ಆಗ ಪ್ರವೇಶಿಸಿದ್ದುದರಿಂದ ಹೀಗಾಯಿತು**"** ಎಂದೂ ಹೇಳಿಕೊಂಡನು.

ಮುಂದೇನು? ಗೌರಾಂಗನೆಗೆ ದಿಕ್ಕು ಯಾರೂ ಇಲ್ಲ. ಇದ್ದ ಮನೆಯು ಉರಿದು ಹೋಯಿತು. ಅವಳು ಎಲ್ಲಿರಬೇಕು**?** ಯಾರಲ್ಲಿಗೆ ಹೋಗಬೇಕು**?** ತರುಣಪ್ರಾ**ಯ**ದ ಸ್ತ್ರೀ. ಹಾಗೆ ಎಲ್ಲಿ ಬೇಕಾದರೂ ಇರುವಂತೆ ಇಲ್ಲ. ಗುರುಬಸವನಿಗೆ ಈಶ್ವರನು ದಾರಿ ತೋರಿಸಿದನು. ಆ ನಕ್ಷತ್ರಗಳ ಸಾಕ್ಷಿಯಾಗಿ, ಆ ಪ್ರಕೃತಿ ದೇವಿಯ ಸಾಕ್ಷಿಯಾಗಿ, ಆ ಶಿಶುಹೃದಯಿ ಗ್ರಾಮಸ್ಥರ ನೇತೃತ್ವದಲ್ಲಿ ಅವನು ಗೌರಾಂಗನೆಯನ್ನು ಮಗಳಾಗಿ ಪರಿಗ್ರಹಿಸಿದನು.

**"**ಭಗವಂತನು ನನಗೆ ಏನೂ ಕಡಿಮೆ ಮಾಡಲಿಲ್ಲ. ನೀನೂ ಅವನ ಸೇವೆಯಲ್ಲಿ ಮತ್ತು ಈ ಪುಟ್ಟ ದೇವರ ರಕ್ಷಣೆಯಲ್ಲಿ ಉಳಿದ ಆಯುಷ್ಯವನ್ನು ಸದ್ವಿನಿಯೋಗ ಮಾಡು. ನನ್ನ ಗುಡಿಸಲಿನಲ್ಲಿ ಇರು**"** ಎಂದು ಗುರುಬಸವನು ನುಡಿದನು.

ಅದು ಸಾಕ್ಷಾತ್ ಈಶ್ವರನ ಆಜ್ಞೆ ಎಂದು ಗೌರಾಂಗನೆಯು ಆ ವಾಕ್ಯಗಳನ್ನು ಶಿರಸಾವಹಿಸಿದಳು.

ಆ ರಾತ್ರಿ ಗುರುಬಸವನು ಈ ಮಗಳು ಮೊಮ್ಮಗನೊಡನೆ ಪಣ್ಯಕ್ಕೆ ಮರಳಿದಾಗ ಅಲ್ಲಿ ಅವನಿಗೆ ಸಂಭ್ರಮವಾದ ಸ್ವಾಗತ ಸಿದ್ಧವಾಗಿತ್ತು : ಗುರುಬಸವನ ಸಾಹಸೋದ್ಯಮವು ಆಗಲೇ ಆ ಗ್ರಾಮನಿವಾಸಿಗಳಿಗೆ ತಿಳಿದಿತ್ತು. ಸಕಲರೂ ಈ ನೂತನ ಪರಿವಾರವನ್ನು ಸಂತೋಷದಿಂದ ಎದುರ್ಗೊಂಡರು. ಮಹಾವಿಜೃಂಭಣೆಯಿಂದ ಆ ರಾತ್ರಿಯಿಡೀ ಶಿವಾರ್ಚನೆ ಪೂಜೆಗಳು ನಡೆದುವು.

ತಂದೆ ತಾಯಿಯು ನೀವೆ ಶಿವ
ಬಂಧುಬಳಗವು ನೀವೆ ಶಿವ

ಎಂದು ಹಳ್ಳಿಯ ಜನರು ಶಿವಸ್ತುತಿಯನ್ನು ಭಜಿಸಿದಾಗ ಗುರುಬಸವನು "ಶಿವೋಹಂ ಶಿವೋಹಂ" ಎಂದು ಜಪಿಸುತ್ತಿದ್ದನು.

ಈ ಮೇಳದಲ್ಲಿ ಗೌರಾಂಗನೆಯು ಏಕ ಮನಸ್ಸಿನಿಂದ ಭಾಗಿಯಾಗಿದ್ದಳು. ಮೊದಲೇ ಸಂಗೀತಗಾರ್ತಿ, ಸಂಗೀತಪ್ರೇಮಿಯಾಗಿದ್ದ ಅವಳ ಮಧುರ ಕಂಠಕ್ಕೆ ಈಗ ಶೋಭೆ ಬಂದಿತು. ಅವಳ ಸುಪ್ತ ಪ್ರತಿಭೆ ಕುದುರಿತು. ಹಾಡುತ್ತಿದ್ದಂತೆಯೇ ಅವಳು ಭಾವಪರವಶಳಾದಳು. ಉಳಿದವರು ತಮ್ಮ ಭಜನೆಯನ್ನು ಮರೆತರು. ಅವಳ ಸ್ವರ್ಗೀಯ ಕಂಠದಿಂದ ಹೊರ ಹೊಮ್ಮುತ್ತಿದ್ದ ಶಿವಸ್ತುತಿಯ ಹಾಡುಗಳನ್ನು ಆಲಿಸುತ್ತ ತನ್ಮಯತೆ ಹೊಂದಿದ್ದರು.

ಗಂಗಾ ತಾಯಿಯ ಜಡೆಯಲಿ ಧರಿಸಿದ
ಮಂಗಳ ಬೀರುವ ಶಿವನಿಗೆ ನಮಿಸೋ

ಎಂದು ಅವಳು ಪಲ್ಲವಿ ಕೂಡಿಸಿದಾಗ ಪರಮಶಿವನೇ ಅಲ್ಲಿಗೆ ಇಳಿದು ಬಂದಂತೆ ಜನರು ಭಾವಿಸಿದರು. ಜನರ ಧ್ವನಿ –

ಶಂಭೋ ಶಂಕರ ಸಾಂಬ ಶಿವಾ
ಹರ ಹರ ಶಂಕರ ಸಾಂಬ ಶಿವಾ

– ಬೆಟ್ಟ ಕಾಡು ಕಂದರಗಳಲ್ಲೆಲ್ಲ ವ್ಯಾಪಿಸಿ ಅನುರಣಿತವಾಯಿತು.

ಗುರುಬಸವ ಅವನ ಮಗಳು ಗೌರಿ ಅವಳ ಮಗ ಶಿವ ಇವರು ಹಳ್ಳಿಯ ಕೇಂದ್ರವಾಗಿ ಹಳ್ಳಿಯ ಜೀವವಾಗಿ ಹಳ್ಳಿಯ ಸಾರಸರ್ವಸ್ವವಾಗಿದ್ದರು. ಅವರು ಆ ಹಳ್ಳಿಯ ಸೇವೆಯನ್ನು ಸಂಪೂರ್ಣ ಶ್ರದ್ಧೆ ವಿಶ್ವಾಸದಿಂದ ನೆರವೇರಿಸುತ್ತಿದ್ದರು. ತುಂಟ ಅಣುಗ ಶಿವನಿಗೆ ಅಜ್ಜನ ಮೇಲೆ ಅಧಿಕ ವ್ಯಾತ್ಸಲ್ಯ. ಶಿವನನ್ನು ನೋಡಿದಷ್ಟೂ ಗುರುಬಸವನಿಗೆ ತೃಪ್ತಿಯಿಲ್ಲ. ಅವನನ್ನು ಎತ್ತಿಕೊಂಡು ಕಾಡು ಕಾಡು ಅಲೆದು ಹಣ್ಣುಗಳನ್ನು ಕೊಯ್ದು ಆರಿಸಿಕೊಡುವವನು. ವಾರಕ್ಕೊಮ್ಮೆಯಾದರೂ ತಾನೇ ಅವನನ್ನು ಮೀಯಿಸುವನು. "ಶಿವಾ" ಎಂದು ಕರೆದಾಗ ಅವನು ತಾಯಿಯ ಮಡಿಲಿನಿಂದಲೂ ಎದ್ದು ಓಡಿ ಬರುತ್ತಿದ್ದನು. ಆಗ ಗುರುಬಸವನಿಗೆ ತಾನೆಲ್ಲಿದ್ದೇನೆ ಎಂದೇ ಮರೆತುಹೋಗುತ್ತಿತ್ತು. ಅಜ್ಜನ ಹೆಲಗಮೇಲೆ ಒಂದೊಂದು ಕಾಲನ್ನು ಒಂದೊಂದು ಕಡೆ ಹಾಕಿಕೊಂಡು ಕುಳಿತು ತಲೆಯನ್ನು ಹೊಡೆದು ಜುಟ್ಟನ್ನು ಎಳೆದು "ಹೇಯ್ ಚುಜುರೆ ಹೇಯ್" ಎಂದು ಅಬ್ಬರಿಸುವನು. ಆ ಕೂಡಲೇ ಆ "ಕುದುರೆ"ಯು ಜೋರು ಜೋರಾಗಿ ನಡೆಯುತ್ತಿತ್ತು.

"ಶಿವಾ ! ನಿಂಗೇನು ಬೇಕೋ?" ಅಜ್ಜನ ಪ್ರಶ್ನೆ.

"ಕಿಚ್ಚಣ್ಣು ಅಜ್ಜ!" ಎಂದು ಅವನು ಹೇಳಿದಾಗ ಗುರುಬಸವನು ಕಾಡು ಕಾಡು ಅಲೆದು ಹುಡುಕಿ ಕಿತ್ತಳೆ ಹಣ್ಣುಗಳನ್ನು ಆ ಹುಡುಗನಿಗೆ ತಂದುಕೊಡುವನು. ಆದರೆ ಹುಳಿ ಸೋಳೆಗಳನ್ನು ತಿಂದು ಮಗು ಬಾಯಿ ಚಪ್ಪರಿಸುವಾಗ ಅಜ್ಜನಿಗೆ ಅಮಿತಾನಂದವಾಗುವುದು.

ಇಞ್ಞಣ್ಣು ಹೊಚ್ಕೊಂಡು ಜೋಜು ಓಜಜ್ಜಾ!" ಎಂದು ಮಗುವೆಂದರೆ ಗುರುಬಸವನಿಗೆ ತನ್ನ ಪ್ರಾಯವೇ ಮರೆತುಹೋಗುವುದು. ಅವನು ಪಣ್ಯದ ಬಯಲಿನಲ್ಲಿ ಓಡುವನು. ಶಂಕರನೇ ಈ ಮಗುವಿನ ರೂಪದಿಂದ ಭಕ್ತನ ಸೇವೆಯನ್ನು ಹೀಗೆ ಪಡೆಯುತ್ತಿರುವನೆಂದು ಗುರುಬಸವನು ತಿಳಿದಿದ್ದನು. ಮಗುವೇ ಈಶ್ವರ ತಾನು ನಂದಿ ಎಂದು ಅವನು ನಂಬಿದ್ದನು.

ಒಂದು ದಿನ ನಡುಹಗಲು. ದನಕಾಯುವ ಹುಡುಗರು ಎಲ್ಲೆಲ್ಲಿಯೂ ಪೊದೆಗಳನ್ನು ಸೋಮವಾರದ ಹಣ್ಣು, ಗೊಟ್ಟೆ ಹಣ್ಣು, ಮಜ್ಜಿಗೆ ಹಣ್ಣು ಮುಂತಾದವುಗಳಿಗಾಗಿ ಅರಸುತ್ತಿದ್ದರು. ಪ್ರತಿಯೊಂದು ಪೊದೆಯೂ ಅವರ ದೃಷ್ಟಿಯಿಂದ ಒಂದು ಶತ್ರುರಾಜ್ಯ. ಅದರ ಮೇಲೆ ಇವರು ಧಾಳಿ ಮಾಡಿ ಅದನ್ನು ಸೋಲಿಸುವುದು, ಧಾಳಿ ಮಾಡಲು ಹೋಗುವವರಂತೆ ಇವರು ನಟಿಸುತ್ತಿದ್ದರು. ಹಾಗೆ ಸೋತ ರಾಜ್ಯ ಇವರಿಗೆ ಕಪ್ಪ ಕಾಣಿಕೆಯನ್ನು ನೀಡಿ ಕಳುಹಿಸಬೇಕಾಗಿತ್ತು. ಈ ಕಪ್ಪ ಕಾಣಿಕೆಗಳೇ ಅವರು ತಿನ್ನುತ್ತಿದ್ದ ಹಣ್ಣುಗಳು. ಇಂತಹ ಧಾಳಿ ಮಾಡುತ್ತಿದ್ದಾಗ ಕೆಲವು ರಾಜ್ಯಗಳಲ್ಲಿ ಅಡಗಿರುತ್ತಿದ್ದ ಮೊಲ ಕಂದಿಲಿಗಳು ಹೆದರಿ ನೆಗೆದು ಓಡಿಬಿಡುತ್ತಿದ್ದವು. ಹಸುರು ಹಾವುಗಳು ಗಾಬರಿಯಿಂದ ಅಡರುಗಳಿಗೆ ನೇತುಕೊಂಡು ಹಿಂದೆ ಮುಂದೆ ಓಲಾಡುತ್ತಿದ್ದುವು. ಅವಗಳ ಮೈಯ್ಯ ಮೇಲೆ ಆಗ ಕಡುಹಸುರಿನ ಗುಳ್ಳೆಗಳು ಏಳುತ್ತಿದ್ದುವು. ಇವರ ಈ ಆಕ್ರಮಣ ನಡೆದಂತೆ ದನಗಳು ಆ ಕಡೆ ತಮ್ಮದೇ ಆಕ್ರಮಣ – ತೋಟ ಗದ್ದೆಗಳಿಗೆ ಆಕ್ರಮ ಪ್ರವೇಶ – ಮಾಡುತ್ತಿದ್ದುವು. ಅಷ್ಟರಲ್ಲಿ ಹುಡುಗರು ತಮ್ಮ ಹಣ್ಣುಗಳ ಬೇಟೆಯನ್ನು ಬಿಟ್ಟು ಇತ್ತಕಡೆ "ಓಹೋಹೋ ಹೈ ಹೈ" ಎಂದು ಅಬ್ಬರಿಸುತ್ತ ಓಡುತ್ತಿದ್ದರು.

ಈ ರೀತಿ ನಡೆಯುತ್ತಿದಾಗ ಒಬ್ಬ ಹುಡುಗನು ಯಾವುದೋ ಪೊದರಿನೆಡೆಯಲ್ಲಿ ತರಗಲೆಗಳ ಮಧ್ಯೆ ಹೊಳೆಯುವ ಒಂದು ವಸ್ತುವನ್ನು ನೋಡಿದನು ನೆಲದಿಂದ ಒಂದುಗುಲ ಮಾತ್ರ ಮೇಲೆ ಕಾಣುತ್ತಿದ್ದ ನೂತನ ವಸ್ತು ಆ ಎಲೆಗಳ ಮೇಲೆಲ್ಲ ಬೆಳಕು ಬೀರುವಷ್ಟು ಪ್ರಕಾಶಯುತವಾಗಿದ್ದಿತು. ಹುಡುಗನು ಅದನ್ನು ಕೆದರಿದನು– ಅದು ಗಡಸಾಗಿದ್ದಿತು. ಅವನು ಕೂಡಲೇ ಸಂತೋಷಾಶ್ಚರ್ಯಗಳಿಂದ ಇತರರನ್ನು ಕೂಗಿ ಕರೆದನು ಅವರೆಲ್ಲರೂ ಓಡಿ ಓಡಿ ಬಂದರು. ಬಂದವರೆಲ್ಲರೂ ಸೇರಿ ಮಣ್ಣನ್ನು ಕೆರೆದು ಕತ್ತಿಯಿಂದ ಒಕ್ಕಿ ಹೊರಗೆ ತೆಗೆದರು. ಹಾಗೆ ಮಣ್ಣನ್ನು ಬಗೆದಂತೆಯೇ ಆ ವಸ್ತುವು ನೆಲದೊಳಗೆ ಆಳವಾಗಿ ಹುಗಿದುಕೊಂಡಿದ್ದಂತೆ ತೋರಿತು. ಅಧಿಕ

ಕುತೂಹಲಪೂರಿತರಾದ ಹುಡುಗರು ಲಗುಬಗೆಯಿಂದ ಮಣ್ಣನ್ನು ಅಗೆದು ತೆಗೆದು ಆ ಸುಂದರ ವಸ್ತುವನ್ನು ನೆಲದಿಂದ ಹೊರಗೆ ಸೆಳೆದೇ ಬಿಟ್ಟರು. ಅವರು ಅದನ್ನು ನೆಲದಿಂದ, ಆ ಗುಂಡಿಯಿಂದ ಹೊರಗೆಳೆದಾಗ ಅದರ ಹೊಳಪು ಮಾಯವಾಗಿಹೋಯಿತು. ಅದೊಂದು ಕಪ್ಪಾಗಿ ತುಕ್ಕು ಹಿಡಿದಂತಹ ಖಡ್ಗದಂತೆ ಇದ್ದಿತು. ಅದರ ಪ್ರಕಾಶವೇನಾಯಿತೆಂದು ಅದು ಹೇಗೆ ಮಾಯವಾಗಿ ಹೋಯಿತೆಂದು ಹುಡುಗರಿಗೆ ವಿಸ್ಮಯವಾಯಿತು. ಹುಡುಗರು ತಮ್ಮೊಳಗೆಯೇ " ನೋಡುವ ನೋಡುವ" ಎಂದು ಆ ಕತ್ತಿಯನ್ನು ಎಳೆದಾಡಿದರು. ಬಾಳುಕತ್ತಿಯು ಜಾರಿಬಿದ್ದಿತು. ಹಾಗೆ ನೆಲಕ್ಕೆ ಬಿದ್ದ ಕತ್ತಿಯ ರೂಪ ಆ ಕ್ಷಣವೇ ಮಾರ್ಪಾಡಾಯಿತು. ಅದು ಪುನಃ ಪಳಪಳನೆ ಹೊಳೆಯಲಾರಂಭಿಸಿತು. ಹುಡುಗರೆಲ್ಲರೂ ಅದನ್ನು ಎತ್ತಲೆಂದು ಮುಂದೆ ಬಗ್ಗಿದರು. ಒಬ್ಬನು ಅದನ್ನು ನೆಲದಿಂದ ಮೇಲೆ ತೆಗೆದನು. ಕೂಡಲೇ ಅದರ ಹೊಳಪು ಅಳಿಯಿತು. ಇದೇನಾಶ್ಚರ್ಯವೆಂದು ಅವರು ಪುನಃ ಕತ್ತಿಯನ್ನು ನೆಲದ ಮೇಲೆ ಹಾಕಿದರು – ಪ್ರಭೆಯು ಪ್ರಜ್ವಲಿಸಿತು. ಹೀಗೆ ಅವರು ಆ ಕತ್ತಿಯನ್ನು ನೆಲದ ಮೇಲಿಡುವುದು ತೆಗೆಯುವುದು ಮಾಡಿ ಮಾಡಿ ಅದರ ಪ್ರಕಾಶ ಮಿಂಚುವುದು ಮಾಯವಾಗುವುದು ನೋಡಿ ನೋಡಿ ಬೆಕ್ಕಸಬೆರೆಗಾದರು. ತಮ್ಮ ನೂತರ ಸಂಶೋಧನೆಯ ಕುರಿತು ಹಿರಿಯರಿಗೆ ಅರುಹಲೆಂದು ಅವರೆಲ್ಲರೂ ಹಳ್ಳಿಯ ಕಡೆಗೆ ಸಾಗಿದರು. ವಿಷಯ ಪ್ರಚಾರವಾದೊಡನೆಯೇ ಅಲ್ಲಿ ಗ್ರಾಮಸ್ಥರ ಸಂತೆ ಸೇರಿತು. ಪ್ರತಿಯೊಂದು ವ್ಯಕ್ತಿಯೂ ಆ ಕತ್ತಿಯನ್ನು ಹಿಡಿಯುವುದು ನೆಲದ ಮೇಲಿಡುವುದೂ ಹೀಗೆ ಕ್ರಮಾನುಗತವಾಗಿ ಮಾಡಿ ನೋಡಿ ಅದೃಷ್ಟ ಪರೀಕ್ಷೆ ಮಾಡಲಾಯಿತು. ಕತ್ತಿಯು ಮೊದಲಿನಂತೆಯೇ ವರ್ತಿಸುತ್ತಿತ್ತು…. ನೆಲದ ಮೇಲಿರುವಾಗ ಮೆರಗು, ಮೇಲೆತ್ತಿದಾಗ ಕಪ್ಪು ಕಬ್ಬಿಣ. ಗುರುದೇವನಿಗೆ ಸುದ್ದಿಹೋಯಿತು – ಇಲ್ಲ ಅವನಲ್ಲಿಗೆ ಕತ್ತಿಯನ್ನು ತೆಗೆದುಕೊಂಡು ಹೋದರು. ಗುರುಬಸವನು ಕತ್ತಿಯನ್ನು ಹಿಡಿದು ನೋಡಿದನು. ಕರಿಕಬ್ಬಿಣ, ಸಾದಾ ಕತ್ತು. ಅದನ್ನು ನೆಲದ ಮೇಲಿಟ್ಟನು. ಆ ದೇದೀಪ್ಯಮಾನ ಪ್ರಕಾಶದಿಂದ ವಿಸ್ಮಯಭರಿತನಾದನು. ಖಡ್ಗವನ್ನು ಮೇಲೆತ್ತಿ ಸೂಕ್ಷ್ಮವಾಗಿ ಪರೀಕ್ಷಿಸಿದನು. ಅದರ ಹಿಡಿಯಲ್ಲಿದ್ದ ಕೆತ್ತನೆಯ ಕೆಲಸ ಅದರ ಎರಕ ಎಲ್ಲವೂ ಪರಿಷ್ಕಾರವಾಗಿದ್ದುವು. ಅದರ ಅಲಗು ಹರಿತವಾಗಿದ್ದಿತು. ಖಡ್ಗವನ್ನು ಚೆನ್ನಾಗಿ ತೊಳೆದು ತರುವಂತೆ ಹೇಳಿದನು. ಒಬ್ಬನು ಅದನ್ನು ಅಲ್ಲಿಯ ತೊರೆಯಲ್ಲಿ ಚೊಕ್ಕಟವಾಗಿ ತೊಳೆದು ತಂದನು. ಅಂಟಿಕೊಂಡಿದ್ದ ಮಣ್ಣು ಹಾಮಾಸು ಎಲ್ಲ ಹೋದುವು. ಆದರೂ ಖಡ್ಗವು ಮೊದಲಿನಂತೆಯೇ – ಹೊಳೆತವಿಲ್ಲ. ಗುರುಬಸವನು ಖಡ್ಗದ ಹಿಡಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದನು. ಅದರಲ್ಲಿ "ಚಂದ್ರವರ್ಮ" ಎಂದು ಚಿಕ್ಕ ಅಕ್ಷರಗಳಲ್ಲಿ ಕೆತ್ತಿಕೊಂಡಿದ್ದುದನ್ನು ನೋಡಿ ರೋಮಾಂಚನ ಹೊಂದಿದನು. ಕೊಡಗು ಸಂಸ್ಥಾನವನ್ನು ಸಂಸ್ಥಾಪಿಸಿದವನು ಎಂದು ಖ್ಯಾತಿವೆತ್ತ, ಕೇರಳ ಮತ್ತು ತೌಳವ ರಾಜ್ಯಗಳ ಅಧಿಪತಿಯಾಗಿ ಮೆರೆದಿದ್ದ ಧರ್ಮಾತ್ಮ ವೀರಚಕ್ರವರ್ತಿ ಚಂದ್ರವರ್ಮನ ಖಡ್ಗವೇ ಇದು ಎಂದು ಆನಂದದಿಂದ ತುಂದಿಲನಾದನು.

"ಇದು ಮಹಾಪುರುಷ ಮಹಾತ್ಮ ಚಂದ್ರವರ್ಮನ ಖಡ್ಗ. ಹಾಗಾಗಿ ಇದಕ್ಕೆ ಇಂತಹ ಮಹಿಮೆ. ಪಾಮರರ ಕೈಯ್ಯಲ್ಲಿ ಇದು ಕಪ್ಪಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ" ಎಂದು ಗುರುಬಸವನು ತನ್ನ ನಿರ್ಧಾರವನ್ನು ಸಾರಿದನು.

ಚಂದ್ರವರ್ಮನ ಪವಿತ್ರ ನಾಮೋಚ್ಚಾರಣೆಯಿಂದ ಜನರೆಲ್ಲರೂ ಹರ್ಷ ಪುಳಕಿತರಾದರು.

"ಈ ಪವಿತ್ರ ಖಡ್ಗ ಶಿವಮಂದಿರದಲ್ಲಿಯೇ ಇರಲು ಯೋಗ್ಯವಾದುದು. ಇದಕ್ಕೂ ನಾಮ ಪೂಜೆ ನೈವೇದ್ಯಗಳನ್ನು ಸಲ್ಲಿಸಬೇಕು" ಎಂದು ಗ್ರಾಮದ ಮುಖಂಡನಾದ – ಪಟೇಲನು ವಿಧಿಸಿದನು. ಸಕಲರೂ ಈ ಮಾತಿಗೆ ತಮ್ಮ ಸಮ್ಮತಿಯನ್ನು ಹೃತ್ಪೂರ್ವಕವಾಗಿ ಸೂಚಿಸಿದರು.

ಚಂದ್ರವರ್ಮನ ಖಡ್ಗ ಶಿವಮಂದಿರದಲ್ಲಿ ಪ್ರತಿಷ್ಠಾಪಿತವಾಯಿತು. ಈ ವಿಚಿತ್ರ ವಿಸ್ಮಯಕಾರಕ ಖಡ್ಗದ ರಹಸ್ಯ ಗೂಢವಾಗಿ ಉಳಿಯಿತು. ದಿನನಿತ್ಯ ಗುರುಬಸವನು ಅಭಿಷೇಕಕ್ಕಾಗಿ ಅದನ್ನು ತೆಗೆದಾಗ ಅದು ಕಪ್ಪಾಗುತ್ತಿದ್ದಿತು. ಸ್ವಸ್ಥಾನ ಪ್ರತಿಷ್ಠಾಪನೆ ಯಾದೊಡನೆ ಮೊದಲಿನಂತೆಯೇ ಹೊಳಪಿನಿಂದ ಕೂಡಿ ಆ ಮಂದಿರವನ್ನು ಬೆಳಗುತ್ತಿತ್ತು.

ಗೌರಾಂಗನೆಯ ಹಾಡುಗಾರಿಕೆಯು ಪಣ್ಯಗ್ರಾಮದಲ್ಲಿ ಎಲ್ಲವರನ್ನೂ ಮರುಳುಗೊಳಿಸಿತ್ತು. ಅಲ್ಲದೇ ಅವಳ ಸಂಬಂಧವಾಗಿ ನೆರೆಯ ಗ್ರಾಮದವರಿಗೂ ಪಣ್ಯದವರಿಗೂ ನಿಕಟಸ್ನೇಹ ಬಳಕೆಗಳು ಬೆಳೆದುವು. ಅಲ್ಲಿಂದ ಹಲವಾರು ಮಂದಿ ಭಕ್ತರು ಆಗಾಗ ಗುರುಬಸವ ಶಿವಪೂಜೆಗೆ ಬಂದು ಸೇವೆಯರ್ಪಿಸಿ ಗೌರಾಂಗನೆಯ ಸಂಗೀತ ಶ್ರವಣಾನಂದವನ್ನು ಅನುಭವಿಸಿ ಕೃತಾರ್ಥರಾಗಿ ಮರಳುತ್ತಿದ್ದರು. ಗೌರಾಂಗನೆಯ ಕಂಠಮಾಧುರ್ಯ ಅದ್ಭುತವಾಗಿದ್ದಿತು. ಅವಳು ಹಾಡುವಾಗ ಸರಸ್ವತಿಯೇ ಅವಳ ಜಿಹ್ವೆಯಲ್ಲಿ ಅವತರಿಸಿರುವವಳು ಎಂದು ಭಕ್ತರು ಭಾವಿಸುತ್ತಿದ್ದರು. ಅವಳು ಕಾಲಭೈರವನ ತಾಂಡವ ನೃತ್ಯದ ವರ್ಣನೆಯನ್ನು ಹಾಡುವಾಗ ಭಕ್ತರು ಅಲ್ಲಿ ರುದ್ರನನ್ನು ಕಾಣುತ್ತಿದ್ದರು. ತಲೆದೂಗುತ್ತಿದ್ದರು.

ತಾಂಡವ ನೃತ್ಯವಾಡಿದ ಶಂಕರ
ಚಂಡ ಪ್ರಚಂಡನು ರುದ್ರಭಯಂಕರ
ತ ಧ್ಧಿ ತ್ತೊಂ ನ್ನಂ
ತಳಾಂಗು ತರಿಕಿಟ ತಕಧಿಮಿ ತರಿಕಿಟ

ಎಂದು ಮುಂತಾಗಿ ವರ್ಣಿಸಿ ರಾಗವೆಳೆದಾಗ ಅವರು ಕಂಡದ್ದು ಗೌರಾಂಗನೆಯನ್ನಲ್ಲ. ಗುರುಬಸವನಲ್ಲ – ಫಣಿನೇತ್ರನನ್ನು, ಹಾಗೆಯೇ ಮುಂದುವರಿಸುತ್ತ–

ನಂದಿವಾಹನ ನೀಲ ಕಂಠ
ಶಂಭೊ ಶಂಕರ ದೇವ ಪೊರೆಯೊ

– ಎಂದೆನ್ನುವಾಗ ಆ ಕಾಲರುದ್ರನು ಆ ಭಯಂಕರ ರೂಪಿಯು ಸೌಮ್ಯ ಸ್ವರೂಪದಿಂದ ಶಂಕರನಾಗಿ ಶುಭಕರನಾಗಿ ಅವರ ಮುಂದೆ ಮಂದಹಾಸ ಬೀರುತ್ತಿದ್ದನು:

ಶಂಕರ ಶುಭಕರ ಪಾರ್ವತಿ ರಮಣಾ
ಕಿಂಕರ ಜನವಾ ಪೂರೆಯುವ ದೇವಾ

ಗೌರಾಂಗನೆಗೆ ತಾನು ಏನು ಹಾಡುತ್ತಿರುವೆನ್ನೆನ್ನುವುದರ ಪರಿವೆಯಿಲ್ಲದೇ ಆ ಸಂಗೀತಾಮೃತವಾಹಿನಿಯಲ್ಲಿ ಒಂದಾಗಿ ಹರಿಯುತ್ತಿದ್ದಳು. ಅವಳು ಹಾಡುತ್ತಿದ್ದಂತೆಯೇ ರಾಗಗಳೂ ಹಾಡುಗಳೂ ಅವಳಿಗೆ ತಾವಾಗಿಯೇ ಒಲಿದು ಬರುತ್ತಿದ್ದಂತೆ ಭಾಸವಾಗುತ್ತಿತ್ತು. ಇಂತಹ ದಿವ್ಯ ಸಂಗೀತ, ಈ ಮಹಾಭಕ್ತರ ಕುಟುಂಬ, ಜತೆಗೆ ಅತ್ಯಾಶ್ಚರ್ಯಕರವಾದ ಚಂದ್ರವರ್ಮನ ಖಡ್ಗ– ಈ ವಿಷಯಗಳು, ರಸದ ಗಟ್ಟಿಗಳು ಎಷ್ಟು ದಿನ ಪಣ್ಯದಲ್ಲಿಯೇ ಉಳಿಯಬಹುದು? ಸೂರ್ಯ ಪ್ರಭೆಯನ್ನು ಗೂಡಿನಲ್ಲಿ ಅಡಗಿಸುವುದು ಅಸಾಧ್ಯ. ಪಣ್ಯದ ಪರಿಮಳದ ಗಾಳಿಯು ಮಡಿಕೇರಿಗೆ ಬೀಸಿತು.

ಮಡಿಕೇರಿಯಿಂದ ಪಣ್ಯಕ್ಕೆ ಕೇವಲ ನಾಲ್ಕು ಮೈಲು ದೂರ. ಹಿಂದಿನ ಕಾಲದಲ್ಲಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಜನಸಂಚಾರ ಕಡಿಮೆ. ಆದರೂ ಮಡಿಕೇರಿಯಿಂದ ಬಹಳ ಮಂದಿ ಜನರು – ಭಕ್ತರಾಗಿಯೋ ಉತ್ಸುಕತೆಯಿಂದ ಕೂಡಿದವರಾಗಿಯೋ, ಖಡ್ಗವನ್ನು ನೋಡಲೆಂದೋ – ಗುರುಬಸವಯ್ಯನ ಆಶ್ರಮವನ್ನು ಸಂದರ್ಶಿಸತೊಡಗಿದರು. ಬಂದವರೆಲ್ಲರೂ ಗುರುಬಸವನ ಪುಣ್ಯಭೂಮಿಯಲ್ಲಿ ಒಂದು ಪೂಜೆಗಾದರೂ ತಂಗಿದ್ದು ಭಕ್ತ**ರಸಪೂರಿ**ತರಾಗಿ ಮರಳುತ್ತಿದ್ದರು. ಅವರೆಲ್ಲರೂ ಚಂದ್ರವರ್ಮನ ಖಡ್ಗವನ್ನು ಹಿಡಿದು ನೋಡಿ ಅದರ ವೈಚಿತ್ರ್ಯಕ್ಕೆ ಬೆರಗಾಗುತ್ತಿದ್ದರು. ಗೌರಾಂಗನೆಯ ಭಜನೆಯ ಗೀತೆಗಳಿಂದ ಮುಗ್ಧರಾಗಿ ಹೋಗುತ್ತಿದ್ದರು.

ಹೀಗೆ ಬಂದು ಹೋದವರಲ್ಲಿ ಒಬ್ಬ ತೇಜಸ್ವಿ ದೃಢಕಾಯದ ಯುವಕನೂ ಇದ್ದನು. ಜನರ ಮಧ್ಯೆ ಮುಂದೆ ನುಗ್ಗಿ ಖಡ್ಗವನ್ನು ಹಿಡಿದು ನೋಡುವ ಪ್ರಯತ್ನವನ್ನು ಅವನೇನೂ ಮಾಡಲಿಲ್ಲ.

ಆ ಸಮಯದಲ್ಲಿ ಕೊಡಗು ದೇಶದ ರಾಜಕಾರಣದಲ್ಲಿ ಹಲವಾರು ವ್ಯತ್ಯಾಸಗಳು ತಲೆದೋರಿದ್ದುವು. ದೊಡ್ಡ ವೀರರಾಜನು ಇನ್ನೂ ಯೌವ್ವನದಲ್ಲಿಯೇ ಶಿವಾಧೀನನಾಗಿದ್ದನು. ಅವನ ಮಗ ಲಿಂಗರಾಜ ಕೇವಲ ಎಳೆಯ ತರುಣನು. ಆದರೂ ಅವನು ದಕ್ಷನಾಗಿದ್ದುದರಿಂದ ತಂದೆಯ ಮರಣಾನಂತರ ಸ್ವಾತಂತ್ರ್ಯ ಸಾರಿದ್ದ ಸಾಮಂತ ರಾಜರನ್ನು ಸದೆಬಡಿದು ಕೊಡಗು ರಾಜರ ರಾಜ್ಯವನ್ನು ಪುನಃಸ್ಥಾಪಿಸಿದ್ದನು. ಇಂತಹ ತರುಣ ಪ್ರಭುವಿನ ಮೇಲೆ ಕೊಡಗರ ಪ್ರೀತ್ಯಾದರಗಳು ಹೆಚ್ಚಾಗಿ ಬೆಳೆದುವು. ಯೋಗ್ಯ ಪ್ರಭುವಾದ ಲಿಂಗರಾಜನಿಗೆ ಪ್ರತಿ **ಗ್ರಾ**ಮದವರೂ ತಮ್ಮ ನಜರನ್ನು ಭಕ್ತಿಪೂರ್ವಕವಾಗಿ ಅರ್ಪಿಸಿ ಅವನಿಗೆ ವಿಧೇಯತೆಯನ್ನೂ ನಮ್ರತೆಯನ್ನೂ ಸಾರಿ ಯೋಗ್ಯ ಸನ್ಮಾನ ಪಡೆದು ಮರಳುತ್ತಿದ್ದರು. ಹೀಗೆ ನಜರೊಪ್ಪಿಸುವಾಗ ಕಾಣಿಕೆಯೊಡನೆ ವಿಶೇಷವಾದ ವಸ್ತುವನ್ನೋ ಪದಾರ್ಥವನ್ನೋ ರಾಜನಿಗೆ ಅರ್ಪಿಸುವುದು ರೂಢಿಯಾಗಿತ್ತು. ನಾಪೋಕ್ಲು ಗ್ರಾಮದವರು ಜರಿಪತ್ತಲವನ್ನು ನೀಡಿದರೆ ಮದೆನಾಡಿನವರು ಸೊಗಸಾದ ರತ್ನಗಂಬಳಿಯನ್ನು ಕೊಟ್ಟಿದ್ದರು. ಪೊನ್ನಂಪೇಟೆಯವರು ರತ್ನಖಚಿತವಾದ ಒಂದು ಕಿರಿಯ ಸಿಂಹಾಸನವನ್ನು ನಿವೇದಿಸಿದ್ದರು. ಪಣ್ಯಗ್ರಾಮದ ಪಟೇಲನನು ಆ ಗ್ರಾಮದ ಮುಖಂಡನಾಗಿ ರಾಜನ ದರ್ಬಾರಿಗೆ ಸಾಗಿದನು. ಚಂದ್ರವರ್ಮನ ಖಡ್ಗವನ್ನೇ ಆ ಶುಭ ಸಂದರ್ಭದಲ್ಲಿ ರಾಜನಿಗೆ ಅರ್ಪಿಸುವುದು ಉಚಿತ, ಮರ್ಯಾದೆ ಎಂದು ಗ್ರಾಮಸ್ಥರು ತೀರ್ಮಾನಿಸಿದ್ದರು. ಗುರುಬಸವನು ಆ ಖಡ್ಗವನ್ನು ಪಟೇಲನಿಗೆ ಕೊಟ್ಟಿದ್ದನು.

ರಾಜಾಸ್ಥಾನದಲ್ಲಿ ಸಂಪ್ರದಾಯದ ಬಿನ್ನವತ್ತಳೆ ಮರ್ಯಾದೆಗಳು ಮುಗಿದ ಬಳಿಕ ಪಟೇಲನು ಒರೆಯಿಂದ ಈ ನೂತನ ಖಡ್ಗವನ್ನು ತೆಗೆದು ಲಿಂಗರಾಜನ ಪಾದತಲದಲ್ಲಿಡಲು ಕೈನೀಡಿದನು.

"ನಿಲ್ಲಿ ಪಟೇಲರೇ! ಈ ಖಡ್ಗದ ಹೆಸರೇನು?" ರಾಜನ ಪ್ರಶ್ನೆ.

"ಇದೊಂದು ಮಹಾಮಹಿಮೆ, ವಿಶೇಷತೆ ಇರುವ ಖಡ್ಗ ಪ್ರಭುಗಳೇ. ಇದರ ಹೆಸರು ಹಿರಿಮೆಯಿರುವಂತಹದು – ಚಂದ್ರವರ್ಮನ ಖಡ್ಗವೆಂದರೆ ಇದೇ ಮಹಾರಾಜರೇ!"

"ನೆಲದಲ್ಲಿಟ್ಟರೆ ಹೊಳೆಯುವ, ಕೈಯಲ್ಲಿ ಹಿಡಿದರೆ ಹೊಳೆಯದಿರುವ ಖಡ್ಗವಿದಲ್ಲವೇ?"

"ಪ್ರಭುಗಳು ಯಥಾರ್ಥವನ್ನೇ ನುಡಿಯುತ್ತಿರುವರು."

"ಇಂತಹ ಪವಿತ್ರ ಖಡ್ಗವನ್ನು ಇಟ್ಟುಕೊಳ್ಳಲು ನಾನು ಯೋಗ್ಯನಲ್ಲ. ಪಟೇಲರೇ! ಇದು ಅಲ್ಲಿಯೇ ಶಿವಮಂದಿರದಲ್ಲಿರಲಿ" ಎಂದು ವಿನಯದಿಂದ ರಾಜನು ಆಜ್ಞಾಪಿಸಿದನು.

ಪಟೇಲನು ರಾಜಾಜ್ಞೆಯನ್ನು ಶಿರಸಾವಹಿಸಿ ಹಿಂದೆ ತೆರಳಿದನು. ಕುಟೀರದ ಬೆಳಕು, ಗ್ರಾಮದ ಜ್ಯೋತಿ ಹಿಂದೆ ಬಂದಿತು. ಅದು ರಾಜಾಸ್ಥಾನವನ್ನು ಅಲಂಕರಿಸಿದ್ದರೆ ಯಾರಿಗೂ ಬೇಸರವಾಗುತ್ತಿರಲಿಲ್ಲ. ಆದರೆ ಈಗ ಆ ಪವಿತ್ರ ಖಡ್ಗ ಯಥಾಸ್ಥಾನ ಪ್ರತಿಷ್ಠಾಪಿತವಾದಾಗ ಗ್ರಾಮದ ಸಕಲರಿಗೂ ಪರಮ ಸಂತೋಷವಾಯಿತು. ಐದು ವರ್ಷದ ಶಿವನು ನಲಿದ. ನಲಿದು ಕೇಕೆ ಹಾಕಿದ.

ದಿನಗಳು ಪ್ರಚಂಡ ವೇಗದಿಂದ ಗತಿಸಿದುವು. ಮಳೆಗಾಲ ಕಳೆದು ಚಳಿಗಾಲ ಬಂದಿತು. ನೀರು ಸುರಿಸಿದ ಮೋಡಗಳು ಬೆಳ್ಳಗಾಗಿ ತೆಳ್ಳಗಾಗಿ ಹಾಗೆಯೇ ಮರೆಯಾದುವು. ಹಸುರುಹಚ್ಚಡ ದಟ್ಟವಾಗಿ ವ್ಯಾಪಿಸಿತು. ಆ ಸಮಯದಲ್ಲಿ ಲಿಂಗರಾಜನ ಸೈನಿಕರು ಪಣ್ಯಗ್ರಾಮದ ಸಮೀಪದಲ್ಲಿ ಕವಾಯತು ವ್ಯಾಯಾಮಗಳಿಗಾಗಿ ಪಾಳೆಯ ಬಿಟ್ಟರು. ಅಲ್ಲಿಯ ವಿಶಾಲವಾದ ಬಯಲಿನಲ್ಲಿ ಅದರ ಅಂಚಿನ ಕಾಡುಬೆಟ್ಟಗಳಲ್ಲಿ ಅವರಿಗೆ ಬೇಕಾದಂತಹ ಯುದ್ಧದ ವ್ಯಾಯಾಮಗಳನ್ನು ಮಾಡಲು ಎಡೆಯಿದ್ದಿತು. ಹಾಗೆ ಶಿಕ್ಷಣವು ಕೆಲವು ವಾರಗಳವರೆಗೆ ಸಾಗಿತು. ಸೈನಿಕರಲ್ಲಿ ಕೆಲವರು ಬಿಡುವೇಳೆಯಲ್ಲಿ ಗುರುಬಸವನ ಆಶ್ರಮಕ್ಕೆ ಬಂದು ದೇವರ ಪೂಜೆ ಭಜನೆಗಳಲ್ಲಿ ಭಾಗಿಗಳಾಗಿ ಮರಳುತ್ತಿದ್ದರು. ಗೌರಾಂಗನೆಯ ಸಂಗೀತವು ಸದಾ ಅವರ ಕರ್ಣಕುಹರಗಳಲ್ಲಿ ಅನುರಣಿತವಾಗುತ್ತಿದ್ದಿತು. ಹೀಗೆ ಸೈನಿಕರಿಂದ ಕ್ರಮೇಣ ಅಧಿಕಾರಗಳವರೆಗೂ ಅವಳ ಗಾನಮಹಿಮೆಯು ವ್ಯಾಪಿಸಿತು.

ಶಿಬಿರದ ಕೊನೆಯ ದಿವಸ. ಸೈನಿಕರಲ್ಲಿ ಸಂತೋಷವೇ ಸಂತೋಷ. ಆ ದಿನ ಮುಗಿದರೆ ಮೂರು ತಿಂಗಳಿನ ಅವರ ದೀರ್ಘ ಏಕಾಂತವಾಸ ಮುಗಿದು ಮತ್ತೆ ಅವರು ಸಂಸಾರವಂದಿಗರಾಬಹುದು. ಆ ದಿನವನ್ನು ಅತಿ ವೈಭವದಿಂದ ವಿಜೃಂಭಣೆಯಿಂದ

ನೆರವೇರಿಸಬೇಕೆಂದು ಮೊದಲೇ ನಿಶ್ಚಯವಾಗಿತ್ತು. ಲಿಂಗರಾಜನೇ ಅಂದಿನ ಸಾಯಂಕಾಲ ಅಲ್ಲಿಗೆ ದಯಮಾಡಿಸಿ ಸೈನಿಕರ ಪ್ರಣಾಮ ಮರ್ಯಾದೆ ಸ್ವೀಕರಿಸುವೆನೆಂದು ಮೊದಲು ವದಂತಿಯಿತ್ತು. ಆದರೆ ಅವನಿಗೆ ಬೇರೇನೋ ತ್ವರಿತದ ರಾಜಕಾರಣವಿದ್ದುದಿಂದ ಮಡಿಕೇರಿಯಿಂದ ಹೊರಗೆ ಹೊರಡಲೇ ಆಗಲಿಲ್ಲ.

ಇಂತಹ ಮಹಾದಿನದಂದು ಸಂಗೀತಗಾರ್ತಿ ಗೌರಾಂಗನೆ**ಯ**ನ್ನು ಕರೆಸಬೇಕೆಂದೂ, ಅವಳ ಹಾಡನ್ನು ಕೇಳಿ ಆನಂದಿಸಬೇಕೆಂದೂ ಶಿಬಿರಾಧಿಪತಿಯು ನಿಶ್ಚಯಿಸಿದನು. ಅಧಿಪತಿಯ ಪರವಾಗಿ ವಿನಯಪೂರ್ವಕ ಪ್ರಣಾಮ ಮತ್ತು ಆಮಂತ್ರಣ ಗೌರಾಂಗನೆಗೆ ಮೊದಲಾಗಿಯೇ ಬಂದಿತು.

"ನಾನು ದೇವರ ಸನ್ನಿಧಾನದಲ್ಲಿ ಮಾತ್ರ ಹಾಡುವುದು, ಬೇರೆಲ್ಲಿಯೂ ಹಾಡುವುದಿಲ್ಲ. ಇಲ್ಲಿಂದ ಎಲ್ಲಿಗೂ ಕದಲುವುದೂ ಇಲ್ಲ ಎಂದು ಅವಳು ನಿರ್ಧಾರಪೂರ್ವಕವಾಗಿ ಹೇಳಿಕಳುಹಿಸಿದಳು.

ಅಧಿಕಾರಿಯು ಈ ಮಾತನ್ನು ಕೇಳಿ ತಾನೇ ಸ್ವತಃ ಒಂದು ಅವಳನ್ನು ಪರಿಪರಿಯಾಗಿ ಪ್ರಾರ್ಥಿಸಿದನು.

"ಅಲ್ಲಿಯೂ ದೇವರ ನಾಮಸಂಕೀರ್ತನೆ ಮಾಡಿ ತಾಯೀ" ಎಂದು ಅವನೆಂದಾಗ, ಪ್ರಾಯಶಃ ಅವನ ವಿನಯ ಸೌಜನ್ಯಗಳಿಗೆ ಮಾರುಹೋಗಿ ಗೌರಾಂಗನೆಯು ಒಪ್ಪುತ್ತಿದ್ದಳೋ ಏನೋ!

ಆದರೆ ಗುರುಬಸವನು ಆಗ ಸ್ಪಷ್ಟವಾಗಿ ಖಂಡಿತವಾಗಿ ಹೇಳಿದನು –

"ಏನು ಗೌರಿ? ನಿನಗೆ ಅಲ್ಲಿಗೆ ಹೋಗುವ ಮನಸ್ಸೆ? ನಿನಗೇಕೆ ಈ ದುರ್ಬುದ್ಧಿಯನ್ನು ಕೊಟ್ಟನೋ ಭಗವಂತ."

ಗೌರಾಂಗನೆಯು ತಾನು ಬರುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿಯೇ ಬಿಟ್ಟಳು.

ಸೈನಿಕರ ನಾಯಕನು ಹತಾಶನಾಗಿ ಸ್ವಲ್ಪ ಮಟ್ಟಿಗೆ ಅಪಮಾನಿತನಾಗಿ ಹಿಂತಿರುಗಿದನು. ತಾನೊಬ್ಬ ರಾಜನ ಬಲಗೈ ಬಂಟನೆಂದಿರುವಾಗ ಈ ಮಹಾಸೇನೆ**ಯ** ಅಧಿಪತಿಯಾಗಿರುವಾಗ ತನಗೆ ಇಂತಹ ಮಾ**ತು**. ತಾನು ದಾರಿ ಬಿಟ್ಟು ಹೋಗಿ ಅವರನ್ನು ಪ್ರಾರ್ಥಿಸಿಕೊಂಡರೂ ಅಪಮಾನಕರವಾದ ಬಿರುನುಡಿ. ಸೇನಾನಿಯಲ್ಲಿ ಹತಾಶೆಯು ಅಪಮಾನರೋಷಗಳಾಗಿ ಪರಿವರ್ತನೆಗೊಂಡಿತು. ಅವನು ಹೇಗಾದರೂ, ಬಲಾತ್ಕಾರದಿಂದಾದರೂ, ಗೌರಾಂಗನೆಯನ್ನು ಹಿಡಿದುತರಿಸಿ ಹಾಡಿಸುವುದು ನಿಶ್ಚಯ ಎಂದುಕೊಂಡನು. ಕೂಡಲೇ ಅವನ ಸೈನಿಕರು ಹತ್ತುಮಂದಿ ಸಶಸ್ತ್ರಯೋಧರು ಆ ಅಬಲೆಯನ್ನು ಹಿಡಿದು ತರಲು ಗುರುಬಸವನ ಕುಟೀರದೆಡೆಗೆ ಧಾವಿಸಿದರು.

"ನಾನು ಬರಲಾರೆ ನಾನು ಬರಲಾರೆ" ಎಂದು ಆ ಸಾಧ್ವಿಯು ಮೊರೆಯಿಟ್ಟಳು.

ಗುರುಬಸವನು ಶಿವನನ್ನು ನಡೆಸಿಕೊಂಡು ದೂರವೆಲ್ಲಿಯೋ ಹೋಗಿದ್ದನು. ಗೌರಾಂಗನೆಯನ್ನು ಸೆರೆಯಾಗಿ ಹಿಡಿದುಕೊಂಡು ಸೈನಿಕರು ತೆರಳಿಯೇ ಬಿಟ್ಟರು. ಅಬಲೆಯ ವಿರುದ್ಧ ಸಶಸ್ತ್ರ ಸೈನಿಕರ **ಪ್ರತಾಪ** – ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ! ಆದರೆ ಅವಳನ್ನು ಮರ್ಯಾದೆಯಿಂದ ನಡೆಸಿಕೊಂಡರು. ಸೇನಾನಾಯಕನು ಅವಳಿಗೆ ಗೌರವವಿತ್ತು ತಮ್ಮ ಅನಿವಾರ್ಯ ಅಕೃತ್ಯಕ್ಕಾಗಿ ಕ್ಷಮಾಯಾಚನೆ ಮಾಡಿದನು.

"ದೇವರನ್ನು ಕದ್ದು ತರುವುದು ಪಾಪಕರವಲ್ಲ. ಆ ಉದ್ದೇಶದಿಂದ ನಾವು ನಿಮ್ಮನ್ನು ಇಲ್ಲಿಗೆ ಕರೆಸಿಕೊಂಡಿದ್ದೇವೆ ತಾಯೀ! ನೀವು ಕೋಪಿಸಬಾರದು. ನಿಮ್ಮ ದೇವರ ನಾಮಗಳಿಂದ ನಮ್ಮನ್ನು ಅನುಗ್ರಹಿಸಬೇಕು" ಎಂದು ಬಲು ವಿನಯದಿಂದ ನುಡಿದ ಸೇನಾನಿಯ ನುಡಿಗಳನ್ನು ತಿರಸ್ಕರಿಸುವುದು ಗೌರಾಂಗನೆಗೆ ಆಗದ ಮಾತಾಯಿತು.

ದೇವರ ಗುಣಗಾನ ಪ್ರಾರಂಭವಾಯಿತು. ಅವಳು ಎಷ್ಟು ಹೊತ್ತು ಹಾಡಿದಳೋ ಯಾರಿಗೂ ತಿಳಿಯಲಿಲ್ಲ. ಕಾಲಾತೀತವಾದ ಸಂಗೀತ ಆ ಪ್ರದೇಶವಿಡೀ ವ್ಯಾಪಿಸಿ ಸರ್ವವೂ ಶಿವಮಯವಾಗಿದ್ದಿತು.

ಶಿವನಾಮಸ್ಮರಣೆ ಮಾಡೋ
ಭವ ಬಂಧನವ ತೊಡೆದು ಹಾಕೋ

ಎನ್ನುವ ಕೊನೆಯ ಗೀತ ಹಾಡಿದಾಗಲಂತೂ ಸೈನಿಕರು ಶಿವನಾಮವನ್ನೇ ಜಪಿಸುತ್ತಿದ್ದರು. ಸೈನಿಕರಲ್ಲಿ, ಜನರಲ್ಲಿದ್ದಂತೆ, ದೇವಭಕ್ತಿ ನೀತಿ ಮುಂತಾದ ಸದ್ಗುಣಗಳು ಭರಿತವಾಗಿದ್ದ ಕಾಲವದು. ಹಾಗಾದುದರಿಂದ ಇಂತಹ ಸಂಗೀತ ಅವರಿಗೆ ಬಲು ಮೆಚ್ಚಿಕೆಯಾಗಿದ್ದಿತು.

ಸಂಗೀತ ಮುಗಿಯುವಾಗ ಆ ಭಾವಸಮಾಧಿಯಿಂದ ಸೈನಿಕರು ತಿಳಿದೇಳುವಾಗ ಗೌರಾಂಗನೆಯು ಪುನಃ ಭೂಲೋಕಕ್ಕೆ ಶಂಕರಪಾದತಲದಿಂದ ಮ**ರಳು**ವಾಗ ಪೂರ್ವ ದಿಗಂತದಲ್ಲಿ ನವ ಅರುಣೋದಯವಾಗುತ್ತಿತ್ತು. ಈ ಸಂಗೀತ ಸ್ರೋ**ತಸ್ಸು** ದಿಗ್ದಿಗಂತಗಳಲ್ಲಿ ಹರಿದು ಪಸರಿಸಿ ಅಲ್ಲೆಲ್ಲ ಮಂಗಳಕರ ರಾಗವು ಮಿಡಿಯುತ್ತಿದ್ದಿತು. ಪಕ್ಷಿಗಳ ಗಾನ, ಬೆಳಕಿನ ವೈಭವ; ಸೂರ್ಯದೇವನು ಆನಂದಪುಳಕಿತನಾಗಿ ಚೈತನ್ಯಭರಿತನಾಗಿ ಮೇಲೆದ್ದು ಬಂದನು. ಸೇನಾಧಿಪತಿಯು ತಾನೇ ಸ್ವತಃ ಗೌರಾಂಗನೆಯನ್ನು ಗುರುಬಸವನ ಆಶ್ರಮದವರೆಗೆ ಕರೆದುಕೊಂಡು ಹೋಗಿ ಅಲ್ಲಿ ಅವಳನ್ನು ಬಿಟ್ಟು ಮರಳಿದನು.

ಗೌರಾಂಗನೆಯ ಆಗಿನ ಮನಃಸ್ಥಿತಿಯು ಹೇಗಿದ್ದಿರಬಹುದು? ಗುರುಬಸವನ ಕಟ್ಟಾಣತಿಯ ವಿರುದ್ಧ ಅವಳು ಶಿಬಿರಕ್ಕೆ ಹೋಗಿದ್ದಳು. ಆಜ್ಞೋಲ್ಲಂಘನೆಯನ್ನು ಅವಳು ಮಾ**ಡಿದ್ದಿಲ್ಲ**ವಾದರೂ ಫಲಿತಾಂಶವು ಹಾಗಾಗಿದ್ದಿತು. ಅವಳ ಒಪ್ಪಿಗೆಯಿಲ್ಲದೇ ಅವಳನ್ನು ಅಲ್ಲಿಗೆ ಒಯ್ದಿದ್ದರು. ಈಗ ಗುರುವಿನ ಮುಖವನ್ನು ಹೇಗೆ ನೋಡುವುದು? ಮಗನು ಎಲ್ಲಿ? ರಾತ್ರಿ ತಾಯಿಯನ್ನು ಕಾಣದೇ ಎಷ್ಟು ಹಲುಬುತ್ತಿದ್ದನೋ?

"ಶಿವಾ ! ಚಿಕ್ಕಪ್ಪಾ!" ಎಂದು ಕರೆಯುತ್ತ ಅವಳು ಕುಟೀರದೊಳಗೆ ಪ್ರವೇಶಿಸಿದಳು. ಸ್ವಲ್ಪ ಹೆದರಿಕೆಯಿಂದಲೇ ಕಾಲಿಟ್ಟಳು. ಗುರುಬಸವನು ಸ್ನಾನ ಮಾಡಿ ಮರಳಿರುವ ಹೊತ್ತದು. ಒಳಗಿನಿಂದ ಅವನ ಧ್ವನಿಯು ಗುಡುಗಿತು.

"ನಿನಗಿಲ್ಲಿ ಪ್ರವೇಶವಿಲ್ಲ. ಸ್ವಚ್ಛಂದ ಸ್ತ್ರೀ! ನೀನು ಎಲ್ಲಿಗೆ ಬೇಕಾದರೂ ಹೋಗು."

ಶಿವನು ಪ್ರೀತಿ ತುಂಬಿದ ರೋದನ ಧ್ವನಿಯಿಂದ "ಅಮ್ಮಾ ಅಮ್ಮಾ" ಎಂದು ಕರೆಯುತ್ತ ಓಡಿಬರಲು ಹೊರಟನು. ಅಜ್ಜನು ಅವನನ್ನು ಬಿಗಿಯಾಗಿ ಹಿಡಿದುಕೊಂಡು ಎದ್ದುಬಂದನು.

"ನನ್ನ ಆಜ್ಞೆಯನ್ನು ನೀನು ಉಲ್ಲಂಘಿಸಿ ನಾನಿಲ್ಲಿ ಇಲ್ಲದಾಗ ಹೋದೆ. ನಿನ್ನಿಷ್ಟ ಬಂದಾಗ ಹೋದೆ. ರಾತ್ರಿಯೆಲ್ಲ ಹೋಗಿದ್ದೆ. ಎಲ್ಲಿಗೆ ಹೋಗಿದ್ದೆ? ಶಿಬಿರಕ್ಕಲ್ಲವೆ?"

"ಆದರೆ ನಾನಾಗಿಯೇ ಹೋಗಲಿಲ್ಲ."

"ಮತ್ತೆ ನೀನಾಗಿಯೇ ಹೋಗದೆ ಅವರೇನು ನಿನ್ನನ್ನು ಎಳೆದುಕೊಂಡು ಹೋಗಲು ನೀನೇನು ಮಗುವೆ?"

"ನನ್ನದು ತಪ್ಪಿಲ್ಲ ಚಿಕ್ಕಪ್ಪ."

"ಅಮ್ಮಾ ಅಮ್ಮಾ" ಎಂದು ಶಿವನು ಎಳೆದಾಡಹೊರಟನು.

ಹುಡುಗನಿಗೆ ರಾತ್ರಿಯಿಡೀ ತಾಯಿಯನ್ನು ಕಾಣದೆ ಮರುದಿನ ಕಂಡಾಗ ಮೇರೆ ಮೀರುವ ಸಂತೋಷವಾಗಿತ್ತು. ತಾಯಿಯ ಕಡೆಗೆ ಧಾವಿಸಿದನು – ಅಜ್ಜನನ್ನು ಬಲವಾಗಿ ಹಿಡಿದು ಎಳೆದನು. ಆದರೆ ಅಜ್ಜನ ಹಿಡಿತ ಇನ್ನೂ ಶಿಥಿಲವಾಗಿರಲಿಲ್ಲ. ಗೌರಾಂಗನೆಯ ಕಣ್ಣುಗಳಲ್ಲಿ ನೀರು ತುಂಬಿ ಜಾರಿತು. ಅವಳು ಏನೂ ಹೇಳಲಿಲ್ಲ. ಅಧೋವದನೆಯಾದಳು.

"ನಿನಗಿನ್ನಿಲ್ಲಿ ಪ್ರವೇಶವಿಲ್ಲ. ಎಲ್ಲಿಗೆ ಬೇಕಾದರೂ ಹೋಗು. ನಿನ್ನ ಸಂಗೀತ ಪ್ರದರ್ಶನಮಾಡು" ಎಂದು ಗುಡುಗಿದನು.

ಗುಡಿಸಲಿನ ಕದವನ್ನು ಅವಳ ಮುಖದ ಮೇಲೆಯೇ ಬಡಿದನು. ಹುಡುಗನು ತಾಯಿಯ ಸಾಮೀಪ್ಯಕ್ಕಾಗಿ ಹೊಡೆದಾಡಿದನು ಅತ್ತನು.

ನಿರಪರಾಧಿ. ಅಪಮಾನಿತ ಸ್ತ್ರೀ. ಯಾರ ತಪ್ಪಿಗೆ ಯಾರಿಗೆ ಶಿಕ್ಷೆ? ಘೋರ ಶಿಕ್ಷೆ. ಸೌಮ್ಯ ಮೂರ್ತಿ ಗುರುಬಸವನಲ್ಲಿ ಎಂತಹ ಕಠೋರತೆ, ನಿಷ್ಕರುಣೆ ? ಶಂಕರನು ಭಯಂಕರನಾದ, ಗೌರಾಂಗನೆಗೆ ಭಯಂಕರಾಘಾತ, ವಿಧವೆ, ಪುತ್ರಸುಖ**ವಂಚಿತೆ**. ನಿರ್ಗತಿಕ ಸ್ತ್ರೀ, ನಿಲ್ಲಲು ಎಡೆಯಿಲ್ಲ. ಆದರೆ ಮನಸ್ಸು ಹೃದಯ ದೇಹ ಪರಿಶುದ್ಧವಾಗಿವೆ. ಸಾತ್ತ್ವಿಕ ಗುಣದಿಂದ ಅಧಿಕ ಮನೋದಾರ್ಢ್ಯ ಸಾಮರ್ಥ್ಯ ಇರುವ ಹೆಂಗಸು ಅವಳಾಗಿದ್ದಳು. ಸತ್ತ್ವ ಪರೀಕ್ಷೆ ನಡೆಯುತ್ತಿದೆ. ಶಿವನ ಲೀಲೆ ಮರೆಯಲಿ.

ಗೌರಾಂಗನೆಯು ದೃಢ ನಿರ್ಧಾರದಿಂದ ಅಲ್ಲಿಂದ ಸಾಗಿಯೇ ಬಿಟ್ಟಳು. ದೂರ ದೂರ ಹೋಗಿಯೇ ಬಿಟ್ಟಳು. ಆ ನಿರ್ಧಾರಪೂರ್ವಕವಾದ ನಡಿಗೆಯಲ್ಲಿ ಅವಳ ಕಾಲುಗಳಿಗೆ ಮುಳ್ಳು ಚುಚ್ಚಿದಂತಾಗುತ್ತಿದ್ದುದು ಮಗನ "ಅಮ್ಮಾ ಅಮ್ಮಾ" ಕರೆ. ಆದರೆ ಅದೇ ಮಗನ ಉಜ್ಜ್ವಲ ಭವಿಷ್ಯದ ಹಂಬಲವೇ ಅವಳಿಗೆ ಧೈರ್ಯವನ್ನೂ ಶಕ್ತಿಯನ್ನೂ ನೀಡುತ್ತಿದ್ದಿತು. ಗೌರಾಂಗನೆಯು ದೂರ ಹೋದಳು. ಪಣ್ಯದ ಚಿರ ಪರಿಚಿತ ಗಿಡಮರಗಳು ದನಕರುಗಳು ದನ ಕಾಯುವ ಹುಡುಗರು ಎಲ್ಲರೂ ಎಲ್ಲರೂ ಮೌನವಾಗಿ ನಿಂತು ಅವಳ ನಿರ್ಗಮನವನ್ನೇ ನಿಟ್ಟಿಸಿದವು, ನಿಟ್ಟಿಸಿದರು.

ವಜ್ರದೃಢ ಮನಸ್ಸಿನಿಂದ ಅವಳು ಮುಂದೆ ನಡೆದಳು, ನಿರ್ದಿಷ್ಟವಾದ ಗುರಿಯನ್ನು ಸೇರಿ ನೂತನ ಸಾಹಸ ಕಾರ್ಯದಲ್ಲಿ ಉದ್ಯುಕ್ತಳಾದಳು – ರಾಜಧಾನಿ ಮಡಿಕೇರಿಯನ್ನು ಸೇರಿದಳು. ಅಲ್ಲಿಯ ಶಿವಮಂದಿರದಲ್ಲಿ ಅವಳು ನೆಲಸಿದಳು.

ಸುಂದರ ಸೌಸವಪೂರಿತ ಪುಷ್ಪ ಎಲ್ಲಿದ್ದರೂ ಭಕ್ತಭೃಂಗಗಳು ಅರಸಿ ಬರುವುವು. ಗೌರಾಂಗನೆಯ ಗಾನವಾಹಿನಿ ಶಿವಮಂದಿರಲ್ಲಿ ತುಂಬಿ ಹರಿಯಿತು. ಆ ಕಾವೇರಿ ನದಿಯಲ್ಲಿ ಮಿಂದು ಭಕ್ತರು ಕೃತಾರ್ಥರಾದರು. ಅಂದಿನಿಂದ ಶಿವಮಂದಿರಕ್ಕೆ ಖ್ಯಾತಿ ಕಳೆ ಏರಿದುವು. ಆಗಮಿಸುವ ಭಕ್ತ ಸಮೂಹ ಏರುತ್ತಿದ್ದಿತು. ಪಣ್ಯದ ಆಶ್ರಮದ ಭಕ್ತೆಯು ಇಲ್ಲಿಗೆ ಬಂದು ನೆಲಸಿರುವುದು ಮಡಿಕೇರಿಯ ಭಾಗ್ಯ ಎಂದುಕೊಂಡರು ಭಕ್ತಾದಿಗಳು.

ಗೌರಾಂಗನೆಯ ಪ್ರತಿಭೆ, ಸಂಗೀತ ಕಲೆಯಲ್ಲಿ ಪರಿಶ್ರಮ, ಕಂಠ ಮಾಧುರ್ಯ, ಭಕ್ತಿಗಳು ಲಿಂಗರಾಜನ ಗಮನಕ್ಕೆ ಶೀಘ್ರವಾಗಿ ಬಂದುವು. ಹಿಂದೊಮ್ಮೆ ವೇಷಪಲ್ಲಟನ ಮಾಡಿ ಅವನು ಪಣ್ಯಾಶ್ರಮಕ್ಕೆ ಹೋಗಿ ಈ ರಮಣೀಮಣಿಯ ಸಂಗೀತ ಶ್ರವಣ ಮಾಡಿದ್ದನು. ಗುಣಪಕ್ಷಪಾತಿ ರಾಜನಿಗೆ ಅವಳ ಯೋಗ್ಯತೆ ಅರಿಯಲು ಸಮಯ ಬೇಕಾಗಿರಲಿಲ್ಲ.

ಒಂದು **ದಿನ** ಅವಳಿಗೆ ರಾಜಾಸ್ಥಾನಕ್ಕೆ ಬರಬೇಕೆಂದು ಆಮಂತ್ರಣವು ಬಂದಿತು. ಲಿಂಗರಾಜನೇ ಸ್ವತಃ ಪತ್ರವನ್ನು ಬರೆದು ಮಂತ್ರಿಯ ಕೈಯ್ಯಲ್ಲಿ ಅದನ್ನು ಗೌರಾಂಗನೆಗೆ ಕಳುಹಿಸಿದ್ದನು. ಅವಳು ಸಂತೋಷದಿಂದ ಆಹ್ವಾನವನ್ನು ಮನ್ನಿಸಿದಳು.

ಮರುದಿನ ರಾಜಸಭೆಯಲ್ಲಿ ಗೌರಾಂಗನೆಯ ಸಂಗೀತ. ಆ ದಿನ ಅವಳ ಸಂಗೀತದ ಮಟ್ಟ ಪರಮೋತ್ಕೃಷ್ಟವಾಗಿತ್ತು. ಅಪೂರ್ವವಾದ ಅದ್ಭುತವಾದ ಕಲಾಕೌಶಲ್ಯದಿಂದ, ಪ್ರತಿಭೆಯಿಂದ, ಶ್ರೀಕಂಠದಿಂದ ಸಂಗೀತ ಹಾಡಿ ಸಭಿಕರನ್ನು ರಂಜಿಸಿದಳು. ದೈವಿಕವಾದ ಒಂದು ಪ್ರಭಾವಕ್ಕೆ ಅವಳು ವಶಳಾಗಿ ಅದರಲ್ಲಿ ತಾ**ದಾತ್ಮ್ಯ**ಹೊಂದಿ ಹಾಡುತ್ತಿದ್ದಂತೆ ತೋರಿತು. ಹಾಡಿದಳು ಎನ್ನುವುದಕ್ಕಿಂತಲೂ ಆ ದೈವಿಕ ಶಕ್ತಿ ಅವಳ ಮುಖಾಂತರ ಸಂಗೀತ ಸ್ರೋತಸ್ಸನ್ನು ಪ್ರವಹಿಸುವಂತೆ ಮಾಡಿತು ಎನ್ನುವುದೇ ಹೆಚ್ಚು ಸಮಂಜಸ. ಪ್ರತಿಹಾಡೂ ಶಿವನ ಪರ**ವಾ**ದುದೇ. ಸಿಂಹಾಸನರೂಢನಾಗಿದ್ದ ರಾಜನು ಸಂಗೀತ ಶ್ರವಣವನ್ನು ಇನ್ನೂ ಚೆನ್ನಾಗಿ ಮಾಡಲು ಅಲ್ಲಿಂದ ಕೆಳಗಿಳಿದು ಸಭಿಕರ ಜತೆಯಲ್ಲಿ ಮಂಡಿಸಿದನು. ಶಿವ**ಧ್ಯಾ**ನವಾಗುವಾಗ ರಾಜ ಪ್ರಜೆಯೆನ್ನುವ ಭೇದವಿದೆಯೆ? ಎಲ್ಲರೂ ಶಿವನಲ್ಲಿ ಐಕ್ಯವಾಗಿದ್ದರು. ಶಿವನೆಂದರೆ ಸಂಗೀತ, ಸಂಗೀತವೆಂದರೆ ಶಿವ. ಗಾನಪ್ರಿಯ ಶಂಕರನನ್ನು ಗೌರಾಂಗನೆಯು ಗಾನಾರಾಧನೆ ಮಾಡಿ ಮೆಚ್ಚಿಸಿದಳು, ಒಲಿಸಿದಳು. ಸಂಗೀತ ಮಂದಾನಿಲವು ಕೈಲಾಸಗಿರಿ ಶಿಖರವೇರಿ ಅಲ್ಲಿಯ ಕಂಪನ್ನೊಳಗೊಂಡು ಮರಳಿತು. ಸದಾಶಿವನಿಗೆ ಮಂಗಳ ಹಾಡಿ ಆ ಮಹಾಸಭೆಯನ್ನು ಮುಕ್ತಾಯಗೊಳಿಸುವಾಗ ರಾಜನ ಮತ್ತು ಸಭಾಸದರ ಸಂತೋಷ ಜಯಘೋಷದಿಂದ ಅರಮನೆಯು ಬಿರಿಯುವಂತಾಯಿತು.

ಲಿಂಗರಾಜನನು ಧನ್ಯನಾದನು. ಶ್ರೋತೃಗಳು ಆನಂದಭರಿತರಾದರು. ಅರಮನೆಯು ಪವಿತ್ರವಾಯಿತು.

"ಮಹಾಸಾಧ್ವಿಯೇ ! ಭಕ್ತ ಶಿರೋಮಣಿಯೇ! ಗಾನ ಕಲಾನಿಧಿಯೇ! ನಿನಗೇನು ಬಹುಮಾನವನ್ನು ಕೊಟ್ಟರೂ ಅದು ಅತ್ಯಲ್ಪ. ಪರಮೇಶ್ವರಿಗೆ ನಾವೇನು ತಾನೇ ಕೊಟ್ಟೇವು? ಅದು ಅವನಿಗೆ ಬೇಕಾಗಿದೆಯೇ? ಆದರೆ ನಮ್ಮ ಆತ್ಮ ತೃಪ್ತಿಗಾಗಿ ನಮಗೆ ಅತಿಪ್ರಿಯವಾದುದನ್ನು ಅವನಿಗೆ ಅರ್ಪಿಸುತ್ತೇವೆ. ಇಂತಹ ವಿನೀತ ಭಾವನೆಯಿಂದ ನಾನು ಪ್ರಶ್ನಿಸುತ್ತಿದ್ದೇನೆ. ನಿನಗೇನು ಬಹುಮಾನವನ್ನು ನಾನು ಕೊಡಲಿ ? ಹೇಳಬೇಕು."

ಗೌರಾಂಗನೆಯು ಎದ್ದು ನಿಂತು "ಮಹಾರಾಜರೇ! ನಿಮ್ಮ ಪ್ರಶ್ನೆಗೆ ನಾನು ಕೃತಜ್ಞಳಾಗಿದ್ದೇನೆ. ನಾನು ಮಹಾರಾಜರಿಂದ ಬಹುಮಾನ ಸ್ವೀಕರಿಸುವುದು ಭಾಗ್ಯವೆಂದು ತಿಳಿದುಕೊಂಡಿದ್ದೇನೆ. ಏಕೆಂದರೆ ತಾವು ಶಿವಸ್ವರೂಪರು. ನಾನು ಅಪೇಕ್ಷಿಸುವ ಉಡುಗೊರೆಯನ್ನು ಸಾರ್ವಜನಿಕ ಎದುರು ಅರುಹಲು ಇಷ್ಟಪಡುವುದಿಲ್ಲ. ತಾವೂ ನಾನೂ ಇರುವಾಗ ಅದನ್ನು ಬಿನ್ನವಿಸಿಕೊಳ್ಳುತ್ತೇನೆ" ಎಂದು ಹೇಳಿದಳು.

ಲಿಂಗರಾಜನ ಇಂಗಿತವರಿತು ಜನರೆಲ್ಲರೂ ರಾಜನಿಗೂ ಗೌರಾಂಗನೆಗೂ ಪ್ರಣಾಮವರ್ಪಿಸಿ ತೆರಳಿದರು. ಈಗ ಉಳಿದವರು ರಾಜ ಮತ್ತು ಗೌರಾಂಗನೆ. ಸೇವಕರೂ ಸಮೀದಲ್ಲಿರಲಿಲ್ಲ.

ಗೌರಾಂಗನೆಯು ಖಂಡಿತವಾಣಿಯಲ್ಲಿ ಲಿಂಗರಾಜನ ಸೈನಿಕರ ಅಕೃತ್ಯದಿಂದ ಅವಳಿಗೆ ಒದಗಿದ ವಿಪತ್ಪರರಂಪರೆಯನ್ನು ವಿವರಿಸಿದಳು.

"ಮಹಾರಾಜರೇ ! ನಿರಪರಾಧಿಯಾದ ನನಗೆ ಇಂತಹ ದುರವಸ್ಥೆ ತಪ್ಪು ಯಾರದು?"

"ಸಾಧ್ವಿಯೇ! ನೀನು ಹೇಳಿದುದು ಅರ್ಥವಾಯಿತು. ತಪ್ಪು ನನ್ನ ಸೈನಿಕರದು. ಆದರೆ ಅಂತ್ಯದಲ್ಲಿ ಅವರ ತಪ್ಪು ಒಪ್ಪುಗಳಿಗೆ ನಾನೇ ಹೊಣೆಗಾರನು. ನಿನಗೆ ನನ್ನಿಂದ ಮಹಾಪರಾಧವಾಗಿದೆಯೆಂದು ಒಪ್ಪುತ್ತೇನೆ. ಅದಕ್ಕೇನು ಪರಿಹಾರ ಬೇಕಾದರೂ ಕೊಡುತ್ತೇನೆ."

"ಏನು ಬೇಕಾದರೂ ಕೊಡುವಿರಾ ಪ್ರಭುಗಳೇ?"

"ಖಂಡಿತವಾಗಿಯೂ ಲಿಂಗರಾಜನ ಮಾತಿಗೆ ಎರಡಿಲ್ಲ."

"ಹಾಗಾದರೆ ಪಣ್ಯದ ಗುರುಬಸವಯ್ಯನವರಿಗೆ ಈಗಲೇ ವಿನಂತಿ ಕಳುಹಿಸಿ– ಅವರು ನನ್ನ ಮಗನೊಡನೆ ಚಂದ್ರವರ್ಮನ ಖಡ್ಗವನ್ನು ತೆಗೆದುಕೊಂಡು ಇಲ್ಲಿಗೆ ಬರಬೇಕೆಂದು. ನಾನಿಲ್ಲಿರುವ ವಿಷಯ ತಿಳಿಸಬೇಡಿ. ಅವರು ಬಂದ ಮೇಲೆ ನನಗೇನು ಪರಿಹಾರಬೇಕೆಂದು ಅರುಹುವೆನು ಮಹಾರಾಜರೇ."

ಮಾತು ನಡೆದಾಗ ಮಧ್ಯರಾತ್ರಿಯು ಮೀರಿದ್ದಿತು. ರಾಜನು ಕೂಡಲೇ ಚಾರರನ್ನು ಪಣ್ಯಾಶ್ರಮಕ್ಕೆ ಕಳುಹಿಸಿದನು. ಗೌರಾಂಗನೆಯೂ ರಾಜನೂ ಅಲ್ಲಿಯೇ ಕುಳಿತಿದ್ದರು. ಮಾತಿಲ್ಲ.

ಕೆಲವು ಗಂಟೆಗಳ ಅನಂತರ. ಅರುಣೋದಯ ಕಾಲ. ಗುರುಬಸವಯ್ಯನವರು ಬಂದಿರುವರು ಎಂದು ಸೇವಕರಿಂದ ಸುದ್ದಿ ಬಂದಿತು.

ರಾಜವಿನಂತಿಯ ಅರ್ಥ ಗುರುಬಸವಯ್ಯನಿಗೆ ಆಗಿರಲಿಲ್ಲ. ದೇವರ ಅವತಾರ ರಾಜನ ಆಜ್ಞೆಯನ್ನು ಮನ್ನಿಸಿ ಅವನು ಶಿವನೊಡಗೂಡಿ ಬಂದಿದ್ದನು. ಚಂದ್ರವರ್ಮನ ಖಡ್ಗ ಅವನ ಕೈಯಲ್ಲಿ ಕಪ್ಪಾಗಿ ತೋರುತ್ತಿದ್ದಿತು, ಅರ್ಧ ನಿದ್ರೆಯಲ್ಲಿದ್ದ ಶಿವನು ಅಜ್ಜನ ಹೆಗಲ ಮೇಲೆ ಒರಗಿ ನಿದ್ರಿಸುತ್ತಿದ್ದನು.

ರಾಜನ ಆಸ್ಥಾನ. ಗುರುಬಸವಯ್ಯನು ಗೌರಾಂಗನೆಯನ್ನು ಗುರುತಿಸಿದನು. ಆದರೆ ಮುಖದಲ್ಲಿ ಯಾವ ಪರಿವರ್ತ**ನೆಯೂ** ಕಾಣಲಿಲ್ಲ.

ಗೌರಾಂಗನೆಯು ಮೌನವನ್ನು ಭೇದಿಸಿದಳು : "ಮಹಾರಾಜರೇ! ಈ ಖಡ್ಗದ ಯೋಗ್ಯತೆ ತಮಗೆ ಗೊತ್ತಿದೆಯೇ?"

"ಚೆನ್ನಾಗಿ ಗೊತ್ತಿದೆ, ತಾಯೀ!"

"ಈಗ ನನಗೆ ಬೇಕಾಗಿರುವ ಪರಿಹಾರ ನಿಮ್ಮ ಜೀವ – ನಿಮ್ಮ ಜೀವ ನನಗೆ ಬೇಕು. ನೀವು ಈ ಖಡ್ಗದಿಂದ ನಿಮ್ಮನ್ನು ಸಂಹರಿಸಿಕೊಳ್ಳಬೇಕು."

"ಗೌರೀ! ಏನು ಮಾತು, ಏನು ಮಾತು?" ಎಂದನು ಗುರುಬಸವ.

"ನಾನು ಸ್ವಚ್ಛಂದ ಸ್ತ್ರೀ. ಅದು ನನ್ನ ಇಷ್ಟ" ಎಂದಳು ದೃಢವಾಗಿ.

"ಪರಮಸಂತೋಷದಿಂದ ನಿನ್ನ ಕೋರಿಕೆಯನ್ನು ನೆರವೇರಿಸುತ್ತೇನೆ. ಶಿವಾರ್ಪಣೆಯಾಗಲಿ ಈ ಜೀವ" ಎಂದು ರಾಜನು ಚಂದ್ರವರ್ಮನ ಖಡ್ಗವನ್ನು ಗುರುಬಸವಯ್ಯನ ಕೈಯಿಂದ ಸೆಳೆದುಕೊಂಡನು.

ನೀರವ. ರಾಜನು ಶಿವಧ್ಯಾನ ಮಾಡಿ ಖಡ್ಗವನ್ನು ಭಕ್ತಿಯಿಂದ ಪೂಜಿಸಿದನು. ದೃಷ್ಟಿ ಕೈಲಾಸಪರ್ವತದೆಡೆಗೆ.

ಖಡ್ಗವನ್ನು ಹಿರಿದು ಕಂಠವನ್ನು ಇರಿದುಕೊಳ್ಳಲು ಹಿಂದೆ ಬೀಸುವಾಗಲೇ ಆ ಪವಿತ್ರ ಖಡ್ಗವು ಮಹಾಪ್ರಕಾಶದಿಂದ ಪ್ರಜ್ವಲಿಸಿತು! ರಾಜಮಂದಿರವಿಡೀ ಶತಕೋಟಿ ಸೂರ್ಯಪ್ರಭೆಯಿಂದ ದೇದೀಪ್ಯಮಾನವಾಯಿತು.

ಗೌರಾಂಗನೆಯು ಆಗಲೇ – ರಾಜನ ಕುತ್ತಿಗೆಯ ಮೇಲೆ ಖಡ್ಗದ ಅಲಗು ಬೀಳುವ ಮೊದಲೇ – ಮುಂದೆ ಧಾವಿಸಿ ರಾಜನ ಕೈಗಳನ್ನು ಬಲವಾಗಿ ಹಿಡಿದು ಖಡ್ಗದ ಪ್ರಹಾರವನ್ನು ತಪ್ಪಿಸಿದಳು,

"ಮಹಾರಾಜರೇ ನಿಲ್ಲಿ ನಿಲ್ಲಿ" ಎಂದು ಅವಳು ಕೂಗಿದಳು.

"ಏನು ಸಾಧ್ವೀ! ನಾನು ಜೀವ ಅರ್ಪಿಸುವ ಕ್ರಮ ನಿನಗೆ ಸರಿದೋರಲಿಲ್ಲವೇ?"

ರಾಜಕರದಲ್ಲಿದ್ದ ಚಂದ್ರವರ್ಮನ ಕರವಾಲವು ಉಜ್ವಲ ಪ್ರಭೆಯಿಂದ ಜ್ವಲಿಸುತ್ತಲೇ ಇದ್ದಿತು.

"ರಾಜಾ! ಮಹಾನುಭಾವ!" ಎಂದು ಉದ್ಗಾರವೆಳೆದನು ಗುರುಬಸವಯ್ಯ.

"ನನಗೆ ಪರಿಹಾರ ದೊರೆಯಿತು ಸತ್ಯಸಂಧ ಮಹಾರಾಜರೇ" ಎಂದು ಪರಮ ಸಂತೋಷದಿಂದ ಗೌರಾಂಗನೆಯು ನುಡಿದಳು.

ತಂದೆ ತಾಯಿಯು ನೀವೆ ಶಿವಾ
ಬಂಧು ಬಳಗವು ನೀವೆ ಶಿವಾ

ಎಂದು ಅವಳು ಶಿವಗೀತೆಯನ್ನು ಅನನ್ಯ ಭಕ್ತಿಯಿಂದ ಹಾಡತೊಡಗಿದಳು. ಈ ಸುಮುಹೂರ್ತದಲ್ಲಿ ನಿದ್ರೆಯಿಂದೆದ್ದ ಪುಟ್ಟ ಶಿವನು ತಾಯಿಯನ್ನು ಗುರುತಿಸಿ ಅವಳ ತೊಡೆಯನ್ನೇರಿ ತಾಳಹಾಕಲು ತೊಡಗಿದನು. ಗುರುಬಸವಯ್ಯನ ನೇತ್ರದಿಂದ ಆನಂದಬಾಷ್ಪಗಳು ಉದುರಿದುವು.

ಲಿಂಗರಾಜನ ಉತ್ತಮಕರವನ್ನಲಂಕರಿಸಿದ್ದ  ಪವಿತ್ರಕರವಾಲವು ದಿವ್ಯಾತುಳ ಕಾಂತಿಯಿಂದ ಸಕಲರ ಮೇಲೆಯೂ ಜ್ಞಾನಪ್ರಭೆಯನ್ನು ಬೀರಿತು.

**ಪ್ರೇಮಚಂದರ ವಿಕ್ರಮಾದಿತ್ಯನ ಖಡ್ಗ ಕಥೆಯ ಭಾವಾಂತರಣ**

# ಆತ್ಮಯಜ್ಞ

**(ಹತ್ತನೆಯ ಕತೆ – ೧೯೫೧)**

ಸಿರಿಬಾಯಿ ವೀರರಾಜನಿಗೆ ಇಬ್ಬರು ಗಂಡು ಮಕ್ಕಳು: ಹಿರಿಯವನು ಬಸವರಾಜ, ಎರಡನೆಯವನು ಶಿವರಾಜ. ವೀರರಾಜನ ಆಳ್ವಿಕೆಯಲ್ಲಿ ಕೊಡಗು ಸಂಸ್ಥಾನವು ಬಹಳವಾಗಿ ವಿಸ್ತರಿಸಲ್ಪಟ್ಟಿತು. ಇಂತಹ ವಿಶಾಲ ರಾಷ್ಟ್ರದಲ್ಲಿ ಅವನು ಶಾಂತಿ ಸುವ್ಯವಸ್ಥೆಗಳನ್ನು ಸ್ಥಾಪಿಸಿದ್ದನು. ದಕ್ಷನಾದ ಪ್ರಭು ಈ ರಾಜ್ಯ ತನ್ನ ಅನಂತರವೂ ವಂಶಪಾರಂಪರ್ಯವಾಗಿ ಹೀಗೆಯೇ ಮುಂದುವರಿಯಬೇಕೆಂದು ಭಾವಿಸುವುದು ಸಹಜ. ವ್ಯಕ್ತಿಕೇಂದ್ರೀಕೃತವಾಗಿದ್ದ ಅಧಿಕಾರ, ದರ್ಪ ಹಾಗೆಯೇ ಸಾಗಬೇಕಾಗಿದ್ದರೆ ರಾಜಕುಮಾರರು ಸಮಾಧಿಕ ಯೋಗ್ಯತಾ ಸಂಪನ್ನರಾಗಿರಬೇಕು. ರಾಜಪುತ್ರತ್ವವೊಂದೇ ಸಿಂಹಾಸನವನ್ನು ದೊರಕಿಸಿ ಕೊಡುವುದಿಲ್ಲ – ಪ್ರಾಯಶಃ ದೊರಕಿಸಿಕೊಡುವುದು; ಆದರೆ ಅಲ್ಲಿಯೇ ಚಿರಕಾಲ ಮಂಡಿಸಿರುವ ಭದ್ರತೆಯನ್ನು ನೀಡುವುದಿಲ್ಲ. ಅಂತಹ ಯೋಗ್ಯತೆ ಸಿದ್ಧಿಸುವುದು ಬುದ್ಧಿಶಕ್ತಿ ಮತ್ತು ದೇಹಶಕ್ತಿಗಳ ಶ್ರೀಮಂತಿಕೆಯಿಂದ. ಇದನ್ನು ಚೆನ್ನಾಗಿ ಅರಿತಿದ್ದ ರಾಜನು ತನ್ನ ಕುಮಾರರಿಗೆ ಅತ್ಯುತ್ತಮವಾದ ಶರೀರ ಮತ್ತು ಬುದ್ಧಿ ಶಿಕ್ಷಣ ದೊರೆಯುವ ವ್ಯವಸ್ಥೆ ಮಾಡಿದನು. ರಾಜ ಪುತ್ರರು ಸಂಸ್ಕೃತ ಕನ್ನಡ ಸಾಹಿತ್ಯಗಳ ಸವಿಯುಂಡರು. ಕಾವ್ಯಗಳಲ್ಲಿ, ರಾಜ್ಯಭಾರ ಶಾಸ್ತ್ರದಲ್ಲಿ, ಪ್ರಜಾರಂಜನೆಯಲ್ಲಿ ಅವರಿಗೆ ಶಿಕ್ಷಣ ದೊರೆಯಿತು. ಪೂರಕ ಅಂಶವಾಗಿ ಅಂಗಸಾಧನೆಯಿಂದ, ವ್ಯಾಯಾಮಗಳಿಂದ ದೇಹಗಳನ್ನು ಪುಷ್ಟವನ್ನಾಗಿರಿಸಿದರು. ದೃಢಕಾಯರಾಗಿ ಆರೋಗ್ಯಸಂಪನ್ನತೆಯಿಂದ ಮೆರೆಯುವ ರಾಜಕುಮಾರರು ಅಶ್ವಿನಿದೇವತೆಗಳಂತೆ ಶೋಭಿಸಿದರು. ಯುದ್ಧ ಕಲೆ, ಚಾಣಕ್ಯತಂತ್ರ, ಶಸ್ತ್ರಾಸ್ತ್ರ ಪ್ರಯೋಗ ಮುಂತಾದವುಗಳಲ್ಲಿ ಅವರು ಪರಿಣಿತರಾದರು. ಹೀಗೆ ದಿನದಿಂದ ದಿನಕ್ಕೆ ವರ್ಧಿಸುತ್ತಿರುವ ವಂಶದ ಕುಡಿಗಳನ್ನು ನೋಡಿ ನೋಡಿ ವೀರರಾಜನಿಗೆ ಸಂತೋಷ ಉಕ್ಕುತ್ತಿತ್ತು. ಅವರ ಸಾಹಸ ಕಾರ್ಯಗಳನ್ನು ಸಾಹಿತ್ಯಾಭ್ಯಾಸವನ್ನು ಕೇಳಿ ಕೇಳಿ ರಾಜನು ಹರ್ಷ ಹೊಂದುತ್ತಿದ್ದನು. ಮಡಿಕೇರಿಯ ನಿವಾಸಿಗಳಿಗೆ ಈ ತರುಣೇಭದ್ವಯರನ್ನು ನಿತ್ಯವೂ ಕಾಣುವ ಭಾಗ್ಯ. ರಾಜನ ಸುಕೃತದಿಂದ ನಾಡಿನ ಸೌಭಾಗ್ಯದಿಂದ ಇಂತಹ ಯೋಗ್ಯ ರಾಜಕುಮಾರರು ಜನಿಸಿ ಅಭ್ಯುದಯ ಹೊಂದುತ್ತಿದ್ದಾರೆ ಎಂದು ಅವರು ಹೇಳಿಕೊಳ್ಳುತ್ತಿದ್ದರು.

ಹಿರಿಯವನಾದ ಬಸವರಾಜನು ಪ್ರತಿಯೊಂದು ವಿಷಯದಲ್ಲಿಯೂ ತಮ್ಮನಿಗಿಂತ ಒಂದು ಹೆಜ್ಜೆ ಮುಂದೆ. ಅವನು ಇಟ್ಟ ಗುರಿ ಎಂದೆಂದಿಗೂ ತಪ್ಪದು. ಖಡ್ಗದಲ್ಲಿ ಅವನ ಹಸ್ತಲಾಘವದ ಮುಂದೆ ಬೇರೆಯವರದು ಬರಲಾರದು ಎಂದು ರಾಜಕುಮಾರರ ಶಸ್ತ್ರಾಸ್ತ್ರಾಚಾರ್ಯರೇ ಮುಕ್ತಕಂಠದಿಂದ ಹೊಗಳುತ್ತಿದ್ದರು. ಅವರು ಸಾಹಿತ್ಯಗುರುಗಳು ಬಸವರಾಜನ ಅಪೂರ್ವ ಮೇಧಾಶಕ್ತಿಯನ್ನು, ಕಾವ್ಯಗಳಲ್ಲಿಯ ಧ್ವನಿ ರಸಗಳ ಸೂಕ್ಷ್ಮತೆಯನ್ನು ಶೀಘ್ರವಾಗಿ ಗ್ರಹಿಸಿ ವಿವರಿಸುವ ಶಕ್ತಿಯನ್ನು ಅರಿತು ಅವನಿಗೆ ದಿನನಿತ್ಯ ಪ್ರೋತ್ಸಾಹವೀಯುತಿದ್ದರು. ಹಾಗೆಂದು ಶಿವರಾಜನು ಕಡಿಮೆಯೆಂದು ಅರ್ಥವಲ್ಲ. ಅಣ್ಣನಿಗೆ ಸಮಾನವಾಗಿ ಅವನೂ ಇದ್ದನು. ಆದರೂ ತಿಳಿದವರು, ಆಚಾರ್ಯದ್ವಯರೇ ಅನ್ನುತ್ತಿದ್ದಂತೆ, ಬಸವರಾಜನೇ ಒಂದು ತೂಕ ಮೇಲು. ವೀರರಾಜನಿಗೆ ಈ ಮಕ್ಕಳ ಅಭ್ಯುದಯವನ್ನು ಕಂಡು ಕೇಳಿ ಅಮಿತಾನಂದ. ನಾಡ ಕಣ್ಮಣಿಯಾಗಿದ್ದ ಮತ್ತು ಮುಂದಿನ ರಾಜನಾಗುವ ಬಸವರಾಜನ ಮೇಲೆ ರಾಜನದೂ ರಾಜ ಮಡದಿಯದೂ ವಾತ್ಸಲ್ಯ ಅಪಾರ.

ಬಸವರಾಜನ ಸ್ವಭಾವ ಬಲು ಕೋಮಲ. ಅವನು ಯುದ್ಧ ಕಲೆಯನ್ನು, ಶಸ್ತ್ರಪ್ರಯೋಗವನ್ನು ಅಭ್ಯಸಿಸುವಾಗ ಪ್ರತಿದಿನವೂ ಭಗವಂತನಲ್ಲಿ ಪ್ರಾರ್ಥಿಸುತ್ತಿದ್ದನು: "ನಾನೆಂದೆಂದು ಜೀವಹತ್ಯೆಗೆ ಈ ವಿದ್ಯೆಯನ್ನು ಪ್ರಯೋಗಮಾಡುವಂತೆ ಆಗದಿರಲಿ" ಎಂದು. ವಿದ್ಯೆಯನ್ನು ವಿದ್ಯೆಗಾಗಿ ಅವನು ಅಭ್ಯಸಿಸುತ್ತಿದ್ದನೇ ಹೊರತು ಅದರಿಂದ ಬೇರೆ ಏನಾದರೂ ಉಪಯೋಗವಾದೀತೆನ್ನುವ ಆಶಯದಿಂದಲ್ಲ. ಹಾಗೆ ಉಪಯೋಗ ದೊರೆತರೆ, ಅದು ಆಕಸ್ಮಿಕವಾಗಿರಬೇಕು ಎಂದು ಅವನು ತಿಳಿದಿದ್ದನು. ಕಾವ್ಯನೀತಿಶಾಸ್ತ್ರಗಳನ್ನು ಮನನ ಮಾಡಿ ಚಿಂತಿಸಿ ಅಧಿಕಾನುಭವ ಪಡೆಯುವುದರಲ್ಲಿ ಅವನಿಗೆ ಅಮಿತಾಸಕ್ತಿ. ಗುರುಹಿರಿಯರಲ್ಲಿಯೂ ದೇವರಲ್ಲಿಯೂ ಅಮಿತ ಶ್ರದ್ಧೆ ಮತ್ತು ಅವಿಚಲ ಭಕ್ತಿಪೂರಿತನಾದ ಬಸವರಾಜನು ಸೌಮ್ಯಮೂರ್ತಿಯಾಗಿದ್ದನು.

ಶಿವರಾಜನು ಸ್ವಲ್ಪ ಚಪಲಚಿತ್ತನೆಂದು ಹೇಳಬೇಕು. ಅವನು ದೇವರ ಕುರಿತಾಗಲೀ ಗುರುಹಿರಿಯರಲ್ಲಿ ಭಕ್ತಿ ಕುರಿತಾಗಲೀ ಎಂದೂ ಆಲೋಚಿಸಿದವನಲ್ಲ. ಕಲಿಯುತ್ತಿದ್ದ ವಿದ್ಯೆಯಲ್ಲಿ ಅವನಿಗೆ ಅಪಾರ ಆಸಕ್ತಿಯಿದ್ದಿತು. ಕಾವ್ಯಗಳಿಗಿಂತಲೂ ಅವನ ಒಲ್ಮೆ ದೈಹಿಕ ಸಾಧನೆಗಳ ಕಡೆಗೆ ಹೆಚ್ಚಾಗಿದ್ದಿತು, ವೈಭವ ದರ್ಪ ಮೆರೆತ ಇವನ್ನು ಅವನು ಬಲುವಾಗಿ ಮೆಚ್ಚಿದ್ದನು. ಅಣ್ಣತಮ್ಮಂದಿರು ಒಟ್ಟಾಗಿ ಹೋಗುತ್ತಿದ್ದಾಗ ಪ್ರಜೆಗಳು ವಿನಯದಿಂದ ಪ್ರಣಾಮವರ್ಪಿಸುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಅಣ್ಣನು ಅವರನ್ನು ಗಮನಿಸುತ್ತಿದ್ದುದು ವಿರಳ. ಆದರೆ ಶಿವರಾಜನು ಆಗೆಲ್ಲ ಸುತ್ತಲೂ ನಾಲ್ಕಾರು ಕಡೆಗೆ ಕಣ್ಣರಳಿಸಿ ನೋಡಿ ರಾಜಠೀವಿಯಿಂದ ವಂದನೆಗಳನ್ನು ಸ್ವೀಕರಿಸುತ್ತಿದ್ದನು. ವ್ಯಾಯಾಮ ಶಸ್ತ್ರಸಾಧನೆ ಇವುಗಳಲ್ಲಿ ಅಣ್ಣನಿಗಿಂತ ಒಂದಿಷ್ಟು ಹೆಚ್ಚಾಗಿಯೇ ತಮ್ಮನು ನಿರತನಾಗಿರುತ್ತಿದ್ದನು. ಆದರೂ ಬಸವರಾಜನಿಗೆ ದೊರೆಯುತ್ತಿದ್ದ ಪ್ರಶಂಸೆ ಇವನಿಗೆ ದೊರೆಯುತ್ತಿರಲಿಲ್ಲ. ಅಂತರ್ಮುಖಿಯಾಗಿರುತ್ತಿದ್ದ ಅಣ್ಣನಿಗೆ ಪ್ರಶಂಸೆಯಿಂದ ಯಾವ ಪರಿಣಾಮವೂ ಆಗುತ್ತಿರಲಿಲ್ಲ. ಬಹಿರ್ಮುಖಿಯಾಗಿ ಪ್ರಶಂಸಿಸಬೇಕು ಹೆಮ್ಮೆಪಡಬೇಕು ಎಂದಿರುತ್ತಿದ್ದ ಶಿವರಾಜನಿಗೆ ಅದು ದೊರೆಯುತ್ತಿರಲಿಲ್ಲ. ಎಳೆಪ್ರಾಯದ ಆ ರಾಜ ಕುಮಾರನಲ್ಲಿ ಇದರಿಂದ ಇನ್ನಷ್ಟು ಉತ್ಸಾಹ ಕೆದರುತ್ತಿತ್ತು. ಸ್ಪರ್ಧಾಮನೋಭಾವ ಕೆರಳುತ್ತಲೂ ಇತ್ತು.

ಹೀಗೆ ರಾಜಕುಮಾರರು, ಹಿರಿಯವನು ಭಾವಜೀವಿಯಾಗಿ, ಕಿರಿಯವನು ಬುದ್ಧಿಜೀವಿಯಾಗಿ, ವರ್ಧಿಸುತ್ತಿದ್ದರು.

ಆಗ ಬಸವರಾಜನಿಗೆ ಹದಿನಾರು ವರ್ಷ, ಶಿವರಾಜನಿಗೆ ಹದಿನಾಲ್ಕು ವರ್ಷ ಪ್ರಾಯ ನಡೆಯುತ್ತಿದ್ದವು. ಒಂದು ದಿನ ಸಾಯಂಕಾಲದ ಹೊತ್ತಿಗೆ ಮದೆನಾಡಿನ ರೈತರಿಂದ ವೀರರಾಜನಿಗೆ ಒಂದು ಬಿನ್ನಹ ಬಂದಿತು – ಒಂದು ಭಯಂಕರಗಾತ್ರದ

ಹೆಬ್ಬುಲಿಯು ಅನೇಕ ತಿಂಗಳುಗಳಿಂದ ಅವರ ಹಳ್ಳಿಯನ್ನು ಹನಮಾಡುತ್ತಿದೆ; ಹಲವಾರು ಮಂದಿ ನುರಿತ ಬೇಟೆಗಾರರು ಹುಲಿಯ ಪ್ರತಾಪದ ಎದುರು ತಮ್ಮ ಆಟ ಸಾಗದೇ ಹಿಂದೆ ಓಡಿದ್ದಾರೆ, ಹುಲಿಯು ನಾಶಮಾಡಿರುವ ಎಮ್ಮೆ ದನಗಳು ಅಸಂಖ್ಯಾತ. ಮಹಾರಾಜರು ಹೇಗಾದರೂ ಹುಲಿಯನ್ನು ಸಂಹರಿಸಿ ಗ್ರಾಮವನ್ನು ರಕ್ಷಿಸಬೇಕು – ಇಷ್ಟು ಆ ಬಿನ್ನಹದ ಸಾರ, ದೂರು ಬಂದ ವೇಳೆಯಲ್ಲಿ ಶಿವರಾಜನು ತಂದೆಯ ಸಮೀಪದಲ್ಲಿದ್ದನು. ಕೂಡಲೇ ತಾನು ಹೋಗಿ ಆ ಕ್ರೂರ ವ್ಯಾಘ್ರದ ವಿಚಾರಣೆ ಮಾಡುವುದಾಗಿ ಅತ್ಯುತ್ಸಾಹದಿಂದ ಅವನು ಹೇಳಿದನು.

ರಾಜನು ನಕ್ಕು "ಅದೇನು ಹುಡುಗಾಟಿಕೆಯೇ? ನೀನಿನ್ನೂ ಮಗು" ಎಂದನು.

ಶಿವರಾಜನ ಅಭಿಮಾನ ಭಂಗವಾಯಿತು.

"ನಾನು ಪ್ರಾಯದಲ್ಲಿ ಸಣ್ಣವನಾದರೂ ನನ್ನ ಪ್ರತಾಪ ನೋಡಿ ಪಿತಾಜೀ" ಎಂದನು.

"ನಿನ್ನನ್ನು ಕಳುಹಿಸಿಕೊಡಲು ನಾನು ಸಿದ್ಧನಿಲ್ಲವಲ್ಲಪ್ಪ" ಎಂದು ನಸು ನಗುತ್ತ ರಾಜನು ಮಗನ ತಲೆ ಸವರಿದನು.

ಆದರೆ ಶಿವರಾಜನು ಸುಮ್ಮನಿರಲಿಲ್ಲ. ರಾಜನು ಆ ಕಡೆ ಹೋದೊಡನೆಯೇ ಇವನು ಆಯುಧಸಮೇತನಾಗಿ ಯಾರಿಗೂ ತಿಳಿಸದೆ ಕುದುರೆಯೇರಿ ಮದೆನಾಡಿಗೆ ಹೋಗಿಯೇ ಬಿಟ್ಟನು. ಕಾರ್ಗಾಲದ ಮೋಡ ನೀರು ತುಂಬಿ ಭಾರವಾಗಿ ಮಳೆಗರೆಯಲು ಗಳಿಗೆ ಕಾಯುವಂತೆ ಅವನ ಪೌರುಷವಿದ್ದಿತು. ದಿನನಿತ್ಯ ಗುರಿಹೊಡೆದು ದಣಿದಿದ್ದ ಅವನಿಗೆ ವೈವಿಧ್ಯ ಅಗತ್ಯವಾಗಿತ್ತು. ಈ ಸಾಹಸಮಯ ಸನ್ನಿವೇಶ ಹಸಿದವನಿಗೆ ಮೃಷ್ಟಾನ್ನ ದೊರಕಿದಂತಾಯಿತು. ಪ್ರಶಂಸೆಗಾಗಿ ಹಾತೊರೆಯುತ್ತಿದ್ದ ಅವನು ಕೂಡಲೇ ಮದೆನಾಡಿಗೆ ಧಾವಿಸಿದುದು ಆಶ್ಚರ್ಯವಲ್ಲ. ತಾನು ಹೋಗುವ ಮೊದಲೇ ಬೇರೆಯಾರಾದರೂ ಆ ಹೆಬ್ಬುಲಿಯನ್ನು ಕೊಂದು ತನ್ನ ಯಶಃಶ್ರೀಯನ್ನು ಅಪಹರಿಸಬಾರದಲ್ಲ ಎಂದು ದ್ವಿಗುಣಿತವೇಗದಿಂದ ದೌಡಾಯಿಸಿದನು.

ಶಿವರಾಜನಿಗೆ ಉತ್ಸಾಹವೆಷ್ಟಿದ್ದರೂ ಶಸ್ತ್ರಕಲೆಯಲ್ಲಿ ನೈಪುಣ್ಯವೆಷ್ಟಿದ್ದರೂ ಬೇಟೆಯಲ್ಲಿ ಅನುಭವ ಸಾಕಷ್ಟಿರಲಿಲ್ಲ. ಮರದ ಮೇಲಿನ ಮಾವಿನ ಹಣ್ಣಲ್ಲ ಹುಲಿಯ ಕಣ್ಣು, ನಿಶ್ಚಲವಾಗಿ ನಿಂತ ಮರದ ಕೊರಡಲ್ಲ ಹುಲಿಯ ಕೊರಳು. ಹುಲಿಯು ಹಾಗೆ ನೇರವಾಗಿ ಎದುರು ಸಿಕ್ಕುವುದೂ ಇಲ್ಲ; ಸಿಕ್ಕಿದರೂ ಅದನ್ನು ಕೊಲ್ಲುವುದು ಸುಲಭವೂ ಅಲ್ಲ ಅಪಾಯರಹಿತವೂ ಅಲ್ಲ. ಶಿವರಾಜನು ಮದೆನಾಡಿಗೆ ಹೋಗಿ ಒಂದು ಕುಟುಂಬದವರಲ್ಲಿ ವಿಚಾರಿಸಿದನು. ರಾಜ ಪುತ್ರನು ಆಗಮಿಸಿದನು ಎಂದು ಅವರು ಸಂಭ್ರಮದಿಂದ ಏನು ಹೇಳುವುದೆಂದು ತಿಳಿಯದೇ ಇದ್ದಾಗ ಅವನು ತನ್ನ ವಿಷಯವಾಗಿ ಅವರು ಏನೊಂದೂ ಮಾತನಾಡಕೂಡದೆಂದು ಕಟ್ಟಪ್ಪಣೆ ವಿಧಿಸಿದನು. ಹುಲಿಯು ಹಿಂದಿನ ರಾತ್ರಿ ಹೊಡೆದು ಕೊಂದುಹಾಕಿದ ಒಂದು ಕೋಣ ಅಲ್ಲಿಯೇ ಕಾಡಿನ ಮಧ್ಯೆ ಇದೆಯೆಂದೂ ಆ ರಾತ್ರಿ ಅದು ಅಲ್ಲಿಗೆ ಪುನಃ ಬರುವ ಸಂಭವವಿದೆಯೆಂದೂ ಶಿವರಾಜನು ತಿಳಿದನು.

ಬೆಳದಿಂಗಳ ರಾತ್ರಿ. ರಾಜಕುಮಾರನು ಇಬ್ಬರು ರೈತರನ್ನು ಜತೆಗೆ ಕರೆದುಕೊಂಡು ಹೋಗಿ ಪಹರೆ ಕುಳಿತನು. ಮದೆನಾಡಿನ ರುದ್ರವನಾಂತರದಲ್ಲಿ ಜೀರುಂಡೆಗಳ ಜೀರ್ ಶಬ್ದವೂ ಅಳಿಯಿತು. ಕತ್ತಲೆಯ ಮೊತ್ತವನ್ನು ಭೇದಿಸಲಾರದೆ ಕಳೆಗೆಟ್ಟು ಧೃತಿಗೆಟ್ಟು ಚಂದ್ರನು ಇಳಿಯಲು ತೊಡಗಿದನು. ಹುಲಿಯನ್ನು ಕಾದು ಕಾದು ಬೇಸತ್ತ ಮೂವರ ನಿಟ್ಟುಸಿರುಗಳು ತೀವ್ರವಾದುವು. ಆದರೂ ನಿರ್ವಾಹವಿಲ್ಲ. ಕೋಣನ ಶವ ರಾತ್ರಿಯ ಕಪ್ಪಿನಲ್ಲಿ ವಿಕರಾಳವಾಗಿ ವಿಕಾರಾಕಾರದಿಂದ ಕೆಡೆದುಕೊಂಡಿತ್ತು. ಮತ್ತೂ ಒಂದೆರಡು ನಿಟ್ಟುಸಿರು. ಆ ನಿಟ್ಟುಸಿರಿನ ಮೊತ್ತ ಮೈದಳೆದು ನಿರೀಕ್ಷೆಯೇ ರೂಪುವಡೆದು ಮುಂದೆ ಬಂದಿತು – ಮರುನಿಮಿಷ ಶಬ್ದರಹಿತವಾಗಿ ಬಂದಿತು ಕ್ರೂರವ್ಯಾಘ್ರ. ಆ ಕಡೆ ಈ ಕಡೆ ನೋಡಿ ಕಿವಿನಿಮಿರಿಸಿ ಬಿಸುಸುಯ್ದು ಕೋಣದ ಮಾಂಸದ ಮೇಲೆ ಬಾಯಿ ಹಾಕಿತು. ಮಾಂಸದ ತುಣುಕುಗಳನ್ನು ಕಚ್ಚಿ ಎಳೆಯುವುದರಲ್ಲಿ ಅದು ತನ್ಮಯತೆ ಹೊಂದಿದಾಕ್ಷಣ ರಾಜಕುಮಾರನು ಖಡ್ಗ ಝಳಪಿಸಿ ಹುಲಿಯ ಮೇಲೆ ದುಮ್ಮಿಕ್ಕಿದ್ದನು. ಅನುಭವಶೂನ್ಯ ಉತ್ಸಾಹ. ಮಾರ್ಗ ತಪ್ಪಿ ಹೋಯಿತು. ಖಡ್ಗದಿಂದ ಹುಲಿಯನ್ನು ಇರಿದನು. ಹುಲಿಯು ಭಯಂಕರವಾಗಿ ಕಾಂತಾರವು ನಡುಗುವಂತೆ ಗರ್ಜಿಸಿ ತನ್ನ ಶತ್ರುವನ್ನು ಕೈಯ್ಯಿಂದ ಹೊಡೆದು ನೆಲಕ್ಕಪ್ಪಳಿಸಿ ಓಡಿಹೋಯಿತು. ಶಿವರಾಜನು ಸಹಚರರು ಮುಂದೆ ಹಾರಿ ಹುಲಿಯನ್ನು ಇರಿಯದಿರುತ್ತಿದ್ದರೆ ಅದು ರಾಜಕುಮಾರನನ್ನು ಸಂಹರಿಸಿಯೇ ಬಿಡುತ್ತಿತ್ತು. ರಾಜಪುತ್ರನು ನೋವಿನಿಂದ ಮೂರ್ಛೆ ತಪ್ಪಿ ನೆಲದ ಮೇಲೆ ಕೆಡೆದನು. ಸೇವಕರು ಅವನನ್ನು ಮೃದುವಾಗಿ ಎತ್ತಿಕೊಂಡು ಅವರ ಮನೆಯೆಡೆಗೆ ಸಾಗಿದರು.

ಓಡಿಹೋದ ಹುಲಿಗೆ ಮುಂದಿನ ಮರದ ಮರೆಯಲ್ಲಿ ಯಮಧರ್ಮರಾಯನು ಕಾದು ಕುಳಿತಿದ್ದನು – ಇಲ್ಲ, ಅವನಾಗ ತಾನೇ ಬಸವರಾಜನ ರೂಪದಲ್ಲಿ ಅಲ್ಲಿಗೆ ಬಂದಿದ್ದನು. ಶಿವರಾಜನು ಮದೆನಾಡಿಗೆ ಧಾವಿಸಿದುದು ರಾಜನಿಗೆ ಸ್ವಲ್ಪ ಹೊತ್ತಿನಲ್ಲಿಯೇ ತಿಳಿಯಿತು. ಮಗನ ಈ ಅಚಾತುರ್ಯಕ್ಕೆ ಅವನು ನೊಂದು ಹೆದರಿ ಕೂಡಲೇ ಅವನ ರಕ್ಷಣೆಗಾಗಿ ಕೆಲವು ಸೈನಿಕರನ್ನು ಕಳುಹಿಸಿದನು. ಪ್ರಸಂಗದ ಗಂಭೀರತೆ ಅಪಾಯಗಳನ್ನರಿತು ಬಸವರಾಜನು ತಾನೂ ಹೋಗಲು ಮುಂದಾದನು. ರಾಜನು ಇದನ್ನು ಲಕ್ಷಿಸಲಿಲ್ಲ. ಬಸವರಾಜನ ಖಡ್ಗದ ಹೊಡೆತದಿಂದ, ತಮ್ಮನ ಹೊಡೆತದಿಂದ ಮುಗಿಯದ ಕಾರ್ಯ, ಮುಗಿದುಹೋಯಿತು. ಹುಲಿಯು ಸತ್ತುಹೋಯಿತು.

ಶಿವರಾಜನನ್ನು ಮಡಿಕೇರಿಗೆ ಸಾಗಿಸಿಕೊಂಡು ಹೋಗಿ ಉಪಚರಿಸಿದರು. ಅವನಿಗೆ ವಿಶೇಷಾಪಾಯವೇನೂ ಆಗಿರಲಿಲ್ಲ. ಅವನು ಶೀಘ್ರವಾಗಿ ಗುಣ ಹೊಂದಿದನು. ಆದರೆ ತನ್ನಿಂದ ಆಗದ ಕಾರ್ಯ ತನ್ನ ಅಣ್ಣನಿಂದ ನೆರವೇರಿತು ಎನ್ನುವ ಒಂದು ಅಪಮಾನ ಅವನ ಎಳೆಯ ಮಿದುಳನ್ನು ಕದಡಿದ್ದಿತು. ಹುಡುಗತನ ಹೋಗಿ ತಾರುಣ್ಯ ಉಪಯಿಸುವ ಕಾಲ. ಪ್ರಶಂಸೆ ಪ್ರಖ್ಯಾತಿಗಳಿಗಾಗಿ ಹಾತೊರೆಯುವ ಕಾಲ. ಸರ್ವರ ದೃಷ್ಟಿಯಲ್ಲಿ ಪ್ರತಾಪಶಾಲಿ ವೈಭವಶಾಲಿ ಎಂದು ಮೆರೆಯಬೇಕೆಂದು ಆಸೆಯಿರುವ ಕಾಲ. ಆ ಕಾಲದಲ್ಲಿ ಹುಲಿಯನ್ನು ಸಂಹರಿಸಲು ಹೋಗಿ ಅದರ ಪೆಟ್ಟಿಗೆ ಶಿವರಾಜನು ಉರುಳಿದನು. ಪರಾಜಿತನಾದನು; ಅಲ್ಲಿಗೇ ಮುಗಿಯಲಿಲ್ಲ. ಬಸವರಾಜನು ಹುಲಿಯನ್ನು ಕೊಂದಿದ್ದನು. ಈ ಘಟನೆಯಿಂದ ಹುಲಿಯಿಂದಾಗದ ಗಾಯ ಅಭಿಮಾನಿ ಶಿವರಾಜನಿಗಾಗಿದ್ದಿತು, ವ್ಯಾಘ್ರನಖಗಳ ಗಾಯವು ಗುಣವಾದಂತೆ ಅವನ ಮನಸ್ಸಿನ ಮೇಲೆ ಮೂಡಿದ ಗಾಯ ಬಲವಾಯಿತು.

ರಾಜನೂ ಗುರುಗಳೂ ಬಸವರಾಜನ ಪ್ರಶಂಸೆ ಮಾಡುತ್ತಿದ್ದಾಗ ಶಿವರಾಜನ ಮನಸ್ಸಿನ ಗಾಯ ಬಿರಿಯುವಂತಾಗುತ್ತಿತ್ತು. ಅವನಿಗೆ ಅವುಗಳ ನೋವು ಸಹಿಸಲಶಕ್ಯವಾಗುತ್ತಿತ್ತು. ರಾಜಪುತ್ರನಿಗೆ ಸಲ್ಲಬೇಕಾಗಿದ್ದ ಮನ್ನಣೆ ಮರ್ಯಾದೆಗಳು ಅವನಿಗೆ ಮೊದಲಿನಂತೆಯೇ ದೊರೆಯುತ್ತಿದ್ದುವು. ಆದರೆ ಮನಸ್ಸಿನ ಅಂತರಾಳದಲ್ಲಿ ಅವನಿಗೇನೋ ಒಂದು ಅತೃಪ್ತಿ ಅಸಮಾಧಾನ. ಇದೇ ಸಮಯದಲ್ಲಿ ಶಿವರಾಜನಿಗೆ ವೀರರಾಜನ ಅಧಿಕಾರಿಯೊಬ್ಬನ ಮಗ ದೇವಯ್ಯನಲ್ಲಿ ಮೈತ್ರಿಯು ಬೆಳೆಯುತ್ತಿತ್ತು. ದೇವಯ್ಯನು ಸೈನ್ಯದಲ್ಲಿ ಅಧಿಕಾರಿಯಾಗಿದ್ದನು. ಶಿವರಾಜನ ಎರಡರಷ್ಟು ಪ್ರಾಯ ಅವನಿಗಾಗಿದ್ದರೂ ಇವರಿಬ್ಬರಲ್ಲಿ ಬಳಕೆ ಸ್ನೇಹ ಹೆಚ್ಚು ಹೆಚ್ಚಾಗಿ ಬೆಳೆಯುತ್ತಿದ್ದುವು. ದೇವಯ್ಯನ ಸಂಗದಲ್ಲಿ ಕಿರಿಯ ರಾಜಕುಮಾರನಿಗೆ ಒಂದು ರೀತಿಯ ಸಮಾಧಾನ ದೊರೆಯುತ್ತಿದ್ದಿತು. ಇವರಿಬ್ಬರೂ ಕೂಡಿ ದೇಶಸಂಚಾರ ಮಾಡುತ್ತಿದ್ದರು. ಸೈನ್ಯದ ಕೆಲಸದಲ್ಲಿ ಬಿಡುವಿದ್ದಾಗ ದೇವಯ್ಯನೂ ಶಿವರಾಜನೂ ಬೇಟೆಗೆ ಅಥವಾ ವಾಯು ವಿಹಾರಾರ್ಥವಾಗಿ ಅಥವಾ ತಮ್ಮ ಶಸ್ತ್ರಲಾಘವವನ್ನು ಪರೀಕ್ಷಿಸಲೆಂದು ಹೋಗುತ್ತಿದ್ದರು.

ದೇವಯ್ಯನ ಕುಟಿಲ ಮತ್ತು ತೀಕ್ಷ್ಣಮತಿ, ಎಳೆಹರೆಯದ ಹದಿನಾರರ ಗಡಿಯನ್ನು ದಾಟುತ್ತಿದ್ದ ರಾಜಪುತ್ರನ ಮೇಲೆ ಸಹಜವಾಗಿಯೇ ಪ್ರಭಾವ ಬೀರುತ್ತಿತ್ತು. ಶಿವರಾಜನ ಮನಸ್ಸಿನ ಗಾಯಕ್ಕೆ ದೇವಯ್ಯನ ಮಾತಿನ ಲೇಪ ಸುಖಕರವಾದ ಪರಿಣಾಮಬೀರುತ್ತಿತ್ತು. ಇನ್ನೊಂದು ಸಂದರ್ಭದಲ್ಲಿ ಮಹಾರಾಜನ ದೃಷ್ಟಿಯಲ್ಲಿ ಬಸವರಾಜನು ಮನ್ನಣೆ ಪಡೆದನು. ಮಂತ್ರಿ ಶಿವರುದ್ರಪ್ಪನೂ ಬಸವರಾಜನನ್ನು ಎತ್ತಿ ಹೊಗಳಿ ಮಾತಾಡಿದನು. ಹಾಗೆಂದು ಅವರು ಶಿವರಾಜನನ್ನು ತೆಗಳಲಿಲ್ಲ; ತಿರಸ್ಕರಿಸಲಿಲ್ಲ. ಆ ಸಂದರ್ಭದಲ್ಲಿ ಶಿವರಾಜನ ಸುದ್ದಿ ಬರಲಿಲ್ಲ, ಅಷ್ಟೆ. ಆದರೆ ಶಿವರಾಜನ ಕಹಿಮನಸ್ಸು ಆ ಹೊಗಳಿಕೆಗೆ ಅಪಾರ್ಥ ಕಲ್ಪಿಸಿತು. ಗಾಸಿಗೊಂಡ, ದುಗುಡದಿಂದ ಭಾರವಾದ ಮನಸ್ಸಿಗೆ ಹಿತವಾಗುವಂತೆ ವಂಚನೆಯ ಮಾತುಗಳನ್ನು ನುಡಿದು ಶಾಶ್ವತವಾದ ಅಹಿತವನ್ನು ಸಾಧಿಸುವುದು ಸುಲಭ. ನಾಲ್ಕು ಸಮಾಧಾನ, ಸಹಾನುಭೂತಿಯುಕ್ತವಾದ ಸಾಂತ್ವನನುಡಿಗಳಿಂದ ದುಃಖದ ಆವೇಗ ಕಡಿಮೆಯಗುವುದು. ಹಾಗಲ್ಲದೆ ಭಾರವನ್ನುವರ್ಧಿಸುವಂತೆ ಮಾಡುವ ಉತ್ತೇಜನದ ಮಾತುಗಳಿಂದ ತಾತ್ಕಾಲಿವಾಗಿ ದುಗುಡವು ಉಪಶಮನವಾದಂತೆ ತೋರಿದರೂ ಅದು ವಾಸ್ತವವಲ್ಲ. ಆದರೆ ಮೊದಲನೆಯ ಮಾತಿಗಿಂತ ಎರಡನೆಯ ವಾದವೇ ಸರ್ವಸಾಧಾರಣವಾಗಿ ಹಿತಕರ ಎಂದೆನ್ನಿಸುವುದು. ವ್ಯಾಧಿಗ್ರಸ್ತನಿಗೆ ಔಷಧಿಗಿಂತಲೂ ಬಾಯಿಬಯಸಿದ ತಿಂಡಿಯೇ ಉತ್ತಮವೆನಿಸುವುದು. ಇಂತಹ ಸಂದರ್ಭವನ್ನೇ ಕಾಯುತ್ತಿದ್ದನು ದೇವಯ್ಯ. ಈ ತರದ ಸನ್ನಿವೇಶಕ್ಕಾಗಿ ಅವನು ಶಿವರಾಜನ್ನು ನಿಧಾನವಾಗಿಯಾದರೂ ಕ್ರಮಬದ್ಧವಾಗಿ ಸಿದ್ಧಪಡಿಸಿದ್ದನು.

ಮಂತ್ರಿ ಶಿವರುದ್ರಪ್ಪನಿಗೆ ಒಬ್ಬಳೇ ಒಬ್ಬಳು ಮಗಳಿದ್ದಳು. ಅವಳು ಪಾರ್ವತಿ. ಈ ಕುವರಿ ಸೌಂದರ್ಯದ ನಿಧಿಯಾಗಿದ್ದಳು. ಅದಕ್ಕಿಂತಲೂ ಹೆಚ್ಚಾಗಿ ಇವಳು ಸದ್ಗುಣಭರಿತೆಯಾಗಿ ಸಾತ್ತ್ವಿಕ ಗುಣದಿಂದ ಶೋಭಿಸುವ ರಮಣೀಮಣಿಯಾಗಿದ್ದಳು. ಸುಂದರಿ, ಗುಣಭರಿತೆ, ಅಮಾತ್ಯನಂದಿನಿ – ಯಾವುದಕ್ಕೆ ಕಡಿಮೆ? ಚಿನ್ನದ ಪುಷ್ಪ – ಸೌಸವಯುಕ್ತವಾದ ಪುಷ್ಪ ಯೋಗ್ಯತೆ, ಹಿರಿಮೆಯಿರುವ ಶ್ರೀಮಂತರನ್ನು ಸೇರುವುದೇ ವಿನಾ ಭಿಕಾರಿಗಳನ್ನಲ್ಲ. ಇಂತಹ ಚೆಲುವೆ ಪಾರ್ವತಿಗೂ ಬಸವರಾಜನಿಗೂ ಬೆಳೆದು ಬಂದಿತ್ತು ದಿವ್ಯ ಪ್ರೇಮ. ಚಿಕ್ಕಂದಿನಿಂದಲೂ ಪರಿಚಿತರಾಗಿ ಆಡಿ ಓಡಿ ಈ ಮೂವರೂ – ರಾಜಕುಮಾರರು ಮತ್ತು ಮಂತ್ರಿಸುತೆ – ಬೆಳೆದಿದ್ದರು. ಅವರು ಕೇವಲ ಚಿಕ್ಕವರಾಗಿರುವಾಗ, ಬಸವರಾಜನಿಗೆ ಹತ್ತು ವರ್ಷ ವಯಸ್ಸು, ಪಾರ್ವತಿ ಕೇವಲ ಐದು ವರ್ಷದ ಮಗು. ಮಕ್ಕಳು ಆಟದ ಸ್ವಯಂವರ ಏರ್ಪಡಿಸಿಕೊಂಡರು. ಪಾರ್ವತಿಯು ಶಿವರಾಜನನ್ನು ತಿರಸ್ಕರಿಸಿ ಬಸವರಾಜನಿಗೆ ಮಾಲೆ ಹಾಕಿದ್ದಳು. ಹೀಗೆ ಮದುವೆಯ ಆಟಗಳು ಎಷ್ಟೋ ಸಲ ನಡೆದಿದ್ದುವು. ಆಗೆಲ್ಲ ಪಾರ್ವತಿಯು ಬಸವರಾಜನ ಮಡದಿಯೆಂದೇ ಕರೆಯಲ್ಪಡುತ್ತಿದ್ದಳು. ಮಹಾರಾಜನಿಗೂ ಮಂತ್ರಿಗೂ ಅವರ ಸಹಧರ್ಮಿಣಿಯರಿಗೂ ಈ ಒಂದು ಬಳಕೆಯಿಂದ, ಹೊಂದಿಕೆಯಿಂದ ಅಪಾರಾನಂದ ಒದಗುತ್ತಿತ್ತು.

"ನಮ್ಮ ಮೈತ್ರಿಯನ್ನು ಈ ರಕ್ತ ಸಂಬಂಧದಿಂದ ವೃದ್ಧಿಪಡಿಸಬೇಕು. ನೋಡು ಮಂತ್ರೀ! ಆ ಮಕ್ಕಳ ಸಂತೋಷ!" ಎಂದು ಮಹಾರಾಜನು ಮಕ್ಕಳ ಮದುವೆಯಾಟ ನೋಡಿ ಸಂತೋಷಗೊಂಡು ಹೇಳಿದಾಗ ಮಂತ್ರಿಯು ಆನಂದ, ಕೃತಜ್ಞತಾಪೂರ್ವಕವಾದ ಸಮ್ಮತಿಯನ್ನು ವ್ಯಕ್ತಪಡಿಸಿದನು.

ಹೀಗೆ ಬಸವರಾಜ ಪಾರ್ವತಿಯರ ಹುಡುಗತನದ ಸ್ನೇಹ ಬೆಳೆಯುತ್ತಿತ್ತು.

ತಾರುಣ್ಯದ ಏರಿಕೆಯ ಕಾಲದಲ್ಲಿ ಇವರ ಆಟಗಳು ವಿನೋದಗಳು ದೂರವಾದವು. ಮೊದಲು ಸಹಜವಾಗಿರುತ್ತಿದ್ದ ಬಳಕೆಯು ಈಗ ನಾಚಿಕೆಯ ಪರದೆಯಿಂದ ಮರೆಯಾಯಿತು, ಕಲ್ಮಷರಹಿತವಾದ ಎಳೆಯತನದ ಸ್ನೇಹ ಪವಿತ್ರ ಪ್ರೇಮವಾಗಿ ಪರಿಣಮಿಸಿತು. ಮೊದಲಿನಂತೆ ಮಾತಿಲ್ಲ, ಚಕ್ಕಂದವಿಲ್ಲ, ಒಡನಾಟವಿಲ್ಲ. ಆದರೆ ಮೊದಲಿಗಿಂತಲೂ ಹೃದಯಗಳು ಸಮೀಪವಾಗಿದ್ದುವು. ಪ್ರೇಮಿಗಳು ಪರಸ್ಪರ ಮುಖದರ್ಶನದಿಂದಲೇ ಸ್ವರ್ಗಸುಖ ಪಡೆಯುತ್ತಿದ್ದರು.

ಈ ಬೆಳವಣಿಗೆಯಲ್ಲಿ ಶಿವರಾಜನು ಒಂದು ರಹಸ್ಯವನ್ನು ಅರಿತನು. ಅದು ಅವನ ಮಸ್ಸಿನ ಆಳದ ಆಳದಿಂದ ನಿಧಾನವಾಗಿ ಆದರೂ ಸ್ಪಷ್ಟವಾಗಿ ಮಿಡಿದ ಒಂದು ಅಪಸ್ವರ – ಅವನಿಗೆ ಪಾರ್ವತಿಯಲ್ಲಿ ಅಪಾರ ಅನುರಾಗ ಆವಿರ್ಭವಿಸಿತ್ತು. ಇದನ್ನು ಅರಿಯಬೇಕಾದರೆ ಈ ಅಪಸ್ವರದ ಅರ್ಥವಾಗಬೇಕಾದರೆ ಬಹಳಕಾಲ ಹಿಡಿಯಿತು. ಹುಲಿಯ ಪೆಟ್ಟಿನಿಂದ ಗಾಸಿಗೊಂಡು ಮಲಗಿದ್ದಾಗ ಹಾಡು ಸರಿಯಾಗಿ ಅರ್ಥವಾಯಿತು. ಆದರೆ ಅಲ್ಲಿಯೂ ಗಾಯ. ಬಸವರಾಜನನ್ನು ಒಲಿದ ಹೆಣ್ಣು ಅವಳು. ಮಹಾರಾಜನಿಗೂ ಇದು ಸಮ್ಮತ. ಇನ್ನೇನು ಕೆಲವು ವರ್ಷಗಳ ಮಾತು – ಮದುವೆಯು ನಡದೇ ಹೋಗುವುದು, ಅದು ಆಗದಂತೆ ತಡೆಯಬೇಕು. ಪಾರ್ವತಿಯನ್ನು ಪಡೆದು ಸುಖಜೀವನ ನಡೆಸಬೇಕು ಎಂದು ತರುಣನು ಮನಸ್ಸಿನಲ್ಲಿ ಮಂಡಿಗೆ ಮೆಲ್ಲುತ್ತಿದ್ದನು. ಈ ಎಲ್ಲ ಮಾನಸಿಕ ತುಮುಲಗಳ ಪರಿಣಾಮವಾಗಿ ಶಿವರಾಜನು ಅಣ್ಣನ ಸಾಮೀಪ್ಯವನ್ನು ದೂರಮಾಡತೊಡಗಿದನು. ಅವನನ್ನು ಹಳಿಯತೊಡಗಿದನು. ಅಣ್ಣನಿರುವಲ್ಲಿ ತಮ್ಮನಿದ್ದರೆ ತಮ್ಮನಿಗೆ ಗಲಿಬಿಲಿಯುಂಟಾಗುತ್ತಿತ್ತು, ಮನಸ್ಸಿನಲ್ಲಿ ಒಂದು ವಿಧದ ಕ್ಷೋಭೆಯೇಳುತ್ತಿತ್ತು.

ಶಿವರಾಜನ ಮನಸ್ಸಿನಲ್ಲಿ ಇಂತಹ ತುಮುಲ ತಳಮಳಿಸುತ್ತಿದ್ದ ಸಮಯದಲ್ಲಿ ಅವನಿಗೆ ಶಾಂತಿರಸವನ್ನೆರೆದವನು ದೇವಯ್ಯ. ದೇವಯ್ಯನಿಗೆ ಮೊದ ಮೊದಲು ಶಿವರಾಜನ ಕಳವಳ ತಿಳಿದಿರಲಿಲ್ಲ. ಆದರೂ ಅವನ ಸಂಗದಲ್ಲಿ ರಾಜಕುಮಾರನಿಗೆ ಒಂದು ವಿಧವಾದ

ಸಮಾಧಾನವಾಗುತ್ತಿತ್ತು. ಹೀಗೆ ಕ್ರಮೇಣ ಬೆಳೆದ ಅವರ ಮೈತ್ರಿಯಲ್ಲಿ ಶಿವರಾಜನ ಮನಸ್ಸಿನ ಅಂತರಾಳದಲ್ಲಿದ್ದ ರಹಸ್ಯ ದೇವಯ್ಯನಿಗೆ ತಿಳಿಯಿತು. ಅಂತಹ ಅತೃಪ್ತಿಗೆ ಹಿತಕರವಾಗುವಂತಹ ಸಮಾಧಾನೋಕ್ತಿಗಳನ್ನು ದೇವಯ್ಯನು ಹೇಳಿ ರಾಜಕುಮಾರನ ಕ್ಷೋಭೆಯನ್ನು ಕಡಿಮೆಮಾಡಿದನು. ಪಾರ್ವತಿಯನ್ನು ಹೇಗಾದರೂ ಪಡೆದು, ಅಗತ್ಯವೆಂದೆನ್ನಿಸಿದರೆ ಊರುಬಿಟ್ಟು ಓಡಿಹೋಗಿಯಾದರೂ, ಜೀವನ ನಡೆಸುವುದು ಅತ್ಯವಶ್ಯ ಎಂದು ಶಿವರಾಜನು ಚಿಂತಿಸುತ್ತಿದ್ದನು. ದೇವಯ್ಯನೂ ಇವನೂ ಇದಕ್ಕೆ ಸರಿಯಾಗಿ ಹೊಂದುವ ಕುಹಕಮಾರ್ಗವನ್ನು ಚಿಂತಿಸುತ್ತಿದ್ದರು.

ವರ್ಷಗಳು ಭರದಿಂದ ಉರುಳಿದವು. ಬಸವರಾಜನು ಕೌಮಾರ್ಯ ಕಳೆದು ಯುವಕನಾಗಿದ್ದನು. ಅವನಿಗೆ ಇಪ್ಪತ್ತು ವರ್ಷಗಳು ತುಂಬಿದ್ದುವು. ಮುಂದಿನ ವಸಂತ ಋತುವಿನಲ್ಲಿ ಬಸವರಾಜ – ಪಾರ್ವತಿಯರ ವಿವಾಹವನ್ನು ನೆರವೇರಿಸಬೇಕೆಂದು ಮಹಾರಾಜನು ನಿರ್ಧರಿಸಿದ್ದನು. ಇದು ಎಲ್ಲರಿಗೂ ತಿಳಿದಿತ್ತು. ರಾಜಕುಮಾರನ ವಿವಾಹವನ್ನು ಪ್ರಜೆಗಳು, ಬಂಧುಗಳು, ಮಿತ್ರರು ಸಕಲರೂ ಸಂತೋಷದಿಂದ ಎದುರು ನೋಡುತಿದ್ದರು. ಮಳೆಗಾಲದ ದುರ್ಭರ ದಿವಸಗಳನ್ನು ಕಳೆಯುವಾಗ ಜನರಿಗೆ ಆ ಮುಂದಿನ, ರಾಜ್ಯದ ಸಂತೋಷದ ಹಬ್ಬವನ್ನು ನೆನೆದು ಉತ್ಸಾಹವು ಕುದುರುತ್ತಿತ್ತು. ಬಸವರಾಜನು ಪ್ರಜೆಗಳ ಪಾಲಿನ ಪೂರ್ಣ ದೇವತೆಯಾಗಿ ಅವರ ಪುಣ್ಯದ ಪ್ರತೀಕವಾಗಿದ್ದನು. ಅವನಾದರೂ ಆ ಹರ್ಷದಾಯಕ ದಿವಸಗಳನ್ನು ಅತ್ಯಂತ ಕುತೂಹಲಾನಂದಗಳಿಂದ ನಿರೀಕ್ಷಿಸುತ್ತಿದ್ದನು.

ಶಿವರಾಜನ ಮನಸ್ಸಿನ ಈರ್ಷ್ಯೆಯು ಮೇರೆ ಮೀರುವಂತಾಗಿತ್ತು. ಆದರೆ ಅದು ಅವನಿಗೂ ದೇವಯ್ಯನಿಗೂ ಹೊರತು ಬೇರೆ ಯಾರಿಗೂ ತಿಳಿದಿರಲಿಲ್ಲ. ಬಸವರಾಜನು ಎಂದಿನಂತೆ ಹಿತನುಡಿಗಳಿಂದ ವಾತ್ಸಲ್ಯದಿಂದ ತಮ್ಮನನ್ನು ಮಾತಾಡಿಸುತ್ತಿದ್ದನು. ಆದರೆ ಅಣ್ಣನ ಸಮ್ಮುಖವನ್ನು ಏನಾದರೂ ಬಿರುನುಡಿದು ಮುಖಮುರಿದು ಇವನು ತಪ್ಪಿಸುತ್ತಿದ್ದನು. ತಮ್ಮನ ಈ ನೂತನ ವರ್ತನೆ ಬಸವರಾಜನಿಗೆ ಅರ್ಥವಾಗದ ಆಶ್ಚರ್ಯವನ್ನು ಒಡ್ಡುತ್ತಿದ್ದಿತು. ಆದರೆ ಅವನು ಅದರ ಗೊಡವೆಗೆ ಹೋಗುತ್ತಿರಲಿಲ್ಲ. ಚಿಕ್ಕಪ್ರಾಯದಲ್ಲಿ ಬೀಜರೂಪದಲ್ಲಿದ್ದ ಮತ್ಸರವು ಕ್ರಮೇಣ ಅಂಕುರಿಸಿ ಈಗ ಮರವಾಗಿ ಶಿವರಾಜನ ಮನಸನ್ನಿಡೀ ಆಕ್ರಮಿಸಿದ್ದಿತು. ಆಗ ಅಸ್ಪಷ್ಟವಾಗಿದ್ದ ಕುಹಕಮಾರ್ಗ ಈಗ ಸುಸ್ಪಷ್ಟವಾಗಿದ್ದಿತು. ಇನ್ನುಳಿದಿರುವುದು ಕೇವಲ ಕೆಲವೇ ತಿಂಗಳು. ಆ ಮೊದಲೇ ತನ್ನ ಇಷ್ಟಪ್ರಾಪ್ತಿಯಾಗಬೇಕು. ಇಲ್ಲವಾದರೆ ಮತ್ತೆ ಅವನಿಗೂ ತನಗೂ ಒದಗುವ ಅಂತರ ಸ್ವರ್ಗನರಕಗಳ ಅಂತರ. ದೇವಯ್ಯನ ಮಂತ್ರಾಲೋಚನೆಯಿಂದ ಶಿವರಾಜನು ತನ್ನ ದುಷ್ಟವಾದ ಹಂಚಿಕೆಯನ್ನು ಮುಂದುವರಿಸಿದನು. ಕಾಲೋಚಿತವಾಗಿ ದೇವಯ್ಯನು ಇನ್ನೊಂದು ದುರ್ಭಾವನೆಯನ್ನೂ ಶಿವರಾಜನ ವ್ಯಾಧಿಗ್ರಸ್ತ ಮಿದುಳಿನಲ್ಲಿ ಬಿತ್ತಿದನು. ಶಿವರಾಜನು ರಾಜಕುಮಾರನಾಗಿದ್ದರೂ ಸರ್ವವಿಧದಲ್ಲಿಯೂ ರಾಜನಾಗಲು ಅರ್ಹತೆ ದಕ್ಷತೆಗಳಿರುವವನಾದರೂ ಅವನು ಎಂದೆಂದೂ ರಾಜನಾಗುವಂತೆ ಇಲ್ಲ. ಹಿರಿಯಣ್ಣನ ಪ್ರತಿನಿಧಿಯಾಗಿ ಎಲ್ಲಿಯಾದರೂ ಇರಬೇಕೇ ಹೊರತು ಸ್ವತಂತ್ರ ರಾಜನಾಗುವಂತೆ ಇಲ್ಲ. ತಂದೆಯೂ ಬದುಕಿರುವವರೆಗೆ ತಾನು ರಾಜಕುಮಾರನೆಂದಿರಬಹುದಷ್ಟೆ. ಅವನ ಅನಂತರ ತನಗೆ ವಿಪತ್ಪರಂಪರೆ ಕಾದಿದೆ ಎಂದು ಶಿವರಾಜನು ಚಿಂತಿಸುತ್ತ ಭಯಗೊಂಡನು. ಭಯವು ಬುದ್ಧಿಯನ್ನು ಕೆಡಿಸಿ ಮನಃಪಟಲದ ಮೇಲೆ ಇಲ್ಲಸಲ್ಲದ ಚಿತ್ರಗಳನ್ನು ಬಿಡಿಸಿತು. ಆ ಪ್ರಕಾರ ತಾನು ಸೆರೆಮನೆಯಲ್ಲಿ ಕೊಳೆಯುತ್ತಿರುವಂತೆಯೂ, ಅಣ್ಣನು ಕ್ರೂರವಾಗಿ ತನ್ನನ್ನು ಶಿಕ್ಷಿಸುತ್ತಿರುವಂತೆಯೂ ಕಂಡು ಹೆದರಿ ನಡುಗಿದನು. ಈ ಚಿತ್ರದ ರಚನೆಯಲ್ಲಿ ದೇವಯ್ಯನ ಹಸ್ತಲಾಘವ, ಕುಂಚಕೌಶಲ ಸಾಕಷ್ಟು ಇತ್ತೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಒಂದು ಕಡೆ ಈ ತರದ ಭಯಾನಕ ಚಿತ್ರ ಮನಸ್ಸನ್ನು ಮುದುಡಿಸಿದರೆ ಇನ್ನೊಂದು ಕಡೆ ಸುಂದರಿ ಪಾರ್ವತಿಯ ಸಹವಾಸಸುಖ ಸಿಂಹಾಸನಾರೋಹಣದ ಸ್ವರ್ಗಸುಖ ಇವುಗಳ ಸುಂದರಚಿತ್ರ ಮನಸ್ಸನ್ನು ಪ್ರಫುಲ್ಲಿತವನ್ನಾಗಿ ಮಾಡುತ್ತಿತ್ತು. ಹೀಗೆ ಪರಸ್ಪರ ವಿರುದ್ಧ ಭಾವನೆಗಳ ಮುಷ್ಟಿಯುದ್ಧದಲ್ಲಿ ಶಿವರಾಜನು ನವೆಯುತ್ತಿದ್ದನು, ಕ್ಷೀಣಿಸುತ್ತಿದ್ದನು.

ಶಿವರಾಜ ದೇವಯ್ಯ ಇವರ ಕುತಂತ್ರ ಫಲಿಸುವಂತೆ ತೋರಿತು. ಗೌರೀವ್ರತದ ಶುಭಸಾಯಂಕಾಲ ಮಂತ್ರಿಸುತೆ ಆಪ್ತಜನ ಪರಿವೇಷ್ಟಿತೆಯಾಗಿ ಮಹಾಕಾಳಿಯ ದಿವ್ಯಮಂದಿರಕ್ಕೆ ಹೋಗಿ ದೇವಿಯನ್ನು ಪರಮಭಕ್ತಿಯಿಂದ ಪೂಜಿಸಿದಳು. ಇಷ್ಟಾರ್ಥಪ್ರಾಪ್ತಿಗಾಗಿ, ತನ್ನ ಪ್ರಾಣಪ್ರಿಯನ ಭಾವೀವಲ್ಲಭನ ಉತ್ಕರ್ಷೆಯಾಗಿ ಮಹಾಮಾಯೆಯನ್ನು ಅರ್ಚಿಸಿದಳು. ಪೂಜೆಯಲ್ಲಿ ದೋಷವಿದ್ದಿತೋ, ಕರ್ಮವು ಪರಿಶುದ್ಧವಾಗಿರಲಿಲ್ಲವೋ, ಭಕ್ತಿಯು ಸಂಪೂರ್ಣವಾಗಿರಲಿಲ್ಲವೋ ಪಾರ್ವತಿಯ ಬಲಗಣ್ಣು ಅದಿರಿತು. ಆರತಿಯ ಬೆಳಕು ಗಾಳಿ ನಂದಿ ಹೋಯಿತು. ಸಂತೋಷಸಗರದಲ್ಲಿ ಝುಝೂವಾತವೇಳುವಂತೆ ತೋರಿತು. ಆದರೆ ದೇವಿಯ ಇಷ್ಟ ಹೇಗಿದೆಯೋ ಬಲ್ಲವರು ಯಾರು? ಹೊತ್ತು ಮೀರಿತು ಎಂದು ಅಮಾತ್ಯನಂದಿನಿ ಲಗುಬಗೆಯಿಂದ ಎದ್ದು ಹಿಂದೆ ಹೊರಡಲು ಅನುವಾದಳು. ಸಂಜೆಯ ಬೆಳಕು ಇನ್ನೂ ಮಂದವಾಗಿ ಪಸರಿಸಿಕೊಂಡಿತ್ತು. ಪಾರ್ವತಿಯೂ ಅವಳ ಪರಿವಾರವೂ ಹಿಂದೆ ಹೋಗುತ್ತಿದ್ದಾಗ ಫಕ್ಕನೆ ನಾಲ್ಕು ಜನ ಛದ್ಮವೇಷಿಗಳಾದ ಅಶ್ವಾರೋಹಿಗಳು ಅವರನ್ನು ಬಂದು ಮುತ್ತಿದರು. ಅವರಲ್ಲಿ ಒಬ್ಬನು ಪಾರ್ವತಿಯನ್ನು ಹಿಡಿದೆತ್ತಿ ತನ್ನ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ದೌಡಾಯಿಸಿಕೊಂಡು ಓಡಿಯೇ ಹೋದನು. ಉಳಿದ ರಾವುತರು ಅವನ ಹಿಂದೆಯೇ ಧಾವಿಸಿದರು. ಈ ಆಕಸ್ಮಿಕ ಘಟನೆಯಿಂದ ಮಂಕುಬಡಿದ ಸಖಿಯರು ತಿಳಿದೇಳುವಾಗ ಅವರ ಪ್ರಾಣದಂತಿದ್ದ ಅವರ ಸಾರದಂತಿದ್ದ ಮಂತ್ರಿಪುತ್ರಿ ಅಲ್ಲಿ ಇರಲೇ ಇಲ್ಲ. ಯಾರಿಗೆ ಹೇಳುವುದು? ಏನು ಹೇಳುವುದು?

ಮಹಾರಾಜನಿಗೂ ಮಂತ್ರಿಗೂ ದೂರು ತಲಪಲು ಹೆಚ್ಚು ವೇಳೆ ಹಿಡಿಯಲಿಲ್ಲ.

ಪಾರ್ವತಿಯನ್ನು ಅಪಹರಿಸಿಕೊಂಡು ಹೋದವನು ಶಿವರಾಜನೇ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಪ್ರಸಂಗದ ತೀವ್ರತೆಯ ಗಾಸಿಯಿಂದ ತಿಳಿದೆದ್ದು, ಬುದ್ಧಿ ಉದ್ವೇಗವನ್ನು ಹಿಮ್ಮೆಟ್ಟಿ ಮುಂದೆ ಬಂದು ನಿಂತಾಗ, ಪಾರ್ವತಿಗೆ ಆ ದುರ್ಘಟನೆಯ ಅರ್ಥ ಸಂಪೂರ್ಣವಾಗಿ ಆಯಿತು. ಕುದುರೆಯು ಪೂರ್ವದಿಗಭಿಮುಖವಾಗಿ ಓಡುತ್ತಲೇ ಇದ್ದಿತು. ಶಿವರಾಜನು ಅವಳನ್ನು ಬಲವಾಗಿ ಎಳೆದು ಹಿಡಿದಿದ್ದನು. ಅವನ ಆ ಬಲಿಷ್ಠ ಹಿಡಿತದಿಂದ ಬಿಡಿಸಿಕೊಳ್ಳಲು ತರಳೆಗೆ ಸಾಧ್ಯವಾಗಲಿಲ್ಲ. ಅವನನ್ನು ಆ ಲಂಪಟನನ್ನು ಆ ದುಷ್ಟನನ್ನು ಅವಳು ಬಹಳವಾಗಿ ಹಳಿದಳು. ಆದರೆ ಶಿವರಾಜನು ಮಾತನಾಡದೆ ತನ್ನ ಕರ್ತವ್ಯದಲ್ಲಿ – ಪಡೆದುದನ್ನು ದಕ್ಕಿಸಿಕೊಳ್ಳುವುದರಲ್ಲಿ – ಮಗ್ನನಾಗಿದ್ದನು. ಅನುಚರರು – ದೇವಯ್ಯ ಮತ್ತು ಸೈನಿಕರೀರ್ವರು – ಅವನ ಹಿಂದೆಯೇ ಧಾವಿಸುತ್ತಿದ್ದರು.

ಶತ್ರುಗಳು ಯಾರೋ ಮಂತ್ರಿಸುತೆಯನ್ನು ಅಪಹರಿಸಿರುವರೆನ್ನುವ ಕಾಳ್ಗಿಚ್ಚು ಸುದ್ದಿ ಭುಗಿಲ್ ಭುಗಿಲ್ ಎಂದು ಹಬ್ಬಿತು. ಬಸವರಾಜನು ಮನದನ್ನೆಯನ್ನು ರಕ್ಷಿಸಲು ಮುಂದಾದನು. ಇಪ್ಪತ್ತೈದು ಮಂದಿ ಸಶಸ್ತ್ರರಾವುತರಿಂದ ಪರಿವೃತನಾಗಿ ಅವನು ಧಾವಿಸಿದನು. ಆಗಂತುಕ ಕ್ರೂರಿಗಳು ಪೂರ್ವ ದಿಕ್ಕಿಗೆ ಜಿಗಿದಿದ್ದರೆಂದು ಬಸವರಾಜನಿಗೆ ಜನರಿಂದ ತಿಳಿದುದರಿಂದ ಆ ದಿಕ್ಕಿಗೇ ದೌಡಾಯಿಸಿದನು. ಸ್ತ್ರೀ ಅಪಹಾರಿಗಳ ಹಿಂದೆ ಈ ಪಡೆಯು ದ್ವಿಗುಣಿತ ವೇಗದಿಂದ ಓಡಿತು. ಸತ್ಕಾರ್ಯಕ್ಕೆ ದೇವರ ಬೆಂಬಲವಿರುವುದು. ಈ ಬೆಂಬಲ ಮನಸ್ಸಿನ ಉತ್ಸಾಹದಲ್ಲಿ, ದೇಹದ ಶಕ್ತಿಯಲ್ಲಿ, ಪ್ರಸಂಗಗಳ ಅನುಕೂಲತೆಯಲ್ಲಿ ಎದ್ದು ಕಾಣುವುದು. ದುಷ್ಕಾರ್ಯಕ್ಕೆ ವಿಘ್ನಗಳು ಅಮಿತ. ಅವುಗಳಲ್ಲಿ ಒಂದೇ ಒಂದು ವಿಘ್ನವನ್ನಾದರೂ ಕೃತಿಕಾರನು ಎದುರಿಸದಿದ್ದರೆ ಅದು ಅವನನ್ನು ನಾಶ ಮಾಡಿ ಬಿಡುವುದು.

ಶಿವರಾಜನ ಪರಿವಾರ ಬಸವರಾಜನ ಪಡೆಯಿಂದ ಶೀಘ್ರವಾಗಿ ಆವರಿಸಲ್ಪಟ್ಟಿತು. ಅವರು ನಾಲ್ಕು ಜನರು ಇವರು ಇಪ್ಪತ್ತಾರು ಜನರು. ಅವರದು ದುಷ್ಕಾರ್ಯ, ಇವರದು ಪವಿತ್ರ ಕರ್ತವ್ಯ. ನಾಲ್ಕು ಜನರೂ ಸೆರೆಸಿಕ್ಕಿದರು. ಪಾರ್ವತಿಯ ಬಸವರಾಜನ ಹೃನ್ಮಂದಿರದ ಆರಾಧನಾ ದೇವಿಯು, ಸುರಕ್ಷಿತಳಾದಳು. ಕತ್ತಲೆಯ ಮೊತ್ತ; ಚಂದ್ರನ ಮಂದಪ್ರಕಾಶವೂ ಮೋಡಗಳಿಂದಾಗಿ ಕಡಿಮೆಯಾಗಿತ್ತು. ಆದರೂ ಬಸವರಾಜನಿಗೆ ಶಿವರಾಜನನ್ನೂ ದೇವಯ್ಯನನ್ನೂ ಗುರುತಿಸಲು ತಡವಾಗಲಿಲ್ಲ. ಹಿರಿಯವನು ದಿಗ್ಭ್ರಾಂತನಾದನು. ಇಂತಹ ಹೀನ ಕಾರ್ಯದಲ್ಲಿ ಪ್ರವೃತ್ತನಾದವನು ತನ್ನ ಸಹೋದರ. ಸೈನಿಕರಿಂದ ಬಲವಾಗಿ ಹಿಡಿಯಲ್ಪಟ್ಟಿದ್ದ ಶಿವರಾಜ ನೆಲವನ್ನು ನೋಡುತ್ತಿದ್ದನು. ಪಾದಗಳು ತರಗೆಲೆಗಳನ್ನು ಕೆರೆಯುತ್ತಿದ್ದುವು. ದೇವಯ್ಯನು ದೂರದ ಬೆಟ್ಟದ ಅಂಚನ್ನು ನೋಡುತ್ತಿದ್ದನು. ಉಳಿದ ಸೈನಿಕರು ನೀರವ. ಏನು ಮಾತಾಡುವುದು ಹೇಗೆ ಮಾಡುವುದು? ಯಾರು ಮಾತು ಪ್ರಾರಂಭಿಸಬೇಕು? ಮುಂದೇನು? ಮೋಡಗಳು ಭರದಿಂದ ಚಂದ್ರನನ್ನು ನುಂಗಲು ಧಾವಿಸಿ ಮುಂದೆ ನುಗ್ಗಿದುವು. ಗಾಳಿಯ ಚಲನೆಯಿಲ್ಲ. ಗೂಬೆಯ ಘೂಕಾರ ಅಮಂಗಳ ವಚನ ನುಡಿಯಿತು.

ಔದಾರ್ಯದ ಮೂರ್ತಿ ಬಸವರಾಜ ನುಡಿದನು : "ತಮ್ಮ! ಆದದ್ದು ಆಗಿಹೋಯಿತು. ನಿನ್ನನ್ನು ಕ್ಷಮಿಸುವಂತೆ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ. ಹಿಂದೆ ಹೋಗೋಣ."

ತಮ್ಮನು ಮಾತಾಡಲಿಲ್ಲ.

"ಈ ಸಂಗತಿ ಇಲ್ಲಿರುವ ನಮಗೆ ಮಾತ್ರ ತಿಳಿದಿದೆ. ಉಳಿದ ಯಾರಿಗೂ ಪಾರ್ವತಿಯನ್ನು ಅಪಹರಿಸಿದವನು ನೀನೆಂದು ಗೊತ್ತಿಲ್ಲ"– ಅಣ್ಣನು ಮುಂದುವರಿಸಿದನು – "ನೀನು ನಾಲ್ಕುನಾಡಿಗೆ ಹೋಗಿದ್ದವನು ಅಲ್ಲಿಯೇ ಇರುವಿಯೆಂದು ತಂದೆಯವರಿಗೂ ಎಲ್ಲರಿಗೂ ನಂಬಿಕೆ. ನೀನು ಈಗಿಂದೀಗಲೇ ಅಲ್ಲಿಗೆ ಹೋಗು. ನಿಧಾನವಾಗಿ, ದಿನವೆಂಟು ಕಳೆದ ಮೇಲೆ, ಸಹಜವಾಗಿ ಮಡಿಕೇರಿಗೆ ಹೊರಟು ಬಾ. ನಿನ್ನ ಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು ಬಾ."

ಶಿವರಾಜನ ಉಸಿರು ತೀವ್ರವಾಗುತ್ತಿತ್ತು. ಪಾದಗಳು ಇನ್ನೂ ವೇಗದಿಂದ ನೆಲವನ್ನು ಕೆದಕುತ್ತಿದ್ದುವು.

"ದುರದೃಷ್ಟದಿಂದ ರಾಜಕುಲದ ಮರ್ಯಾದೆಯಿಲ್ಲಿ ಮಿಶ್ರವಾಗಿ ಹೋಗಿದೆ. ನಿಮ್ಮಲ್ಲಿ ಯಾರಿಂದಾದರೂ ಈ ಸುದ್ದಿ ಹೊರಗೆ ಬಂದರೆ ಅವರಿಗೆ ಮರಣ ಶಿಕ್ಷೆ, ತಿಳಿಯಿತೇ?"

ಬಸವರಾಜನ ಮಾತಿಗೆ ಸಕಲ ಸೈನಿಕರೂ ಸಮ್ಮತಿಯಿತ್ತರು, ಮತ್ತು ತಾವು ರಹಸ್ಯವನ್ನು ರಕ್ಷಿಸವುದಾಗಿ ಖಡ್ಗಗಳನ್ನು ಮುಟ್ಟಿ ಪ್ರತಿಜ್ಞೆಮಾಡಿದರು.

"ನೀವಿನ್ನು ಹೋಗಿ" ಎಂದು ಶಿವರಾಜನ ಮೈದಡವಿ ಅವನನ್ನು ಪ್ರೇಮದಿಂದ ಬಸವರಾಜನು ಕಳುಹಿಸಿದನು. ಶಿವರಾಜನು ಕದಲಲೇ ಇಲ್ಲ.

"ಮನುಷ್ಯನ ಶಕ್ತಿಗಿಂತಲೂ ಮೇಲೇ ಅದೃಷ್ಟ ಶಕ್ತಿಯೆಂದೊಂದಿದೆ. ಅದೇ ನಮ್ಮನ್ನು ರಕ್ಷಿಸುವ ದೇವರು. ಆ ದೇವರ ಹೆಸರಿನಲ್ಲಿ ನೀನು ಸನ್ಮಾರ್ಗದಲ್ಲಿ ನಡೆಯುತ್ತಿರು ತಮ್ಮಾ!" ಎಂದು ಬುದ್ಧಿ ಶ್ರೀಮಂತ ಬಸವರಾಜನು ಹಿತನುಡಿದನು ಅಲ್ಲಿಂದ ತೆರಳಿದನು. ಪಾರ್ವತಿಯನ್ನು ಅವನು ಕರೆದುಕೊಂಡು ಹೋದನು.

ಶಿವರಾಜನೂ ದೇವಯ್ಯನೂ ಅವರು ಹೋದ ಮೇಲೆ ಎಷ್ಟೋ ಹೊತ್ತು ಅಲ್ಲಿಯೇ ನಿಂತಿದ್ದರು. ಅವರ ಸಹಚರ ಸೈನಿಕರೂ ಹಾಗೆಯೇ ನಿಶ್ಚಲರಾಗಿದ್ದರು. ಮನಸ್ಸಿನ ಅಪಮಾನ, ದುಗುಡ ರಾತ್ರಿಯು ಏರಿದಂತೆ ಕಡಿಮೆಯಾದವು. ಶಿವರಾಜನು ಅರಣ್ಯವು ಬಿರಿಯುವಂತೆ ಗಹಗಹಿಸಿ ನಕ್ಕು "ನೋಡಿದೆಯಾ ದೇವಯ್ಯ! ಅದೃಷ್ಟವನ್ನು ನಂಬಬೇಕಂತೆ! ನಮ್ಮ ಪ್ರಯತ್ನ ಸಾಕಾಗಲಿಲ್ಲ ಎಂದು ಈ ಘಟನೆ ತೋರಿಸುವುದೇ ಹೊರತು ಮನುಷ್ಯ ಶಕ್ತಿಯ ಅಲ್ಪತೆಯನ್ನಲ್ಲ."

"ಹೌದು ರಾಜರೇ."

ಈಚೆಗೆ ಎರಡು ವರ್ಷಗಳಿಂದ ದೇವಯ್ಯನು ಶಿವರಾಜನನ್ನು ರಾಜ ಎಂದೇ ಸಂಬೋಧಿಸುತ್ತಿದ್ದನು. ಇದರಿಂದ ಶಿವರಾಜನಿಗೆ ತುಂಬ ಸಂತೋಷವಾಗುತ್ತಿದ್ದಿತು.

"ಇನ್ನು ಮಡಿಕೇರಿಗೆ ನಾನು ಮರಳುವುದು ರಾಜನಾಗಿ, ನೀನು ನನ್ನ ಮಂತ್ರಿಯಾಗಿ. ಈ ಕ್ಷಮೆಯೆನ್ನುವ ಭಯಂಕರ ಅಪಮಾನದ ಸೇಡು ನಾನು ತೀರಿಸಿಕೊಂಡೇ ತೀರುವೆನು."

"ಹಾಗೆಯೇ ಸರಿ ರಾಜರೇ" ದೇವಯ್ಯನು ಉಚಿತವಾಗಿ ಉತ್ತರಿಸಿದನು.

ಆದರೆ ಶಿವರಾಜನು ರಾಜನಾಗಿ ಮಡಿಕೇರಿಗೆ ಮರಳಲಿಲ್ಲ – ರಾಜಕುಮಾರನಾಗಿಯೇ, ಒಂದು ತಿಂಗಳಿನ ಅನಂತರ, ದೇವಯ್ಯನ ಸಮೇತ ಮರಳಿದನು. ಬೇರೇನೋ ದುರಾಲೋಚನೆಯಿಂದಲೋ ದೂರಾಲೋಚನೆಯಿಂದಲೋ ಹಿಂದಿನ ನಿರ್ಧಾರವನ್ನು ವ್ಯತ್ಯಸ್ತಪಡಿಸಿದ್ದನು. ದೇಶಸಂಚಾರಮಾಡಿ ಒಂದು ತಿಂಗಳ ಅನಂತರ ಮರಳಿದ ಕಿರಿಯಮಗನಿಗೆ ವೀರರಾಜನು ಸಂಭ್ರಮದ ಸ್ವಾಗತವಿತ್ತನು. ಬಸವರಾಜನು ಆ ಉತ್ಸವದಲ್ಲಿ ಪೂರ್ಣ ಮನಸ್ಸಿನಿಂದ ಭಾಗಿಯಾಗಿದ್ದನು. ಹಿಂದಿನ ದುರ್ಘಟನೆಯನ್ನು ಅವನು

ಸಂಪೂರ್ಣವಾಗಿ ಮರೆತಂತೆ ವರ್ತಿಸಿದನು. ತಮ್ಮನನ್ನು ಅವನು ಅಂದೇ ಕ್ಷಮಿಸಿದ್ದನು. ಆದರೆ ಶಿವರಾಜನಿಗೆ ಅಣ್ಣನ ದೃಷ್ಟಿಯನ್ನು ಎದುರಿಸಲು ಧೈರ್ಯ ಬರಲಿಲ್ಲ. ಶಿವರಾಜನು ಮೊದಲಿಗಿಂತಲೂ ಹೆಚ್ಚು ಏಕಾಂತಪ್ರೇಮಿಯಾಗಿ ದೇವಯ್ಯನ ಸಂಗದಲ್ಲಿ ಇನ್ನಷ್ಟು ಸಮಯವನ್ನು ಕಳೆಯುತ್ತಿದ್ದನು.

ಮುಂದೆ ಹುತ್ತರಿಯು ಮುಗಿದು ಸುಗ್ಗಿಯ ಸಮಯವೂ ದಾಟಿತು. ವಸಂತಾಗಮನದಿಂದ ನಾಡಿಗೆ ನಾಡೇ ಹರ್ಷದ ಬೀಡಾಯಿತು. ಆ ಶುಭ ಕಾಲದಲ್ಲಿ ರಾಜಕುಮಾರ ಬಸವರಾಜನಿಗೂ ಮಂತ್ರಿಕುಮಾರಿ ಪಾರ್ವತಿಗೂ ವಿವಾಹವು ಮಹಾವೈಭವದಿಂದ ನೆರವೇರಿತು. ಪುಷ್ಪವು ದೇವಸನ್ನಿಧಿಯನ್ನು ಸೇರಿತು. ಸಂಸ್ಥಾನವಿಡೀ ಈ ಪಾಣಿಗ್ರಹಣ ಮಹೋತ್ಸವದಲ್ಲಿ ಭಾಗಿಯಾಗಿ ರಾಜದಂಪತಿಗಳ ಆನಂದದಲ್ಲಿ ಆನಂದ ಪಡೆಯಿತು. ಮಡಿಕೇರಿಯು ಸಿಂಗಾರದ ನಗರವಾಯಿತು. ಸಂತೋಷ ಸಂತೃಪ್ತಿಗಳು ತುಂಬಿ ತುಳುಕುವ ಪಟ್ಟಣವಾಯಿತು. ತರುಣ ರಾಜದಂಪತಿಗಳು ಅತ್ಯುಲ್ಲಾಸದಿಂದ, ಪರಮಸಂತೋಷದಿಂದ, ಆತ್ಮನಿವೇದನೆಯಿಂದ ಗೃಹಸ್ಥ ಜೀವನದಲ್ಲಿ ಅಡಿಯಿಟ್ಟರು.

ಶಿವರಾಜನು ಯಾಂತ್ರಿಕವಾಗಿ – ಎಷ್ಟು ಅಗತ್ಯವೋ ಅದಕ್ಕಿಂತಲೂ ಕಡಿಮೆಯಾಗಿ – ಈ ಉತ್ಸವದಲ್ಲಿ ಭಾಗಿಯಾಗಿದ್ದನು.

ಆನಂದರಸದ ಚಷಕ ತುಂಬಿದ್ದಾಗಲೇ ಪರಮೇಶ್ವರನು ಮುನಿದನು, ಇಲ್ಲ ವೀರರಾಜನ ಮೇಲೆ ತನ್ನ ಅಧಿಕ ವಾತ್ಸಲ್ಯವನ್ನು ವ್ಯಕ್ತಪಡಿಸಿದನು. ಮುಂದಿನ ಮಳೆಗಾಲ, ಅಂದರೆ ದಕ್ಷಿಣಾಯನ ಪ್ರಾರಂಭವಾಗುವ ಪೂರ್ವದಲ್ಲಿ, ವೀರರಾಜನು ಶಿವಪಾದಪದ್ಮಗಳಲ್ಲಿ ಲೀನನಾಗಿದ್ದನು. ರಾಜ ಮಡದಿ ದೇವ ರಾಜಮ್ಮಣ್ಣಿಯು ಮೊದಲೇ ವ್ಯಾಧಿಗ್ರಸ್ತಳಾಗಿದ್ದವಳು ಪತಿವಿಯೋಗದಿಂದ ಎದೆಯೊಡೆದು ಹನ್ನೊಂದು ದಿನ ತುಂಬುವ ಮೊದಲೇ ಪತಿಪಾದ ಸನ್ನಿಧಿಯಲ್ಲಿ ಐಕ್ಯಳಾಗಿದ್ದಳು. ಅನಂತರದ ಕಾರ್ಯಕ್ರಮಗಳು ಯಥಾ ಯೋಗ್ಯವಾಗಿ ನಡೆದುವು. ರಾಜ್ಯದ ಕಾರ್ಯ ಸಾಗಲೇಬೇಕಾಗಿತ್ತು. ವ್ಯಕ್ತಿಕೇಂದ್ರೀಕೃತವಾಗಿದ್ದ ಆಡಳಿತೆಯಲ್ಲಿ ಸಾಮಂತರಾಜರ ವಿಧೇಯತೆ, ರಾಜ್ಯದಲ್ಲಿಯ ಸುವ್ಯವಸ್ಥೆ ಇವುಗಳನ್ನು ರಕ್ಷಿಸಲು ಸಿಂಹಾಸನವು ಒಂದು ಕ್ಷಣವೂ ಕ್ರಿಯಾಶೂನ್ಯವಾಗಿರಬಾರದು. ಅಂತರ್ಮುಖಿ ಬಸವರಾಜ, ಗೃಹಸ್ಥ ಜೀವನದ, ಸಂಸಾರದ ಸುಖದ ಮೊದಲಿನ ಸೋಪಾನದಲ್ಲಿಯೇ ಮಾತಾಪಿತೃವಿಯೋಗದಿಂದ ಕಳೆಗುಂದಿ ಜರ್ಜರಿತನಾಗಿ ಏನು ಕಾರ್ಯ ನಡೆಸಲೂ ತಿಳಿಯದವನಾದನು. ವೃದ್ಧಮಂತ್ರಿ ಶಿವರುದ್ರಪ್ಪನು ದಕ್ಷನಾಗಿದ್ದನು, ಆದರೆ ಮುಖ್ಯ ಸೂತ್ರವನ್ನು ರಾಜನೇ ಹಿಡಿಯಬೇಕು. ನವರಾಜನ ವಿಧಿಪೂರ್ವಕ ಪ್ರತಿಷ್ಠಾಪನೆ, ವಿಧ್ಯುಕ್ತ ಸಿಂಹಾಸನಾರೋಹಣವಾಗಲು ದಿವಂಗತರ ವರ್ಷಾಬ್ದಿಕ ಮುಗಿಯಬೇಕು. ಬಸವರಾಜನು ಶಿವರಾಜನನ್ನು ರಾಜ್ಯದ ರಕ್ಷಣೆ ಪರಿಪಾಲನೆ ಮಾಡಲು ನಿಯಮಿಸಿದನು. ಸಾಮರ್ಥ್ಯ ಮತ್ತು ಯೋಗ್ಯತೆಗಳಲ್ಲಿ ಶಿವರಾಜನು ಎಂದೂ ಕಡಿಮೆಯವನಾಗಿರಲಿಲ್ಲ.

ತಂದೆಯ ಮರಣಾನಂತರ ತಾನು ಸೆರೆಯ ಮನೆಯಲ್ಲಿ ಕೊಳೆಯುತ್ತಿರಬೇಕು ಎಂದು ಕೆಟ್ಟಕನಸು ಕಾಣುತ್ತಿದ್ದ ಶಿವರಾಜನು ಅಣ್ಣನ ಈ ಔದಾರ್ಯದ ಪುನರುಚ್ಚಾರಣೆಯಿಂದ ಸಂತೋಷಭರಿತನಾದನು. ಅಧಿಕಾರ ಮನುಷ್ಯನ ಬುದ್ಧಿಯನ್ನು ಮೋಹಗೊಳಿಸಿ ಕೆಡಿಸುವುದು. ಸರ್ವಾಧಿಕಾರ ಅವನ ಜ್ಞಾನವನ್ನೂ ವಿವೇಕಶಕ್ತಿಯನ್ನೂ ಸಂಪೂರ್ಣವಾಗಿ ನಾಶಪಡಿಸಿಬಿಡುವುದು. ದುಷ್ಟರ ಕೈಗೆ ಅಧಿಕಾರ ಬಂದರೆ ಹೀಗಾಗುವುದು. ಎರಡು ಸಲ ಶಿವರಾಜನ ಮನಸ್ಸಿಗೆ ಗಾಯವಾಗಿದ್ದಿತು. ದೇವಯ್ಯನ ಔಷಧಿಯ ಲೇಪನವಿಲ್ಲದಿದ್ದರೆ, ಮಂತ್ರಾಲೋಚನೆಯ ವಿಷರಸ ಊಡಿಸಲ್ಪಡದಿದ್ದಿದ್ದರೆ ಆ ಗಾಯಗಳು ಬಹುಶಃ ಮಾಯ್ದಿರುತ್ತಿದ್ದುವು. ಸಹೋದರರು ಚಿಕ್ಕಂದಿನಲ್ಲಿ ಇದ್ದಂತೆ ಅನ್ಯೋನ್ಯತೆಯಿಂದ ಬಾಳಿರುತ್ತಿದ್ದರು. ಆದರೆ ದೇವಯ್ಯನ ದಿಗಂತಸಮೀಪದ ಕನಸು ನನಸಾಗಬೇಕಾದರೆ ಶಿವರಾಜನೇ ರಾಜನಾಗಬೇಕು. ಕಾರ್ಯರಂಗದಲ್ಲಿ ರಾಜನಾಗಿದ್ದ ಶಿವರಾಜ ಅವನ ಮಂತ್ರಿ ದೇವಯ್ಯ ಇವರ ಮಂತ್ರಾಲೋಚನೆ ಗುಪ್ತಾಲೋಚನೆ ಕುಹಕಾಲೋಚನೆಗಳು ಅವ್ಯಾಹತವಾಗಿ ಮುಂದುವರಿದುವು.



ಮುಂದಿನ ಕಾರ್ತಿಕ ಮಾಸ. ಮಳೆಯಳಿದು ಹೊಸಚಿಗುರು ನವಹರ್ಷದಿಂದ ಸಲಕರನ್ನೂ ಚೇತನಮುಗ್ಧಗೊಳಿಸುತ್ತಿರುವ ಕಾಲ. ರಾಜ ದಂಪತಿಗಳು ನಾಲ್ಕುನಾಡು ಅರಮನೆಗೆ ಹೋಗಿ ಒಂದೆಂಟು ದಿನಗಳು ಅಲ್ಲಿ ಇದ್ದು ಬಂದರೆ ಪ್ರಜಾರಂಜನೆಯೂ ಆಗುವುದು; ಆ ದಿವ್ಯಪ್ರಕೃತಿಯ ರಸಮಯ ಸನ್ನಿಧಾನದಲ್ಲಿ ಬಸವರಾಜನು ಶಾಂತನಾಗಿ ಇದ್ದು ಮನಃಸ್ವಾಸ್ಥ್ಯವನ್ನು ಪಡೆದಂತೆಯೂ ಆಗುವುದು ಎಂದು ಶಿವರಾಜನು ಸೂಚಿಸಿದನು. ಬಸವರಾಜನಿಗೆ ತಮ್ಮನ ಮಾತು ಯುಕ್ತವೆಂದೆನಿಸಿತು. ಮುಂದೆ ಒಂದು ಶುಭದಿವಸ ರಾಜಪರಿವಾರ ನಾಲ್ಕುನಾಡು ಅರಮನೆಗೆ ತೆರಳಿತು. ತುಂಬಿ ಹರಿಯುತ್ತಿದ್ದ ಕಾವೇರೀ ನದಿಯನ್ನು ದೋಣಿಗಳ ಸಹಾಯದಿಂದ ದಾಟಿ ಮುಂದೆ ಸಾಗಿದರು. ಕಾಡುಗಳ ಮಧ್ಯೆ ಉನ್ನತ ಪ್ರದೇಶದಲ್ಲಿ ಸುಂದರವಾಗಿ ಗಂಭೀರವಾಗಿ ನಿಂತಿರುವ ಆ ಭವ್ಯ ರಾಜಮಂದಿರವನ್ನು ರಾಜದಂಪತಿಗಳು ಸೇರಿದರು. ತಡಿಯಂಡ**ಮೋ**ಳು ಪರ್ವತದ ಬುಡದಲ್ಲಿ ಅರಮನೆಯಿತ್ತು. ಅದರ ವಿಶಾಲವಾದ ಅಂಗಳದಲ್ಲಿ ನಿಂತು ದೃಷ್ಟಿಯನ್ನು ಮೇಲೆ ಚಾಚಿದರೆ ಆಕಾಶದ ಹಿನ್ನೆಲೆಯಲ್ಲಿ ಮಡಿಕೇರಿಯ ಬೆಟ್ಟದ ಅಂಚು ಸ್ಪಷ್ಟವಾಗಿ ತೋರುತ್ತಿದ್ದಿತು. ರಾಜನ ಆಜ್ಞೆಯಂತೆ ಅಲ್ಲಿ – ಬೆಟ್ಟದ ತುದಿಯಲ್ಲಿ – ಪ್ರತಿರಾತ್ರಿ ಝಾಮಝಾಮಕ್ಕೆ ಮಹಾಸ್ಫೋಟನೆಯನ್ನು ಮಾಡಿ ಬೆಂಕಿ ಉರಿಸುತ್ತಿದ್ದರು. ಇದರಿಂದ ದೂರದೂರದ ಹಳ್ಳಿಗಳ ಜನರಿಗೆಲ್ಲ ಕಾಲದ ಅರಿವಾಗುತ್ತಿತ್ತು.

ರಾತ್ರಿಯ ಅಂತಹ ದೃಶ್ಯಗಳನ್ನು ನೋಡುತ್ತ ಅವುಗಳಿಗಿಂತ ಕೋಟಿ ಪಾಲು ಮಿಗಿಲಾದ ದೇವರ ದೀಪಗಳನ್ನು ವೀಕ್ಷಿಸುತ್ತ ಬಸವರಾಜನು ಅಲ್ಲಿ ಶಾಂತಿಯ ಆರಾಧನೆಯನ್ನು ಮಾಡುತ್ತಿದ್ದನು.

ರಾಜದಂಪತಿಗಳು ಅಲ್ಲಿ ಒಂದು ತಿಂಗಳು ಕಾಲ ಹೀಗೆ ಪ್ರಕೃತಿಯ ಆರಾಧನೆಯಲ್ಲಿ ಸಮಯವನ್ನು ಸದ್ವಿನಿಯೋಗ ಮಾಡಿದರು. ಅವರಿಗೆ ಅಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ಮುಂದೆ ಬಸವರಾಜನು ಅಲ್ಲಿಂದ ಮಡಿಕೇರಿಗೆ ಹೊರಡುವ ಇಚ್ಛೆ ವ್ಯಕ್ತಪಡಿಸಿದನು. ಶಿವರಾಜನ ಅಪೇಕ್ಷೆ ಸ್ವಲ್ಪ ತಡವಾಗಿ ಅವರು ಬರಬಹುದು, ಸದ್ಯವೇ ಬಂದರೆ ಅವರಿಗೆ ತೊಂದರೆಯಾಗಬಹುದು ಎಂದಿತ್ತು. ಮತ್ತೆ ಕೆಲವು ದಿವಸಗಳ ಮೇಲೆ ಬಸವರಾಜನು ಹೊರಡಲುದ್ಯಕ್ತನಾದನು. ಆಗ ಮತ್ತೊಂದು ಎಡರನ್ನು ಎದುರಿಡಲಾಯಿತು. ಹೀಗೆಯೇ ಮತ್ತೆರಡು ತಿಂಗಳುಗಳು ಕಳೆಯುವಾಗ ಬಸವರಾಜನಿಗೆ ಸ್ಪಷ್ಟವಾಯಿತು – ತಾನು ಮತ್ತೆ ಮಡಿಕೇರಿಗೆ ಹೋಗುವಂತಿಲ್ಲ; ಇಲ್ಲಿ ಅರಮನೆಯಲ್ಲಿಯೇ ಪ್ರತಿಬಂಧಿತನಾಗಿದ್ದೇನೆ, ಎಂದು. ಅರಮನೆಯ ಭದ್ರವಾದ ಬಲು ಎತ್ತರವಾದ ಗೋಡೆಗಳ ಆವರಣದಿಂದ ಹೊರಗೆಹೋಗಲು ಅವರಿಗೆಡೆಯಿರಲಿಲ್ಲ. ತಮ್ಮನ ಮೋಸಕೃತ್ರಿಮತೆಗಳು ಬಸವರಾಜನಿಗೆ ವಿದಿತವಾದುವು ಸಹಾಯಹೀನ ಸಿಂಹಸಿಂಹಿಣಿಯರು ಕ್ರೋಧಾತಿಶಯದಿಂದ ಗರ್ಜಿಸಿದರು. ಆದರೆ ಅರಮನೆಯ ಗೋಡೆಗಳೂ ಪೌಳಿಯ ಗೋಡೆಗಳೂ ಅಲುಗಲಿಲ್ಲ. ಮುಂದೆರಡು ವಾರಗಳು ಮುಗಿದಾಗ ವೈಭವಪೂರಿತನಾಗಿ ದರ್ಪದಿಂದ ಗರ್ವದಿಂದ ಶಿವರಾಜನೇ ಅರಮನೆಗೆ ಬಂದನು.

"ಹೇಗಿದ್ದೀರಿ ಅಣ್ಣನವರೇ ಅತ್ತಿಗೆಯವರೇ?" ಶಿವರಾಜನು ಕೊಂಕು ನುಡಿದನು.

ಬಸವರಾಜನ ಕೋಪವಳಿದಿತ್ತು. ಸಮಾಧಾನವಾಗಿಯೇ ಮಾತಾಡಿದನು. "ತಮ್ಮಾ! ಬಾ ಕುಳಿತುಕೋ. ನಿನಗೇನು ರಾಜ್ಯಬೇಕೆಂದು ಆಸೆಯೇ?" ಪಾರ್ವತಿಯು ಹಲ್ಕಡಿಯುತ್ತಿದ್ದಳು.

"ಪುರುಷ ಪ್ರಯತ್ನವೋ ಅದೃಷ್ಟವೋ ಮೇಲು? ಈಗ ನೋಡಣ್ಣಾ!" ಶಿವರಾಜನು ಕಠೋರವಾಗಿ ಕಟುವಾಗಿ ನುಡಿದು ಕಟ್ಟಡವು ಬಿರಿಯುವಂತೆ ನಗಾಡಿ ಅಲ್ಲಿಂದ ತೆರಳಿದನು. ಹೋಗುವಾಗ "ಇದೇ ನಮ್ಮೀರ್ವರ ಕೊನೆಯ ಸಂದರ್ಶನ" ಎಂದು ಯಮದೂತಾಗಮನದ ಆಶ್ವಾಸನೆಯನ್ನು ಕೂಡ ಕೊಟ್ಟು ಹೋದನು.

ಬಸವರಾಜನಿಗೆ ಈ ಮಾತು ಕೇಳಿಸಲಿಲ್ಲ. ಪಾರ್ವತಿಯು ಕೇಳಿ ಭಯ ವಿಹ್ವಲಳಾದಳು. ಗಂಡನಿಗೆ ವಿಷಯವನ್ನು ತಿಳಿಸಿದಳು.

"ಹಾಗೆ ಹೇಳಿರಲಾರನು. ಹೇಳಿದರೂ ದೇವರು ಅವನಿಗೆ ಒಳ್ಳೆಯ ಬುದ್ಧಿಯೀಯುವಂತೆ ಪ್ರಾರ್ಥಿಸೋಣ" ಎಂದು ಹಿತನುಡಿದನು ಬಸವರಾಜ.

ಆ ರಾತ್ರಿ ಕಾಳರಾತ್ರಿ. ದುಷ್ಟರಾತ್ರಿ. ಮನುಷ್ಯನ ದೌಷ್ಟ್ಯವೆಲ್ಲವೂ ರೂಪುಗೊಂಡು ಕರ್ಕಶ ಕೃಷ್ಣವರ್ಣವನ್ನು ಬೀರಿದಂತೆ ಇದ್ದ ಭಯಂಕರ ರಾತ್ರಿ. ತಾರೆಗಳ ಮಿನುಗಿಲ್ಲ. ನಾಯಿಗಳ ದನಿಯಿಲ್ಲ. ಗೂಬೆಗಳ ಘೂಕಾರವೂ ಇಲ್ಲ. ಕಾಡಿಗೆ ಕಾಡೇ ಮೌನವಾಗಿ ಮುಖಮರೆಸಿಕೊಂಡಂತೆ ಇತ್ತು. ಕೃಷ್ಣಕಾರಸ್ತಾನವು ಕರಗಿ ಹರಿದಂತೆ ಕಗ್ಗತ್ತಲೆಯ ಮೊತ್ತ ಮಯಮಯವಾಗಿ ಬ್ರಹ್ಮಾಂಡವನ್ನೇ ನುಂಗಿ ಅರಗಿಸಿಕೊಂಡಿತ್ತು. ಒಂದು ಉಲ್ಕೆ ಮೋಡಗಳ ಎಡೆಯಲ್ಲಿ ಪ್ರಜ್ವಲಿಸಿ ಉರಿದುರಿದು ಆ ಭಯಂಕರತೆಗೆ ಬೀಭತ್ಸತೆಯನ್ನು ಬೀರಿ ದಕ್ಷಿಣ ದಿಗಭಿಮುಖವಾಗಿ ಜಗುಳಿಹೋಯಿತು. ಗೂಬೆಯೊಂದು ಅದನ್ನು ನೋಡಿ ಘೂಕಾರ ಮಾಡಿ ತಮೋಗರ್ಭದ ರುದ್ರಮೌನವನ್ನು ಭೇದಿಸಿ ಅದಕ್ಕಿನ್ನಷ್ಟು ಭಯವನ್ನು ಮೆತ್ತಿತ್ತು. ಈ ಅಪಸ್ವರ ಪರ್ವತ ಶ್ರೇಣಿಗಳಲ್ಲಿ ಕಾನನಾಂತರಗಳಲ್ಲಿ ತರಂಗ ತರಂಗವಾಗಿ ವ್ಯಾಪಿಸಿ ವಿಲಯರುದ್ರನ ತಾಂಡವ ನೃತ್ಯದ ಪದಹತಿಯಾಗಿ ಪರಿಣಮಿಸಿತು. ಸಾಂದ್ರತಮಸ್ಸು ಮತ್ತಷ್ಟು ಘನೀಭವಿಸಿ ಮಿಲಿಮಿಲಿಗುಟ್ಟಿತು.

ಮರುದಿನ ಬೆಳಗಾಯಿತು ವಿಧವೆ, ವಿರಹಿಣಿ, ರಾಜಮಡದಿ ಪಾರ್ವತಿ ಮೌನ ದುಃಖದಿಂದ ಅರಮನೆಯು ಕರಗುವಂತಾಯಿತು. ಅವಳಿಗೆ ದೇಹದ ಮೇಲೆ ಸ್ಮೃತಿಯಿರಲಿಲ್ಲ. ಮನದನ್ನನನ್ನು ಒಲಿದು ಬಂದವನನ್ನು ಕಳೆದುಕೊಂಡ ಆ ಜೀವ ಇನ್ನು ಬದುಕಿ ಮಾಡುವುದೇನು? ಆದರೆ ಜೀವ ಹೋಗಲೊಲ್ಲದು. ದಿನಗಳುರುಳಿದಂತೆ, ಅವಳ ಪ್ರಿಯ ಪತಿಗೂ ಅವಳಿಗೂ ಇದ್ದ ಅಂತರ ಹೆಚ್ಚು ಹೆಚ್ಚು ಆದಂತೆ, ಅವಳು ಉನ್ಮತ್ತಳಾಗುವಂತೆ ತೋರಿತು. ದಾಸಿಯರ ಉಪಚಾರ, ಸಹಾನುಭೂತಿ ನಿಷ್ಪ್ರಯೋಜನ. ಅವಳಿಗಂತಹ ಕಷ್ಟವನ್ನು ತಂದೊದಗಿಸಿದ ಸೌಂದರ್ಯ ಈಗ ಪ್ರೇತಕಳೆಗೆ ಎಡೆ ಕೊಟ್ಟಿದ್ದಿತು. ಪಾರ್ವತಿಯು ಈಗ ಎಲುಬಿನ ಗೂಡು, ಜೀವಚ್ಛವವಾಗಿದ್ದಳು. ಹತಭಾಗ್ಯೆಯ ದುಃಖವನ್ನು ಪರಮಾತ್ಮನೇ ಆಲಿಸಬೇಕಷ್ಟೆ.

ತಡಿಯಂಡಮೋಳುಗಿರಿಯ ಮೇಲೆ ವಿಹಾರಕ್ಕೆಂದು ಹೋಗಿದ್ದ ರಾಜ ದಂಪತಿಗಳ ಕಾಲು ಜಾರಿ ಅತಿ ಭೀಕರವಾದ ಆಳವಾದ ಕಂದರದಲ್ಲಿ ಬಿದ್ದು ದುರ್ಮರಣಕ್ಕೀಡಾದರೆನ್ನುವ ಭೀಷಣವಾರ್ತೆ ಮಡಿಕೇರಿಗೆ ಬಂದಿತು. ಶಿವರಾಜನ ಶೋಕದ ನಟನೆಯು ಸಮಯೋಚಿತವಾಗಿದ್ದಿತು. ಮಂತ್ರಿ ಶಿವರುದ್ರಪ್ಪನು ಮಗಳು ಅಳಿಯಂದಿರ ಈ ದುರ್ಮರಣಕ್ಕೆ ಅತಿಯಾಗಿ ದುಃಖಿಸಿದನು. ಅವನು ಉದ್ಯೋಗದಿಂದ ನಿವೃತ್ತನಾಗಲು ಅದೇ ಪೀಠಿಕೆಯಾಯಿತು. ಶಿವರಾಜನೂ ನೂತನಮಂತ್ರಿ ದೇವಯ್ಯನೂ ತಡಿಯಂಡಮೋಳುವಿನ ಭಯಂಕರ ಪ್ರಪಾತವನ್ನು ಪರೀಕ್ಷಿಸಿ ಮಕರಬಾಷ್ಪಗಳನ್ನು ಸುರಿಸಿದರು. ರಾಜದಂಪತಿಗಳ ಉತ್ತರಕ್ರಿಯೆಗಳನ್ನು ನಾಲ್ಕುನಾಡು ಅರಮನೆಯ ಸಮೀಪದ ಇಗ್ಗುತಪ್ಪ ಬೆಟ್ಟದಲ್ಲಿರುವ ಸುಬ್ರಹ್ಮಣ್ಯ ದೇವಾಲಯದಲ್ಲಿ ಶಿವರಾಜನು ನೆರವೇರಿಸಿದನು. ಒಂದೇ ವರ್ಷದಲ್ಲಿ ಸಂಸ್ಥಾನದ ನಾಲ್ಕು ವಜ್ರಗಳನ್ನು ಕಳೆದುಕೊಂಡು ಪ್ರಜೆಗಳು ಶೋಕಸಮುದ್ರದಲ್ಲಿ ಮುಳುಗಿದರು.

ಕಾಲವು ಮುಂದುವರಿಯಿತು. ಶಿವರಾಜನು ರಾಜನಾಗಿ ಅಭಿಷಿಕ್ತನಾದನು. ದೇವಯ್ಯನಿಗೆ ಮಂತ್ರಿಪದವಿಯು ಲಭಿಸಿತು. ರಾಜ್ಯಭಾರವು ಕಠಿಣ ದಕ್ಷತೆಯಿಂದ ಸಾಗಿತು.

ಪಾರ್ವತಿಯು ಮೊದಲನೆಯ ವಜ್ರಾಘಾತದಿಂದ ಪಾರಾದಳು. ಅವಳ ನಾಲ್ಕು ಜನ ಸೇವಕಿಯರು ಕರುಣೆಯಿಂದ ಭಕ್ತಿಯಿಂದ ಅವಳ ಸೇವೆ ಮಾಡಿದರು. ಶಿವರಾಜನೇ ಅವರನ್ನು ನೇಮಿಸಿದ್ದರೂ ಪಾರ್ವತಿಯ ಸದ್ಗುಣದಿಂದಲೋ ಅದೃಷ್ಟಶಕ್ತಿಯ ಪ್ರೇರಣೆಯಿಂದಲೋ ಅಥವ ಇವೆರಡರ ಹೊಂದಿಕೆಯಿಂದಲೋ ಆ ಸೇವಕಿಯರು ಅವಳಿಗೆ ಅತಿಪ್ರಿಯರಾಗಿದ್ದರು. ಅವಳ ದುಃಖದಲ್ಲಿ ಸಹಾನುಭೂತಿಯಿರುವವರಾಗಿದ್ದರು. ಪಾರ್ವತಿಯ ಮನಸ್ಸು ದಿನಗಳು ಕಳೆದಂತೆ ಸ್ತಿಮಿತಸ್ಥಿತಿಗೆ ಬರಲು ತೊಡಗಿತು. ಪತಿಯ ಭೌತಿಕ

ಶರೀರ ನಾಶವಾಗಿದ್ದರೂ ಅವನ ಜೀವ ತನ್ನನ್ನು ಪ್ರವೇಶಿಸಿ ಮೊದಲಿಗಿಂತ ಧೈರ್ಯ ಸಹನೆ ಶಕ್ತಿ ನೀಡಿರುವಂತೆ ಅವಳಿಗೆ ಅನ್ನಿಸುತ್ತಿತ್ತು. ಶಿವರಾಜನಂತಹ ಘೋರ ಪಾತಕಿಯ ವಿರುದ್ಧ ಸೇಡಿಗಾಗಿ ಅವಳ ಹೃದಯ ಹಾತೊರೆಯುತ್ತಿತ್ತು. ಸಿಂಹಾಸನದ ಮೇಲೆ ಭದ್ರವಾಗಿ ಮಂಡಿಸಿರುವ ಮತ್ತು ಸಶಸ್ತ್ರ ಸೈನ್ಯದ ಬೆಂಬಲವಿರುವ ಶಿವರಾಜ – ಸೆರೆಮನೆಯಲ್ಲಿ ನರಳುತ್ತಿರುವ ಅಬಲೆ ಮತ್ತು ಭಯವಿಹ್ವಲೆ ಸ್ತ್ರೀ. ಯಾರು ಯಾರ ವಿರುದ್ಧ ಸೇಡು ತೀರಿಸಿಕೊಳ್ಳುವುದು? ಆದರೆ ಮನಃಶಕ್ತಿಯ ಮುಂದೆ ದೃಢನಿರ್ಧಾರದ ಮುಂದೆ ಸಿಂಹಾಸನಗಳೂ ಉರುಳಲೇಬೇಕು. ಯಾವುದೂ ಸ್ಥಿರವಲ್ಲ.

ಶಿವರಾಜನು ರಾಜನಾಗಿ ಎರಡು ವರ್ಷಗಳು ಸಂದುವು. ಈ ಅವಧಿಯಲ್ಲಿ ಅವನು ಹಲವಾರು ಸಲ ಪಾರ್ವತಿಯ ಮನಸ್ಸನ್ನು ಅರಿಯಲು ಪರೋಕ್ಷವಾಗಿ ಪ್ರಯತ್ನಿಸಿದ್ದನು. ಆದರೆ ಅಲ್ಲಿ ಅವನಿಗೆ ತಿಲಮಾತ್ರ ಪ್ರವೇಶವೂ ದೊರೆಯಲಿಲ್ಲ. ಅಲ್ಲದೇ ಅವನ ವಿರುದ್ಧ ದ್ವೇಷಾಗ್ನಿಯನ್ನೇ ಅವಳು ಕಾರುತ್ತಿದ್ದಳು. ಇನ್ನೂ ಮುಹೂರ್ತ ಪಕ್ವವಾಗಿಲ್ಲ ಎಂದು ಅವನು ಭಾವಿಸುತ್ತಿದ್ದನು. ಸೇವಕಿಯರಿಗೆ, ಹೇಗಾದರೂ ಮಾಡಿ ಅವಳು ತನ್ನನ್ನು ಒಲಿಯುವಂತೆ ಮಾಡಬೇಕು ಎಂದು ಅವನ ಆಜ್ಞೆಯಿದ್ದಿತು. ರಾಜನ ಎದುರು ಅವರು ಈ ಸೂಚನೆಗೆ ಒಪ್ಪುತ್ತಿದ್ದರೂ ಆ ಸಾಧ್ವೀಮಣಿಯ ಮುಂದೆ ಅದರ ಕುರಿತು ಮಾತನ್ನೇ ಆಡುತ್ತಿರಲಿಲ್ಲ. ಪಾರ್ವತಿಯು ದೇವರಧ್ಯಾನ ಪತಿಯ ಸ್ಮರಣೆಗಳಲ್ಲಿ ತುರಂಗವಾಸವನ್ನು ಕಳೆಯುತ್ತಿದ್ದಳು. ಅದೇ ಸಮಯದಲ್ಲಿ ಅವಳ ಮನಸ್ಸು ಕಾಲ ದಿಗಂತವನ್ನು ಸಮೀಕ್ಷಿಸುತ್ತಿದ್ದಿತು.

ಒಂದು ದಿನ ಸುಪ್ರಭಾತ. ಇನ್ನೂ ಸರಿಯಾಗಿ ಬೆಳಕು ಹರಿದಿರಲಿಲ್ಲ. ಎಂದಿನಂತೆ ರಾಜಮಡದಿಯ ಇಬ್ಬರು ಸೇವಕಿಯರು ಅವರ ಮನೆಗೆ ಹೋಗಲು ಮುಂದಾದರು. ಅರಮನೆಯ ಅಂಗಳಕ್ಕಿಳಿದು ಆ ಪ್ರಾಕಾರದಿಂದ ಹೊರಗೆ ಹೋಗಲು ಇದ್ದ ಒಂದೇ ಒಂದು ದ್ವಾರದ ಸಮೀಪ ಹೋದರು. ತುರಂಗದ ಪಾಲಕ ಹನುಮಯ್ಯ ಪುನಃ ಅವನ ಅನುರಾಗದ ನುಡಿಯನ್ನು ಉದುರಿಸಿದನು.

"ಅದ್ಯಾಕೇ ಗೌರೀ ಹಾಂಗ್ಹೋಗ್ತಿಯಾ? ಏಟು ದಿವ್ಸ ನಾನಿನ್ನ ಕ್ರಿಪೆ ಕಾಯ್ಬೇಕೋ?"

ತಲೆಗಾಗಿ ಸೆರಗು ಹೊದೆದಿದ್ದ ಗೌರಿಯ ನಡೆಯಲ್ಲಿ ಹೊಸ ಚಂಚಲತೆ ಮೂಡಿತು. ಸೆರಗವನ್ನು ಇನ್ನೂ ಎಳೆದು ತಲೆಯನ್ನು ಹನುಮಯ್ಯನಿಂದ ದೂರ ತಿರುಗಿಸಿ "ಹ್ಞೂ" ಎಂದು ಹೇಳಿ ಸಾಗಿದಳು.

"ಸರಿಯಪ್ಪ ಯಾವಾಗ್ಲೂ ಇವಂದೊಂದೇ ಮಾತು, ಸೊಪ್ಪ ಸುಮ್ಕಿರೋ!" ಎಂದಳು ಜತೆಯ ಉಮ್ಮವ್ವ.

"ನೋಡ್ಗೌರಿ ಬ್ಯಾಕ್ನೆ ಮನಸ್ಮಾಡು" ಎಂದು ಆಶೆಯ ದೃಷ್ಟಿಯಿಂದ ಹನುಮಯ್ಯ ಗೌರಿಯ ನಡೆಯನ್ನೇ ನೋಡುತ್ತಿದ್ದನು. "ಈ ದಿನ ಇವ್ಳುಬಾಳ ಚಲ್ವೇನೂ ಚದ್ರೇನೂ ಆಗವ್ಳೆ" ಎಂದೂ ಅವನು ಹೇಳಿಕೊಂಡನು.

ಗೌರಿ ಹೋದಳು! ಗೌರಿಯೇನು ಪಾರ್ವತಿಯೇನು? ಹೆಸರಿನಲ್ಲೇನಿದೆ? ಗೌರಿಯ ಸೆರಗಿನ ಮರೆಯಲ್ಲಿ ಪಾರ್ವತಿಯು ನಿರ್ಗಮಿಸಿದಳು. ಹಕ್ಕಿಯು ಗೂಡಿನಿಂದ ಹಾರಿಹೋಯಿತು. ದ್ವಾರಪಾಲಕರು ದಿವಸಕ್ಕೆರಡು ಸಲ ಬದಲಾಗುತ್ತಿದ್ದರು. ಹನುಮಯ್ಯನ ಸರದಿ ಮುಗಿದು ಮುಂದಿನವನು ಬಂದಾಗ ಉಳಿದ ಸೇವಕಿಯರೂ ಅರಮನೆಯಿಂದ ಪಾರಾಗಿ ಹೋದರು.

ಮರುದಿನ ಬೆಳಗ್ಗೆ ಹನುಮಯ್ಯ ಗೌರಿಯ ದಾರಿ ಕಾದು ಕಾದು ಬೇಸತ್ತನು. ಮಧ್ಯಾಹ್ನವಾದರೂ ಅವಳ ಸುಳಿವಿಲ್ಲ, ಯಾರದೂ ಇಲ್ಲ. ಅವನು ಉದ್ವಿಗ್ನತೆಯಿಂದ ದ್ವಾರದ ಕದವನ್ನು ತನ್ನ ಹಿಂದೆ ಮುಚ್ಚಿ ಬೀಗ ಹಾಕಿಕೊಂಡು ಅರಮನೆಯ ಒಳಗೆ ಹೋಗಿ ಕರೆದನು, ಹುಡುಕಿದನು. ಆದರೆ ಹಾಳು ಅರಮನೆಯು ಅಣಕಿಸಿತು. ಅದರ ಗೋಡೆಗಳು ಅವನನ್ನು ಏಡಿಸುವಂತೆ ಗೊಂಗೊಂ ಎಂದುವು. ಹನುಮಯ್ಯನ ಮುಖ ಹನುಮಂತ ಚೇಷ್ಟೆಗಳನ್ನು ಪ್ರದರ್ಶಿಸಿತು. ಅರಮನೆಯು ಅವನನ್ನು ವಿಕಟವಾಗಿ ಛೇಡಿಸಿತು.

ಶಿವರಾಜನಿಗೆ ಸುದ್ದಿ ತಿಳಿದಾಗ ಸಾಯಂಕಾಲ ಮೀರಿದ್ದಿತು. ಅಂದರೆ ಆಗ ಹಕ್ಕಿಗೆ ಸ್ವಾತಂತ್ರ್ಯ ದೊರೆತು ಒಂದೂವರೆ ದಿವಸ ಮೀರಿಹೋಗಿದ್ದಿತು. ಪಾರ್ವತಿಯನ್ನು ಹುಡುಕಿಸಲು ಅವನು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದವು. ಸನ್ಮಾರ್ಗದಲ್ಲಿದ್ದ ಅವಳನ್ನು ದೇವರು ರಕ್ಷಿಸಿದ್ದನು. ಹೋದರೆ ಹೋಗಲಿ, ತೊಲಗಿ ಹೋಗಲಿ ಎನ್ನುವ ಮನೋಭಾವದಿಂದ ಪಾರ್ವತಿಯ ಪ್ರಕರಣವನ್ನು ಶಿವರಾಜನು ತನ್ನ ಮನಸ್ಸಿನಲ್ಲಿ ಸಂಪೂರ್ಣವಾಗಿ ಮುಕ್ತಾಯಗೊಳಿಸಿದನು.

ಯೌವನದ ದುರಾಶೆ, ಆ ದುರಾಶೆಯ ಪರಿಣಾಮವಾಗಿ ಮಾಡಿಸಿದ ಬಸವರಾಜನ ಕೊಲೆ, ಪಾರ್ವತಿಯ ಮೇಲಿನ ದುಷ್ಟ ವ್ಯಾಮೋಹ – ಇವುಗಳ ಹೊರತು ಶಿವರಾಜನು ಯೋಗ್ಯನಾಗಿದ್ದನು. ಈ ದುರ್ಗುಣಗಳೇನೂ ಸಾಮಾನ್ಯವಲ್ಲ. ಆದರೆ ಹೇಗೋ ಕಾಲಾಂತರದಲ್ಲಿ ಶಿವರಾಜನು ಅವುಗಳನ್ನು ಮರೆತನು, ಮರೆಯುವುದು ಆವಶ್ಯಕವಾಯಿತು – ಬಸವರಾಜನು ಉಳಿದಿರಲಿಲ್ಲ, ಪಾರ್ವತಿಯು ಕಣ್ಮರೆಯಾಗಿದ್ದಳು, ಶಿವರಾಜನೇ ರಾಜನಾಗಿದ್ದನು. ಶಿವರಾಜನ ಜೀವನಗ್ರಂಥದ ಪ್ರಥಮಾಧ್ಯಾಯ ಹೀಗೆ ದೌಷ್ಟ್ಯದಿಂದ ಕ್ರೌರ್ಯದಿಂದ ಕೂಡಿದ್ದಿತು. ಆದರೆ ಹಿಂದಿನ ದಿನಗಳಲ್ಲಿ ಇಂತಹ ಕೊಲೆ ಪಿತೂರಿಗಳು ರಾಜಮನೆತನಗಳಲ್ಲಿ, ಶ್ರೀಮಂತರ ಕುಟುಂಬಗಳಲ್ಲಿ ಸ್ವಾಭಾವಿಕವಾಗಿದ್ದುವು. ರಾಜ್ಯಭಾರದಲ್ಲಿ ನಿರತನಾಗಿ ತನ್ಮಯನಾಗಿದ್ದ ಶಿವರಾಜನು ಉದಾರಿಯೂ ಯೋಗ್ಯನೂ ಆದ ಪ್ರಭು ಎಂದೆನ್ನಿಸಿಕೊಂಡನು. ಕೊಡಗು ಸಂಸ್ಥಾನವನ್ನು ಇನ್ನಷ್ಟು ಯೋಗ್ಯತೆಯಿಂದ ಆಳುತ್ತಿದ್ದನು. ಆತನ ಆಳ್ವಿಕೆಯಲ್ಲಿ ಪಿತೂರಿಗಾರರ, ರಾಜದ್ರೋಹಿಗಳ ಬೇಳೆ ಬೇಯುವಂತಿರಲಿಲ್ಲ, ನೆರೆ ರಾಜ್ಯಗಳ ರಾಜರು ಅವನ ಸ್ನೇಹ ಬೆಳೆಸಿಕೊಂಡರು. ವಾಣಿಜ್ಯ ವ್ಯಾಪಾರಗಳು ಸುಗಮವಾಗಿ ಸಾಗುತ್ತಿದ್ದುವು. ಕಳ್ಳರ ದರೋಡೆಗಾರರ ಆಟ ಕೊಡಗು ಸಂಸ್ಥಾನದಲ್ಲಿಯೇ ನಡೆಯುತ್ತಿರಲಿಲ್ಲ. ಸಮೃದ್ಧಿಯ ಬೀಡು ಕೊಡಗು ದೇಶವಾಯಿತು.

ಶಿವರಾಜನಿಗೆ ನೆಲದ ಹಂಬಲ ಎಂದೂ ಹಿಂಗುತ್ತಿರಲಿಲ್ಲ. ಅವನ ರಾಜ್ಯವು ಹೆಚ್ಚು ಹೆಚ್ಚು ವಿಸ್ತಾರವಾದಂತೆ, ಅವನಿಗೆ ಮಣಿಯುತ್ತಿದ್ದ ಸಾಮಂತ ಭೂಪಕೀಟಗಳು ಅಧಿಕ ಸಂಖ್ಯೆಯಲ್ಲಿ ಬೆಳೆದಂತೆ ಅವನ ದುರಾಶೆಯೂ ಹಿಗ್ಗುತ್ತಿತ್ತು. ವಿಶಾಲ ಕೊಡಗಿನ ಕನಸನ್ನು ಅವನು ಕಾಣುತ್ತಿದ್ದನು. "ಕಾವೇರಿಯಿಂದಮಾನೇತ್ರಾವತಿವರಮಿರ್ದ ನಾಡದಾ" ಕೊಡಗನ್ನು "ಕಾವೇರಿಯಿಂದ ಮಾಗೋದಾವರಿ"ವರೆಗೂ ವಿಸ್ತರಿಸಬೇಕೆಂದು ಅವನ ಉತ್ಕಟೇಚ್ಛೆಯಾಗಿದ್ದಿತು, ಇಂತಹ ಆಶಯವನ್ನು ಪ್ರತ್ಯಕ್ಷಗೊಳಿಸಲು ತಕ್ಕ ಸಾಮರ್ಥ್ಯ ತೋಳಬಲ್ಮೆ ರಣೋತ್ಸಾಹ ಸೈನ್ಯಬಲ ಎಲ್ಲವೂ ಅವನಲ್ಲಿದ್ದುವು.

ಪೂರ್ವ, ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕೊಡಗು ಸಂಸ್ಥಾನವು ಇನ್ನು ವ್ಯಾಪಿಸುವಂತಿರಲಿಲ್ಲ. ದಕ್ಷಿಣದ ಭಾಗದಲ್ಲಿದ್ದ ಮಲೆಯಾಳ ಪ್ರದೇಶವನ್ನು ಆಕ್ರಮಿಸಿ ಪಡುಕರಾವಳಿಯನ್ನು ಸ್ವಾಧೀನಪಡೆಯಬೇಕು ಎಂದು ರಾಜನು ನಿರ್ಧರಿಸಿದನು.

ಮುಂದಿನ ಬೇಸಗೆಯಲ್ಲಿ ದಿಗ್ವಿಜಯ ಯಾತ್ರೆಯು ಹೊರಟಿತು. ಹತ್ತು ಸಾವಿರ ಸೈನಿಕರಿಂದ, ರಾವುತರಿಂದ, ಮಾವುತರಿಂದ ಪ್ರಬಲವಾದ ಮಹಾಸೇನೆಯು ಮಲೆಯಾಳದ ಕಡೆಗೆ ಸಾಗಿತು. ಆ ಸೈನಿಕರ ಕ್ರಮಬದ್ಧವಾದ ನಡಿಗೆಯಿಂದ, ಆ ನಡಿಗೆಯಿಂದ ಮೇಲೆದ್ದ ಧೂಳಿನಿಂದ, ಅದರ ಘೋಷದಿಂದ ಒಂದು ದೊಡ್ಡ ನದಿಯು ಪ್ರವಾಹದಲ್ಲಿ ಹರಿದು ಬರುತ್ತಿದೆಯೇ ಅದರ ತರಂಗಗಳು ಗಗನಾಭಿಮುಖವಾಗಿ ಚಾಚುತ್ತಿವೆಯೇ ಎಂದು ಜನರು ಭ್ರಮಿಸಿದರು. ಸೈನ್ಯವು ಸಾಗಿಹೋದ ಗ್ರಾಮಗಳ ಜನರೆಲ್ಲರೂ ರಾಜನಿಗೆ ಸ್ವಾಗತವನ್ನು ಬಯಸಿದರು. ವಿಜಯವನ್ನು ಪ್ರಾರ್ಥಿಸಿದರು. ಶ್ರೀಮಂಗಲನಾಡನ್ನು ದಾಟಿ ಸೇನೆಯು ಮುಂದುವರಿಯಿತು. ಸೈನಿಕರು ಆನಂದಘೋಷದಿಂದ ದಿಗ್ಭಿತ್ತಿಗಳು ಬಿರಿಯುವಂತಾದುವು. ಸಾಮಾನ್ಯ ಶತ್ರು ಈ ಘೋಷದಿಂದಲೇ ಹೆದರಿ ಶರಣಾಗತನಾಗುತ್ತಿದ್ದನು. ಆದರೆ ಮಲೆಯಾಳದ ಅರಸರು ಸಾಮಾನ್ಯರಾಗಿರಲಿಲ್ಲ. ಅಂತೆಯೇ ಶಿವರಾಜನು ಅಷ್ಟು ದೊಡ್ಡ ಸೈನ್ಯವನ್ನು ಅಷ್ಟು ಕ್ರಮದಿಂದ ಮುನ್ನಡೆಸಿ ಕರೆದುಕೊಂಡು ಹೋಗುತ್ತಿದ್ದುದಾಗಿತ್ತು.

ಮಲೆಯಾಲದ ಅರಸನು ಕೇರಳವರ್ಮರಾಮ. ಅವನು ಅಸಾಮಾನ್ಯ ವೀರನಾಗಿದ್ದನು. ಮೊದಲಿನಿಂದಲೂ ಕೊಡಗಿನ ಅರಸರಿಗೂ ಕೇರಳದ ಅರಸರಿಗೂ ವೈಮನಸ್ಸು ಬೆಳೆದು ಬಂದಿತ್ತು. ಆದರೆ ಕೇರಳ ದೇಶದ ವಿರುದ್ಧದ ಯುದ್ಧದಲ್ಲಿಯ ಕಠಿಣತೆಗಳನ್ನು ಅರಿತ ಕೊಡಗು ರಾಜರು ಆ ಕಡೆ ಹೋಗಿರಲಿಲ್ಲ. ಮಲೆಯಾಳದ ಅರಸರಲ್ಲಿ ಐಕಮತ್ಯ ಇಲ್ಲದಿದ್ದುದರಿಂದಲೂ, ಕೊಡಗು ದೇಶ ಬೆಟ್ಟಗುಡ್ಡ ಕಣಿವೆಗಳಿಂದ ಕೂಡಿದ್ದು ವರ್ಷದ ಆರು ತಿಂಗಳುಗಳಲ್ಲಿ ದುರ್ಗಮವಾಗಿದ್ದುದರಿಂದಲೂ ಅವರು ಈ ಕಡೆಗೆ ಯುದ್ಧಕ್ಕಾಗಿ ಮುಂದುವರಿದುಬರುತ್ತಿರಲಿಲ್ಲ. ಕಾಲಕ್ರಮೇಣ ವೈಮನಸ್ಸು ವರ್ಧಿಸುತ್ತಲೇ ಬಂದಿತ್ತು. ಗಡಿಯಲ್ಲಿ ಸಣ್ಣ ಪುಟ್ಟ, ಕದನಗಳು ಆಗಾಗ ನಡೆಯುತ್ತಿದ್ದುವು. ಮನಸ್ಸಿನ ಹುಳುಕು ಹೀಗೆ ಒಮ್ಮೊಮ್ಮೆ ಹೊರಗೆ ಬರುತ್ತಿದ್ದಿತು.

ಶಿವರಾಜನು ಕೊಡಗು ಸಂಸ್ಥಾನಾಧಿಪತಿ ಆದಾಗ ಕೇರಳವರ್ಮನು ಮಲೆಯಾಳದ ರಾಜನಾಗಿದ್ದನು. ಅವನು ಇಡಿಯ ಕೇರಳ ದೇಶವನ್ನು ಏಕಚ್ಛತ್ರಾಧಿಪತ್ಯದಲ್ಲಿ ತಂದಿದ್ದನು. ನೆರೆಯ ರಾಜರಿಗೆ ಎಂದೂ ಮಣಿಯದ ದಿಟ್ಟನೂ ಧೀರನೂ ಆಗಿದ್ದನು. ಇವನಿಗೆ ಶಿವರಾಜನ ಯುದ್ಧ ಯಾತ್ರೆಯು ಸ್ವಾಗತಾರ್ಹವಾದ ಆಮಂತ್ರಣವಾಯಿತು. ಇವನೂ ಸೈನ್ಯಗಳನ್ನು ಸಜ್ಜುಗೊಳಿಸಿದನು. ಮಲೆಯಾಳಿಗಳ ಶಕ್ತಿ ಸಾಮರ್ಥ್ಯಗಳನ್ನು ಈ ಕೊಡಗರಿಗೆ ತೋರಿಸಿಬಿಡಬೇಕು, ಅವರನ್ನು ಹಿಂದಕ್ಕೆ ಅಟ್ಟಿಬಿಡಬೇಕು, ಮಾತ್ರವಲ್ಲ ಅವರ ಬೆಂಬತ್ತಿ ಸಾಗಿ ಆ ದೇಶವನ್ನೂ ಆಕ್ರಮಿಸಿ ಬಿಡಬೇಕು ಎಂದು ಕೇರಳವರ್ಮನು ಬಗೆದಿದ್ದನು.

ಹೀಗೆ ಶಿವರಾಜನ ಸೈನ್ಯದ ಉತ್ಸಾಹವೇರುತ್ತ ಏರುತ್ತ ಮುಂದೆ ಮುಂದೆ ನಡೆದಂತೆ ಕೇರಳವರ್ಮನ ಅದಟೂ ಉಕ್ಕೇರುತ್ತಿದ್ದಿತು. ಎರಡು ಸೈನ್ಯಗಳಿಗೂ ವೈನಾಡಿನ ವಿಶಾಲವಾದ ಬಯಲಿನಲ್ಲಿ ಢಕ್ಕಾಢಿಕ್ಕಿಯಾಯಿತು. ಯುದ್ಧ ಕಹಳೆಯು ಮೊಳಗಿ ಮಹಾಹವ ತಾಂಡವಿಸಿತು. ಕೇರಳವರ್ಮನ ಪ್ರತಿರೋಧ ತೀಕ್ಷ್ಣವಾಗಿದ್ದಿತು. ಯುದ್ಧವು ಒಂದು ತಿಂಗಳ ಕಾಲ ಭೀಕರವಾಗಿ ಅತಿ ಭೀಷಣವಾಗಿ ನಡೆಯಿತು. ಇಂತಹ ಪ್ರಬಲ ಶತ್ರುವನ್ನು ಶಿವರಾಜನು ಅದುವರೆಗೆ ಎಲ್ಲಿಯೂ ಎದುರಿಸಿರಲಿಲ್ಲ. ಕೊಡಗುರಾಜನು ಕಡೆಯಲ್ಲಿ ಐದಾರು ಸಾವಿರ ಯೋಧರು ಈಗಾಗಲೇ ಹತರಾಗಿ ಹೋಗಿದ್ದರು. ನೂರಿನ್ನೂರು ಆನೆಗಳೂ ಸಾವಿರದಷ್ಟು ಕುದುರೆಗಳೂ ಮಡಿದಿದ್ದುವು, ಕೇರಳವರ್ಮನಿಗೆ ಇದರ ಇಮ್ಮಡಿ ನಷ್ಟವಾಗಿದ್ದಿತು ಮಡಿದ ಸೈನಿಕರ ಸ್ಥಾನಗಳನ್ನು ತುಂಬಲು ಹಿಂದಿನಿಂದ ಹೊಸ ಸೈನ್ಯ ಸಿದ್ಧವಾಗಿ ಬರುತ್ತಿತ್ತು. ನರಹತ್ಯೆ ಮಾತ್ರ ಅವ್ಯಾಹತವಾಗಿ ಸಾಗುತ್ತಿತ್ತು. ಕಾಲನ ಕ್ರೂರ ಚಕ್ರಪತಿ ಆವರ್ತನದಲ್ಲಿಯೂ ನೂರಾರು ಜೀವಗಳನ್ನು ಬಲಿತೆಗೆದುಕೊಳ್ಳುತ್ತಿತ್ತು. ಒಂದು ತಿಂಗಳು ಮೀರಿದರೂ ವಿಜಯಶ್ರೀ ಯಾರಿಗೆ ಒಲಿಯುತ್ತಾಳೆ ಎಂಬುದು ಇತ್ಯರ್ಥವಾಗಿರಲಿಲ್ಲ. ರಣರಂಗಕ್ಕೆ ಅವಳ ಪ್ರವೇಶವೇ ಇನ್ನೂ ಆಗಿರಲಿಲ್ಲವೋ, ಅವಳ ಆವಾಹನೆಗೆ ತಕ್ಕಷ್ಟು ರಕ್ತಪ್ರವಾಹ ಹರಿದಿರಲಿಲ್ಲವೋ ಎಂದು ತೋರುತ್ತಿತ್ತು. ಎರಡು ಪಕ್ಷಗಳಲ್ಲಿಯೂ ಉತ್ಸಾಹ ಜಗ್ಗಲಿಲ್ಲ. ಮಡಿದವರು ಮಡಿದರು. ನಶ್ವರ ದೇಹಗಳನ್ನು ತೊರೆದೆಸೆದು ವೀರಸ್ವರ್ಗದಲ್ಲಿ ಶಾಶ್ವತ ಶರೀರಗಳನ್ನು ಹೊಂದಿದರು. ಉಳಿದವರ ಪವಿತ್ರ ಕರ್ತವ್ಯ ಆ ಹೋದವರ ಸಮಾಧಿಗಳ ಮೇಲೆ ವಿಜಯದ ಪತಾಕೆಯನ್ನು ಸ್ಥಾಪಿಸುವುದು ಯುದ್ಧವು ಎಡೆಬಿಡದೆ ಸೂರ್ಯೋದಯದಿಂದ ಸೂರ್ಯಾಸ್ತಮಾನದ ತನಕ ಪ್ರತಿದಿನವೂ ಭಯಂಕರವಾಗಿ ನಡೆಯಿತು. ಯಾವ ಇತ್ಯರ್ಥವೂ ಆಗದೆ ಮರಳಬೇಕಾಗುವುದೋ ಎಂದು ಶಿವರಾಜನು ಚಿಂತಾಕ್ರಾಂತನಾದರೆ ಶತ್ರುವಿನ ಬೆನ್ನಟ್ಟಿ ಹೋಗುವುದು ಅಶಕ್ಯ, ಆದರೆ ಅವನಿಗೆ ಶಾಶ್ವತವಾದ ಪಾಠ ಕಲಿಸಿ ಇನ್ನೆಂದೆಂದೂ ಈ ಕಡೆ ಇಣಿಕಿಯೂ ನೋಡದಂತೆ ಮಾಡಿಬಿಡಬೇಕೆಂದು ಕೇರಳವರ್ಮನು ಛಲತೊಟ್ಟಿದ್ದನು. ಕಾಳೆಗವು ಮರಣ ಕರ್ಕಶವಾಗಿ ರುದ್ರಭೀಷಣವಾಗಿ ಮುನ್ನಡೆಯಿತು.

ಯುದ್ಧರಂಗದಲ್ಲಿ ಗಾಯಗೊಂಡ ಸೈನಿಕರಿಗೆ ಸಾಯಲು ಬಿದ್ದಿದ್ದ ವೀರಯೋಧರಿಗೆ ಸಹಾಯಮಾಡಲು ಶಾಂತಿ ಶಿಬಿರದ ಮಹಿಳೆಯರು ಮುಂದಾಗುತ್ತಿದ್ದರು. ಅವರೆಲ್ಲರೂ ಸಂಸಾರಬಂಧನಮುಕ್ತೆಯರಾದ ವೀರವನಿತೆಯರು, ಕೇರಳದೇಶಿಯರ ಸಂಕೇತವಾದ ಸರಳ ಶುಭ್ರ ಶ್ವೇತ ವಸ್ತ್ರ ಧರಿಸಿಕೊಂಡು ಯುದ್ಧರಂಗದಲ್ಲಿ ನಿರ್ಭೀತಿಯಿಂದ ಅಡ್ಡಾಡುತ್ತಿದ್ದರು. ಯುದ್ಧ ಸಾಗುತ್ತಿದ್ದಂತೆ ಬಿದ್ದ ಸೈನಿಕರನ್ನು ಸಾಗಿಸಲು ಅವರು ಮುಂದೆ ಮುಂದೆ ಹೋಗುತ್ತಿದ್ದರು. ಆ ರಮಣೀಮಣಿಯರು ಹೀಗೆ ಹೋಗುವಾಗ ಉಭಯ ಪಾರ್ಶ್ವಗಳ ಸೈನಿಕರೂ ಅವರನ್ನು ಮರ್ಯಾದೆಯಿಂದ ಕಾಣುತ್ತಿದ್ದರು, ಭಗವಂತನ ದೂತರಂತೆ – ಅಂತಕನ ದೂತರಂತೆ ಅಲ್ಲ – ಅವರು ಮರಣೋನ್ಮುಖ ಸೈನಿಕರತ್ತ ಹೋಗಿ ಅವರನ್ನು ಯುದ್ಧರಂಗದಿಂದ ದೂರದ ಶಿಬಿರಕ್ಕೆ ಕೊಂಡೊಯ್ಯುತ್ತಿದ್ದರು. ನೆತ್ತರಿನ ಕಲೆಗಳಿಂದ ಇನ್ನಷ್ಟು ಕೆಂಪಾಗಿ ತೋರುತ್ತಿದ್ದ ಆ ಸ್ತ್ರೀಯರ ಶ್ವೇತಾಂಬರಗಳು ಸೈನಿಕರ ಮಧ್ಯೆ ಅಲೆದಾಡುತ್ತಿದ್ದಾಗ ಝಂಝಾವಾತದಿಂದ ಕ್ಷೋಭೆಗೊಂಡಿರುವ ಸರೋವರದ ಮೇಲೆ ತರಂಗಗಳೊಡನೆ ಒಂದಾಗಿ ಮೇಲೇರಿ ಕೆಳಗಿಳಿದು ಶಾಂತವಾಗಿ ತೇಲುವ ರಾಜ ಹಂಸಗಳನ್ನು ನೆನಪಿಗೆ ತರುತ್ತಿದ್ದುವು.

ಶಾಂತಿ ಶಿಬಿರದ ಸ್ವಯಂಸೇವಕಿಯರೆಲ್ಲರೂ ಕೇರಳ ಸ್ತ್ರೀಯರಾಗಿದ್ದರೂ ಅವರಿಗೆ ಕೇರಳವರ್ಮನ ಸೈನಿಕರು, ಶಿವರಾಜನ ಸೈನಿಕರು ಎನ್ನುವ ಭೇದವಿರಲಿಲ್ಲ. ಪರಮಾತ್ಮನ ದೃಷ್ಟಿಯಲ್ಲಿ ಈ ಭೇದವಿಲ್ಲ. ಅವರ ಈ ನಿಸ್ಪೃಹವರ್ತನೆಯಿಂದ ಅವರು ಉಭಯ ಪಕ್ಷಗಳ ಕೃತಜ್ಞತೆಗೂ ಪಾತ್ರರಾಗಿದ್ದರು. ಅತ್ಯಂತ ಅಪಾಯಕಾರಿಯಾದ ಅವರ ಕಾರ್ಯವನ್ನು ಸ್ವಾರ್ಥರಹಿತ ಸ್ತ್ರೀಯರಿಗೆ ಮಾತ್ರ ಸಾಧ್ಯವಾಗಬಹುದಾದ ದಿವ್ಯ ಮಾತೃಭಾವದಿಂದಲೂ ಪವಿತ್ರ ಪ್ರೇಮದಿಂದಲೂ ಅವರು ನೆರವೇರಿಸುತ್ತಿದ್ದರು. ಎಲ್ಲಿ ದಾರಿದ್ರ್ಯವಿದೆಯೋ ಎಲ್ಲಿ ದುಃಖವಿದೆಯೋ ಅಲ್ಲಿ ಶಾಂತಿ ಶಿಬಿರದ ಸ್ತ್ರೀಯರು ಸೇವೆಗಾಗಿ ಸಿದ್ಧರಾಗುತ್ತಿದ್ದರು. ಯುದ್ಧವು ಎಷ್ಟೇ ತಿರಸ್ಕೃತವಾದರೂ ಯುದ್ಧದ ವಿಷಯದಲ್ಲಿ ಮಾತ್ರ ಅವರ ಸಲಹೆಯನ್ನು ಯಾವ ರಾಜನೂ ಸ್ವೀಕರಿಸುತ್ತಿರಲಿಲ್ಲ. ಯುದ್ಧ ನಡೆಯುವಲ್ಲಿ ಅವರ ಪವಿತ್ರ ಕಾರ್ಯವಿದ್ದೇ ಇದೆ. ಈ ಉದಾರದೃಷ್ಟಿಯಿಂದ ಶಾಂತಿಶಿಬಿರವು ಯುದ್ಧರಂಗದ ಸಮೀಪ ಬೀಡು ಬಿಟ್ಟಿತ್ತು.

ಶಾಂತಿ ಶಿಬಿರದ ಅಧ್ಯಕ್ಷೆ, ಸಂಸ್ಥಾಪಿಕೆ ಮಹಾಮಾತೆಯೆಂದು ಎಲ್ಲರಿಗೂ ಗೊತ್ತಿತ್ತು. ಅದು ಅವಳ ಹೆಸರಲ್ಲ. ಮಾದೈ (ಮಹಾತಾಯಿ, ಮಾದಾಯಿ, ಮಾದೈ) ಎಂದು ಎಲ್ಲರೂ ಅವಳನ್ನು ಗೌರವ ಪ್ರೀತಿಗಳಿಂದ ಕರೆಯುತ್ತಿದ್ದರು. ಸ್ಥಿರತೆಯು, ಶಾಂತಿಯು, ಸಹನೆಯು, ಕರುಣೆಯ ಮೂರ್ತಿಯಾಗಿದ್ದ ಮಾದೈಯು ಆ ಶಿಬಿರದ ಜೀವನಾಡಿ, ಜೀವಾಳ. ಅವಳಿಂದ ರೂಪುಗೊಂಡುದು ಶಿಬಿರ. ಅವಳ ಮುಂದಾಳುತನದಲ್ಲಿ ಶಿಬಿರ ಅಂತಹ ಯೋಗ್ಯ ಕಾರ್ಯವನ್ನು ಅಷ್ಟು ಪರಿಷ್ಕಾರವಾಗಿ ನಿರ್ವಹಿಸುತ್ತಿದ್ದಿತು. ಸೈನಿಕರ ಶೌರ್ಯಧೈರ್ಯಗಳಿಂದ, ಬಿಲ್ಲುಬಾಣಗಳಿಂದ, ಖಡ್ಗ ಭರ್ಜಿಗಳಿಂದ ಆಗದ ಕಾರ್ಯವನ್ನು ಶಿಬಿರದ ಸ್ತ್ರೀಯರು ತಮ್ಮ ಸಾಂತ್ವನ ಕ್ರಿಯೆಗಳಿಂದ ನಿರ್ವಹಿಸುತ್ತಿದ್ದರು. ಸೈನಿಕರದು ನಾಶಕಾರ್ಯ. ಈ ಸ್ತ್ರೀ**ಯರ**ದು ರಚನಾತ್ಮಕ ಕಾರ್ಯ. ಮಾದೈಯು ಬಿಲ್ಲುಗಳಿಂದ ಚಿಮ್ಮುವ ಬಾಣಗಳಿಗಿಂತ ತೀವ್ರಗತಿಯಿಂದ ಉಭಯ ಕ್ಷೇತ್ರಗಳ ಮಧ್ಯೆ ಸಂಚರಿಸುತ್ತ ಶಿಬಿರದ ಕಾರ್ಯಗಳ್ನು ದಿಗ್ದರ್ಶಿಸುತ್ತಿದ್ದಳು. ಸಾಯುವ ಸೈನಿಕನಿಗೆ ಮಾದೈಯನ್ನು ಕಂಡರೆ ಸುಖಕರವಾದ ಸಾವು ಒದಗುತ್ತಿತ್ತು. ಎಂತಹ ವೇದನೆಯಿಂದ ನರಳುವ ಸೈನಿಕನಾದರೂ ಮಾದೈ ಬಂದು ಮೃದುವಾಗಿ ಮಾತಾಡಿ ಮೈ**ದಡವಿ**ದರೆ ಅವನು ಆ ನೋವನ್ನು ಮರೆತು ಹಸನ್ಮುಖಿಯಾಗುತ್ತಿದ್ದನು. ಆಕೆಯ ದಿವ್ಯ ಶರೀರವಿಡೀ ಸಹನೆ ಪ್ರೇಮಗಳಿಂದ ಕಡೆದು ಮಾಡಿದಂತಿತ್ತು.

ಶಾಂತಿ ಶಿಬಿರದ ಅಧ್ಯಕ್ಷೆಗೆ ಎರಡು ಬಣಗಳ ರಾಜರುಗಳವರೆಗೂ ಯಾವಾಗ ಬೇಕಾದರೂ ಪ್ರವೇಶವಿದ್ದಿತು; ಅವಳು ಈ ಯುದ್ಧವನ್ನು ನಿಲ್ಲಿಸಬೇಕೆಂದು ಕೇರಳವರ್ಮ ರಾಜನಿಗೂ ಶಿವರಾಜನಿಗೂ ಪರಿಪರಿಯಾಗಿ ಬೋಧಿಸಿದಳು. ಆದರೆ ಮನುಷ್ಯನ ಹಠವಿದೆಯಲ್ಲ, ಗಂಡಸುತನ ಎನ್ನುವ ದುರಭಿಮಾನ, ಯುದ್ಧವಿನ್ನೂ ಕ್ರೂರವಾಗಿ ಎಲ್ಲರಿಗೂ ಗರ ಬಡಿದಂತೆ ಸಾಗಿತು. ಒಂದು ತಿಂಗಳಿನ ಯುದ್ಧ ಈಗ ಎರಡು ತಿಂಗಳಾದರೂ ಕೊನೆಗೊಳ್ಳುವಂತೆ ತೋರಲಿಲ್ಲ. ಎರಡು ಸೈನ್ಯಗಳ ಮೃತರ ಸಂಖ್ಯೆ ಸೇರಿಸಿದರೆ ಅದು ಹತ್ತು ಸಾವಿರವನ್ನು ಮೀರುತ್ತಿತ್ತು. ಆದರೆ ವಿವೇಕೋದಯ ಯಾವ ರಾಜನಿಗೂ ಮೂಡಿದಂತೆ ತೋರಲಿಲ್ಲ. ದಿನದಿಂದ ದಿನಕ್ಕೆ ಯುದ್ಧ ಸುರಾಪಾನದಿಂದ ಅವರು ಹೆಚ್ಚು ಹೆಚ್ಚು ಉನ್ಮತ್ತರಾಗುತ್ತಿದ್ದರು.

ಒಂದು ದಿನ ಸಾಯಂಕಾಲ. ದಿನದ ಯುದ್ಧ ಮುಕ್ತಾಯವಾಗಲು ಇನ್ನು ಸ್ವಲ್ಪ ಹೊತ್ತು ಮಾತ್ರವಿತ್ತು. ಕೇರಳವರ್ಮನ ಸೈನ್ಯದ ಒಂದು ಪಡೆಯ ನಾಯಕನು ಶತ್ರುವಿನ ಬಾಣ ಎದೆಗೆ ತಗುಲಿ, ಕುದುರೆಯಿಂದ ಬಿದ್ದನು. ಬಿದ್ದವನ ಮೇಲೆ ಮತ್ತೆರಡು ಬಾಣಗಳು ಬಿದ್ದುವು. ಅವನಿಗೆ ಏಳಲಾಗಲಿಲ್ಲ. ಅಲ್ಲಿಗಾಗಿ ಹೋಗುತ್ತಿದ್ದ ಮಾದೈಯು ಅವನನ್ನು ಶಾಂತಿಶಿಬಿರಕ್ಕೆ ಸಾಗಿಸಲು ಏರ್ಪಾಡು ಮಾಡಿದಳು. ಅವನಿಗಿನ್ನೂ ಪ್ರಾಣಹೋಗಿರಲಿಲ್ಲ. ಆ ಪ್ರಾಣಾಂತಿಕ ವೇದನೆಯಲ್ಲಿ ಅವನು ಉಡಿಯಿಂದ ಏನನ್ನೋ ತೆಗೆದು ಮಾದೈಯ ಕೈಗೆ ಕೊಟ್ಟನು, ಬಾಯಿಯಿಂದ ಏನನ್ನೋ ಹೇಳಲು ತೊಡಗಿದನು "ಕೇರಳವರ್ಮ ರಾಜರಿಗೆ...." ಎಂದು ಕೇಳಿಸಿತು, ಅಷ್ಟರಲ್ಲಿಯೇ ಅವನು ಮೃತಿಹೊಂದಿದ್ದನು. ಕೈಗೆ ದೊರೆತ ಕಾಗದದ ಸುರುಳಿಯನ್ನು ಮಾದೈಯು ಭದ್ರವಾಗಿ ಉಡಿಯಲ್ಲಿಟ್ಟುಕೊಂಡಳು. ಅಂದಿನ ಯುದ್ಧವು ಮುಗಿಯಿತು. ಆ ದಿನದ ಮಟ್ಟಿಗೆ ತಮ್ಮ ಆಯುಷ್ಯವು ಸ್ಥಿರವಾದುದಕ್ಕೆ ಸೈನಿಕರು ಸಂತೋಷದಿಂದ ತಮ್ಮ ತಮ್ಮ ಶಿಬಿರಗಳಿಗೆ ಮರಳಿದಳು.

ಸಾವಕಾಶವಾಗಿ ಮಾದೈಯು ಆ ಕಾಗದವನ್ನು ಓದಿದಳು. ಓದಿ ಸ್ವಲ್ಪ ಅಸ್ಥಿರಳಾದಳು. ಪುನಃ ಪುನಃ ಅದನ್ನು ಓದಿ ಸರಿಯಾಗಿ ಅರ್ಥವಿಸಿಕೊಂಡಳು. ಬಹಳ ಹೊತ್ತು ಚಿಂತಿಸಿ ಚಿಂತಿಸಿ ಕೊನೆಗೊಂದು ನಿರ್ಧಾರಕ್ಕೆ ಅವಳು ಬಂದಳು.

ಮಾದೈಯು ಸೀದಾ ಶಿವರಾಜನ ಶಿಬಿರಕ್ಕೆ ಹೋದಳು. ಸೈನಿಕರೆಲ್ಲರೂ ಮಲಗಿ ನಿದ್ರಿಸುತ್ತಿದ್ದರು. ರಾಜನು ತನ್ನ ಸೇನಾಧಿಪತಿ ಅಧಿಕಾರಿಗಳೊಡನೆ ಮುಂದಿನ ದಿನದ ಕಾರ್ಯಕ್ರಮ ಮುಂತಾದವುಗಳನ್ನು ಚಿಂತಿಸುತ್ತಿದ್ದನು ಮಾದೈ ಬಂದ ಸುದ್ದಿ ಸೇವಕರಿಂದ ತಿಳಿದು ಅವಳನ್ನು ಒಳಗೆ ಕರೆಸಿಕೊಂಡನು. ಗೌರವದಿಂದ ಅವಳನ್ನು ಸ್ವಾಗತಿಸಿದನು.

"ನಿಮ್ಮೊಡನೆ ಏಕಾಂತವಾಗಿ ನಾಲ್ಕು ಮಾತಾಡ**ತಕ್ಕ**ದ್ದಿದೆ" ಎಂದು ಮಾದೈಯು ಮಲೆಯಾಳೀ ಭಾಷೆಯಲ್ಲಿ ನುಡಿದಳು.

ರಾಜನ ಬಳಗ ಅಲ್ಲಿಂದ ದೂರ ಸರಿಯಿತು.

ಮಾದೈಯು ಮಲೆಯಾಳೀ ಭಾಷೆಯಲ್ಲಿಯೇ ಮುಂದುವರಿಸಿದಳು:

"ಮಹಾರಾಜರೇ! ನೀವು ಯಾಕೆ ಏನು ಎಂದು ಪ್ರಶ್ನಿಸಕೂಡದು. ನೀವು ಈ ರಾತ್ರಿ ನನ್ನನ್ನು ನಿಮ್ಮ ಮಂಚದ ಮೇಲೆ ಮಲಗಲು ಬಿಡಬೇಕು. ನೀವು ಬೇರೆ ಎಲ್ಲಿಯಾದರೂ ಹೋಗಿ ಮಲಗಿಕೊಳ್ಳಿ."

ರಾಜನಿಗೆ ಆಶ್ಚರ್ಯವಾಯಿತು. ಮಾದೈಯ ಮಾತಿನ ಧ್ವನಿಯ ಅರಿವಾಯಿತು.

"ಏಕೆ ತಾಯೇ! ಈ ರಾತ್ರಿ ಏನಾದರೂ ಅಪಾಯವಿದೆಯೇ?"

"ಮಹಾರಾಜ ! ಏಕೆ ಏನು ಎನ್ನುವ ಪ್ರಶ್ನೆ ಬೇಡ. ಈ ರಾತ್ರಿ ನೀವು ಎಲ್ಲಿಗೆ ಬೇಕಾದರೂ ಹೋಗಿ. ನನಗೆ ನಿಮ್ಮ ಮಂಚದಲ್ಲಿ ಮಲಗಲು ಅಪ್ಪಣೆ ಕೊಡಿ. ಈ ವಿಷಯ ಬೇರೆ ಯಾರಿಗೂ ತಿಳಿಯಕೂಡದು."

ಸಾತ್ತ್ವಿಕ ಶಿರೋಮಣಿ. ಪವಿತ್ರ ಸ್ತ್ರೀ. ರಾಜನಿಗೆ ಮುಂದೆ ಮಾತಾಡಲು ಆಗಲಿಲ್ಲ. ಮಾದ್ಯೆಯ ಕೋರಿಕೆ ಈಡೇರಿಸಲ್ಪಟ್ಟಿತು. ಶಿವರಾಜನ ಶಯ್ಯಾಗೃಹದ ಸುತ್ತಲೂ ಎಂದಿನಂತೆ ಪಹರೆಯವರಿದ್ದರು. ಆದರೆ ಮಾದ್ಯೆ ಅದರೊಳಗೆ, ರಾಜನಿಲ್ಲ. ವಿಷಯವರಿತ**ವರು** ಅವರಿಬ್ಬರೇ. ರಹಸ್ಯವು ಅತಿಗೂಢವಾಗಿದ್ದಿತು.

ರಾತ್ರಿಯು ಮುಗಿಯಿತು. ಶಿವರಾಜನು ಎಂದಿನಂತೆ ಕೋಳಿ ಕೂಗುವಾಗ ಎದ್ದನು. ರಾತ್ರಿಯಲ್ಲಿ ಏನು ವಿಶೇಷ ಸಂಭವಿಸಿದೆಯೋ ಎಂದು ನೋಡಲು ಪರಿವಾರದೊಡಗೂಡಿ ದೀಪಗಳ ಸಮೇತ ಶಯ್ಯಾಗೃಹದೊಳಗೆ ಹೋದನು. ಅಲ್ಲಿಯ ರುದ್ರದೃಶ್ಯವನ್ನು ನೋಡಿ ಸ್ತಂಭೀತನಾದನು. ಒಂದು ಹೆಜ್ಜೆ ಹಿಮ್ಮೆಟ್ಟಿ ನಿಂತು ಹೋದನು. ಅವನ ಬಾಯಿಯಿಂದ ಮಾತು ಹೊರಡಲಿಲ್ಲ. ಹೃದಯ ತುಂಬಿ ಉಸಿರು ಕಟ್ಟುವಂತೆ ಆಯಿತು. ಕುತ್ತಿಗೆಯ ಗಳಗಳು ಬಿರಿಯುವಂತಾದವು. ಪರಿವಾರದವರು ಭಯಚಕಿತರಾಗಿ ಸಮಸ್ಯಾತ್ಮಕವಾಗಿ ಕೋಣೆಯನ್ನೇ ದೃಷ್ಟಿಸುತ್ತಿದ್ದರು. ಪಲ್ಲಂಗದ ಮೇಲೆ ಖಡ್ಗದ ಪ್ರಹಾರಗಳಿಂದ ಜರ್ಜರಿತಕಾಯಳಾಗಿ ರಕ್ತದ ಪ್ರವಾಹದಲ್ಲಿ ಮಾದ್ಯೆಯು ಬಿದ್ದಿದ್ದಾಳೆ. ಅವಳ ಛಿನ್ನವಿಚ್ಛಿನ್ನ ಶರೀರ ಚಿರಶಾಂತವಾಗಿ ಕೆಡೆದು ಬಿದ್ದಿದೆ. ಇನ್ನು ಮಾದ್ಯೆಯು ಶಾಂತಿಮಂತ್ರವನ್ನು ಪಠಿಸುವಂತಿಲ್ಲ. ಶಾಂತಿಶಿಬಿರಾಧ್ಯಕ್ಷತೆಯು ನಿತ್ಯ ಶಾಂತಿ ಶಿಬಿರದೆಡೆಗೆ ಸಾಗಿಹೋಗಿದ್ದಾಳೆ. ಅವಳ ದಿವ್ಯತನುವಿನ ಮೇಲಿನ ಪ್ರತಿಯೊಂದು ಗಾಯವೂ ತನ್ನ ದುಃಖದ ಕತೆಯನ್ನು ಹೇಳುವಂತೆ ಇನ್ನೂ ರಕ್ತವನ್ನು ಸ್ರವಿಸುತ್ತಿದ್ದಿತು. ಆ ಶ್ವೇತಾಂಬರ ರಕ್ತಸಿಂಚಿತವಾಗಿ ಮಲಿನವಾಗಿದ್ದಿತು. ಅವುಗಳ ಮಧ್ಯೆ ಅರ್ಧನಿಮೀಲಿತ ನಯನಗಳಿಂದ ನಭೋಮಂಡಲವನ್ನೀಕ್ಷಿಸುತ್ತ ಶಾಂತ ಮುಖಮುದ್ರೆಯಿಂದ ಮಾದ್ಯೆ ಮಲಗಿದ್ದಳು.

"ಮಹಾತಾಯೀ! ಮಹಾತಾಯೀ! ನನ್ನ ಪ್ರಾಣವನ್ನುಳಿಸಿದ ಮಹಾತಾಯೀ" ಎಂದು ಶಿವರಾಜನು ಆ ಪೂಜ್ಯಸ್ತ್ರೀಯ ಪಾದತಳದಲ್ಲಿ ಬಿದ್ದು ಹೊರಳಾಡಿದನು.

ಪಲ್ಲಂಗದ ಸಮೀಪ ಕಾಲುಮಣೆಯ ಮೇಲಿದ್ದ ಪತ್ರವನ್ನು ಸೇನಾಧಿಪತಿಯು ರಾಜನಿಗೆ ತೆಗೆದುಕೊಟ್ಟನು. ಅದು ಕನ್ನಡದಲ್ಲಿತ್ತು, ಶಿವರಾಜನಿಗೆ ಬರೆಯಲ್ಪಟ್ಟಿತ್ತು!

ಶಿವರಾಜ

ಈ ರಾತ್ರಿ ನಿನ್ನ ಸಂಹಾರವು ಗುಪ್ತರೀತಿಯಲ್ಲಿ ನಡೆಯುವುದೆಂದು ನನಗೆ ತಿಳಿಯಿತು. ನಾನಾಗಿಯೇ ನಿನ್ನ ವಿರುದ್ಧ ಸೇಡು ತಿರಿಸಿಕೊಳ್ಳಬೇಕೆಂದು ಬಹಳ ವರ್ಷ ಸರ್ಪದಂತೆ ಭುಸುಗುಟ್ಟುತ್ತಿದ್ದೆ. ಆದರೆ ಕ್ಷಮೆಯೇ ಸರ್ವಶ್ರೇಷ್ಠವೆಂದು ಅದನ್ನು ಮರೆತು ನೂತನ ಜನ್ಮವನ್ನು ಪ್ರಾರಂಭಿಸಿದೆ. ಈಗ ದೈವವೇ ನಿನಗೆ ಪ್ರತೀಕಾರ ಬಗೆದಿತ್ತು; ನನ್ನ ವೈರವನ್ನು ತೀರಿಸಲು ಸನ್ನಾಹ ಮಾಡಿತ್ತು. ನಾನು ಸುಮ್ಮನಿರಬಹುದಿತ್ತು; ಮನಸ್ಸು ಒಪ್ಪಲಿಲ್ಲ. ಕೊಡಗು ಸಂಸ್ಥಾನ ರಾಜರಹಿತವಾಗಿ ಕ್ಷೋಭೆಗೊಳಗಾಗಬಾರದು ಎಂದು ನಿರ್ಧರಿಸಿದೆ. ಇನ್ನಾದರೂ ಪರಮೇಶ್ವರನು ನಿನಗೆ ಸನ್ಮತಿ ನೀಡಲಿ. ಈ ಘೋರಯುದ್ಧವನ್ನು ನಿಲ್ಲಿಸಿ ಕೇರಳವರ್ಮನೊಡನೆ ಸಂಧಿಮಾಡಿಕೊಂಡು ಸ್ನೇಹದಿಂದ ಹಿಂದೆ ತೆರಳು. ಹಾಗೆ ಮಾಡಿದರೆ ಮಾತ್ರ ನನ್ನ ಪ್ರಿಯಪತಿಗೂ ನನಗೂ ಚಿರಶಾಂತಿ ಲಭಿಸುವುದು. ಅದೃಷ್ಟ ಶಕ್ತಿಯನ್ನು ಪರಮೋತ್ಕೃಷ್ಟ ಶಕ್ತಿಯೆಂದು ತಿಳಿದು ಆ ಶಕ್ತಿಯ ಆಗಾರ ಪರಮೇಶ್ವರನಲ್ಲಿ ಅಪಾರ ಭಕ್ತಿಯಿಟ್ಟು ಸನ್ಮಾರ್ಗಗಾಮಿಯಾಗಿ ಕ್ಷೇಮದಿಂದ ಪ್ರಜಾಪಾಲನೆ ಮಾಡು. ನಿಮಗೆಲ್ಲರಿಗೂ ಮಂಗಳವಾಗಲಿ.

ಪಾರ್ವತಿ (ಮಾದ್ಯೆ)

ಶಿವರಾಜನು ಅತಿ ದೀರ್ಘವಾದ ಉಸಿರನ್ನು ಸುಯ್ದನು. ನಯನೋದಕ ಧಾರೆಯು ಆ ಪರಮ ಪವಿತ್ರ ಪತ್ರಕ್ಕೆ ಅಭಿಷೇಕ ಮಾಡಿತು.

ಉಭಯ ಪಕ್ಷಗಳ ಸೈನಿಕರೂ ರಾಜರೂ ಸಹಕರಿಸಿ ಮೈತ್ರಿಯಿಂದ – ಅದಕ್ಕಿಂತಲೂ ಹೆಚ್ಚು, ಸಮಾನದುಃಖದಿಂದ – ಕಲೆತು ಮಾದ್ಯೆಯ ಮೃತಶರೀರಕ್ಕೆ ಅಗ್ನಿಸಂಸ್ಕಾರ ಮಾಡಿದರು. ಶಿವರಾಜನು ಬದುಕಿ ಉಳಿಯಲಿ. ಯುದ್ಧವು ನಿಂತು ಶಾಂತಿಯು ನೆಲೆಗೊಳ್ಳಲಿ ಎಂದು ಆತ್ಮಯಜ್ಞ ಮಾಡಿದ ಮಹಿಮಾನ್ವಿತ ದಿವ್ಯ ಪೂಜ್ಯ ಪವಿತ್ರ ಆದರ್ಶಸ್ತ್ರೀಯ ಚಿತಾಗ್ನಿ ಸಾಕ್ಷಿಯಾಗಿ ಶಿವರಾಜ ಕೇರಳವರ್ಮರಾಜರು ಕೊಡಗು ಕೇರಳ ಸಂಸ್ಥಾನಗಳ ನಡುವೆ ಸ್ನೇಹವನ್ನು ಸಂಸ್ಥಾಪಿಸಿದರು.

ಯುದ್ಧ ಮುಗಿದ ಆ ಮಂಗಳ ಮುಹೂರ್ತದಲ್ಲಿ ಯಶಃಕಾಯೆ ಮಾದ್ಯೆ ತೇಜೋಶರೀರೆಯಾಗಿ ಬಿಳಿಮೋಡಗಳ ಬೆಳಕಿನ, ಗಿರಿಬನಗಳ, ಹಸುರಿನ ಕೆರೆತೊರೆಗಳ ಪ್ರಭೆಯ ರೂಪಿನಿಂದ ಬಂದು ಅವರನ್ನು ಹರಸಿದಂತೆ ತೋರಿತು.

**ಒಂದು ಹಿಂದೀ ಕತೆಯ ಛಾಯೆಯಿದೆ**

# ಕಾವೇರೀ ಮಾತೆ

**(ಹನ್ನೊಂದನೆಯ ಕತೆ –೧೯೫೨)**

ಇದು ಅಗಸ್ತ್ಯನ ತಪದಮಣೆ ಕಾವೇರಿ ತಾಯ ತವರ್ಮನೆ   ಕದನಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದಿರವರ್ಮನೆ !

– ಕವಿಶಿಷ್ಯ

ಕೊಡಗುದೇಶದಿ ಜನಿಸಿ ಕೊಡಗಿನ
ಬೆಡಗ ವರ್ಧಿಸಿ ಸಡಗರದಿ ತಾ
ನಡೆವಳೋಡುವಳೀ ಕವೇರನ ಸುತೆಯು ಕಾವೇರಿ
ಜಡರ ಪಾಪಾಂಬುಧಿಯ ನೀಗುತ
ಕಡುಬಡವರಿಗೆ ಪುಣ್ಯನಿಧಿಯಂ
ಕೊಡುತ ಹರಿವಳು ಪತಿತಪಾವನೆ ದೇವಿ ಕಾವೇರಿ

ಕಮಲಜ ಕುಧರದ ವಿಮಲತಟಾಕದಿ
ತಮವಂ ತೊರೆಯುವ ಜನಿಸುವಳು
ರಮಿಸುತ ನಲಿದು ವಸುಮತಿಗೆ ಹಸುರುಡೆ
ನಮನವಸಲ್ಲಿಸಿ ಮೆರೆಯುವಳು



ಬ್ರಹ್ಮಗಿರಿಯು ಕೊಡಗು ಸಂಸ್ಥಾನದ ಪವಿತ್ರತಮ ಪರ್ವತ. ಲೋಕ ಪಾವನೆಯಾದ ಕಾವೇರೀ ಮಾತೆಯು ಈ ಶೈಲದಲ್ಲಿ ನದೀರೂಪತಳೆದು ಮಂಗಳಪ್ರದಾಯಿನಿಯಾಗಿ ಪ್ರವಹಿಸಿ ಯುಗ ಯುಗಾಂತರಗಳಿಂದ ಗಂಭೀರವಾಗಿ ತಲೆಯೆತ್ತಿನಿಂತಿರುವ ಪರ್ವತವು ನೋಟಕರಲ್ಲಿ ಆಶ್ಚರ್ಯವನ್ನೂ ಭಕ್ತಿಯನ್ನೂ ಬೀರುವುದು. ಬೃಹತ್ತಾದುದರ ಸುತ್ತಲೂ ಮಹತ್ತ್ವದ ಒಂದು ಕ್ಷೇತ್ರ ವ್ಯಾಪಿಸಿರುವುದು – ಅಯಸ್ಕಾಂತ ಶಿಲೆಯ ಸುತ್ತಲೂ ಆಕರ್ಷಣ ಕ್ಷೇತ್ರವು ಇರುವಂತೆ. ಬ್ರಹ್ಮಗಿರಿಯು ಇಂತಹ ಪವಿತ್ರವಾದ ಆಕರ್ಷಣ ಕ್ಷೇತ್ರ. ಇದು ಪ್ರತಿದಿನವೂ ಹಲವಾರು ಭಕ್ತರನ್ನು ತನ್ನ ಸಮ್ಮುಖಕ್ಕೆ ಸೆಳೆಯುವುದು. ಭಕ್ತವೃಂದ ದಾರಿಯುದ್ದಕ್ಕೂ ಸೃಷ್ಟಿ ಸೌಂದರ್ಯದ ರಸದೂಟ ಉಣ್ಣುತ್ತ ಪುನೀತರಾಗಿ ಬ್ರಹ್ಮಗಿರಿಯ ದರ್ಶನಕ್ಕೆ ಯೋಗ್ಯತೆ ಪಡೆದು ಮೇಲೆ ಬರುವರು. ಆ ಸೌಂದರ್ಯದ ಸೌಧಕ್ಕೆ ಕಳಶವನ್ನೇರಿಸುವಂತೆ ಧೀರಗಂಭೀರವಾಗಿ, ಸ್ಥಿರತೆಯ ಪ್ರತೀಕವಾಗಿ, ಗಗನ ಚುಂಬಿಯಾಗಿ, ಭವ್ಯವಾಗಿ ನಿಂತಿರುವ ಬ್ರಹ್ಮಗಿರಿಯನ್ನು ಈಕ್ಷಿಸಿ ಸಮೀಕ್ಷಿಸಿ ಪುಳಕಿತಕಾಯರಾಗುವರು. ಮಹಾತ್ಮರ ದರ್ಶನವೇ ಪರಮಸುಖ.

ಬ್ರಹ್ಮಗಿರಿಯ ತಳದಲ್ಲಿ ತಲಕಾವೇರಿಯೆನ್ನುವ ಪವಿತ್ರ ಕ್ಷೇತ್ರವಿದೆ. ಅಲ್ಲಿಯೇ ಕಾವೇರೀ ಮಾತೆಯು ಜನನ ತಾಳುವುದು; ವರ್ಷಕ್ಕೊಮ್ಮೆ ತುಲಾಮಾಸದಲ್ಲಿ ಅಲ್ಲಿ ತೀರ್ಥೋದ್ಭವಾಗುವುದು. ಗಂಗಾಮಾತೆಯು ಆ ಶುಭಮುಹೂರ್ತದಲ್ಲಿ ತಲಕಾವೇರಿಗೆ ಅದೃಶ್ಯಳಾಗಿ ಆಗಮಿಸಿ ತೀರ್ಥಜಲದಲ್ಲಿ ಮಿಂದು ತಾನು ಭಕ್ತಜನರಿಂದ ಸಂಗ್ರಹಿಸಿದ ಪಾಪಭಾರವನ್ನು ನೀಗಿ ಪರಿಪೂತೆಯಾಗಿ ಮರಳುವಳೆಂದು ಪುರಾಣೊಕ್ತಿ. ತಲಕಾವೇರಿಯಲ್ಲಿರುವ ಕೊಳದಲ್ಲಿ ಭಕ್ತರು ಸ್ನಾನಮಾಡಿ, ಕಾವೇರೀ ತೀರ್ಥದಿಂದ ಪಾಪರಹಿತವಾಗಿ ಗಿರಿಯನ್ನೇರುವವರು. ಸುತ್ತಲೂ ಸೌಂದರ್ಯ ಹಸುರಾಗಿ ಕಾಡಾಗಿ ಬಾನಾಗಿ ಪರ್ವತ ಶ್ರೇಣಿಯಾಗಿ ಹಬ್ಬಿರುವುದು. ಅಲ್ಲಿ ಯಾವುದಕ್ಕೂ ಮಿತಿಯಿಲ್ಲ, ಕೊರತೆಯಿಲ್ಲ. ಮನುಷ್ಯನ ಮಿತಿಯಿಂದ ಮಿತಿಯ ಕಲ್ಪನೆಯಾಗ ಬೇಕೇ ವಿನಾ ಅನ್ಯಥಾ ಅಲ್ಲ. ದೇವರು ಕೊಡುವಾಗ ಧಾರಾಳವಾಗಿಯೇ ಕೊಡುವನು. ಆಳೆತ್ತರ ಬೆಳೆದಿರುವ ತೃಣಾಳಿಗಳ ಮಧ್ಯೆ ದಾರಿಮಾಡಿಕೊಂಡು ಶಿಖರಾಗ್ರಕ್ಕೆ ಹೋಗಬೇಕು. ಆ ಪವಿತ್ರ ಯಾತ್ರೆಯಲ್ಲಿ ಗಾಳಿಯು ಮೃದುವಾಗಿ ತೀಡಿ ಹುಲ್ಲುಗಳ ಮೂಲಕ ಪಥಿಕರಿಗೆ ಚಾಮರ ಬೀಸುವುದು. ಕೆಳಗಿನ ಕಣಿವೆಯ ಹೂವುಗಳು ಪರಿಮಳದಿಂದ ತುಂಬಿರುವ ಗಾಳಿಯು ಅತ್ಯಂತ ಆಹ್ಲಾದಕರವಾಗಿರುವುದು. ಪ್ರಾತಃಕಾಲದ ಸಮಯ ಮೇಲೇರುತ್ತಿದ್ದರೆ ಹುಲ್ಲಿನ ಎಳೆಗಳ ಅಂಚಿನಿಂದ ಹಿಮಮಣಿಗಳ ಪ್ರತಿಫಲನದಿಂದ ಶತಕೋಟಿ ಸೂಕ್ಷ್ಮಸೂರ್ಯರು ಮಿನುಗಿ ದಾರಿಗರಿಗೆ ಉಲ್ಲಾಸ ನೀಡುತ್ತಾರೆ. ಮುಂದೆ ಮುಂದೆ ಹೋದಹಾಗೆ ನಡೆದುಬಂದ ದಾರಿಯ ಸಿಂಹಾವಲೋಕನ ಮಾಡಬೇಕು. ಕಾಲಿನ ತಳದಲ್ಲಿ, ಕೆಳಗೆ, ತಲಕಾವೇರಿಯ ಕೊಳ, ದೇವಾಲಯ

ಕಿರಿದಾಗುತ್ತ ಹೋಗುವುದು. ಅಲ್ಲಿಂದ ಮುಂದೆ ಭಯಂಕರವಾದ ಪ್ರಪಾತದಲ್ಲಿ ಕಾಡಿನ ರಾಶಿ. ಹಿಂದೊಮ್ಮೆ ಹಸುರುಕರಗಿ ಸಮುದ್ರವಾಗಿದ್ದಿರಬೇಕು; ಆ ಸಮುದ್ರ ನೊರೆ ನೊರೆಯಾಗಿ ಅಲೆಗಳನ್ನು ಚಾಚಿ ಬ್ರಹ್ಮಗಿರಿಯ ಪಾದಸ್ಪರ್ಶ ಮಾಡಲು ಬಂದಿದ್ದಿರಬೇಕು; ಆಗ ಯಾವುದೋ ಸೃಷ್ಟಿರಹಸ್ಯ ಕಾರಣದಿಂದ ಸಮುದ್ರ ಹಾಗೆಯೇ ಥಕ್ಕನೆ ಘನೀಭವಿಸಿರಬೇಕು. ಆ ರೀತಿ ದಿಗಂತದವರೆಗೆ ನಮ್ಮ ಕೆಳಗೆ ಚಾಚಿರುವ ಸಹಸ್ರಾರು ವೃಕ್ಷಗಳ ಪರ್ಣಸಮೂಹಗಳು ಗೋಚರಿಸುವುವು. ಅವುಗಳ ಮೇಲೆ ಹಗುರವಾಗಿ ಗಾಳಿಯಂತೆ ಒಯ್ಯೊಯ್ಯನೆ ಬಳುಬಳುಕಿ ಸಾಗುವುದು ಪರಮ ಸುಖಕರವೆಮದು ಮನಸ್ಸು ಊಹಿಸುವುದು, ಮತ್ತೆ ದೂರದಲ್ಲಿ, ಬಲುದೂರದಲ್ಲಿ, ಬಾನು ಬುವಿಯನ್ನು ಸೇರುವಲ್ಲಿ, ಬಿಳಿ ಮೋಡಗಳಿಗೂ ತೆಳು ಬಾನಿಗೂ ವ್ಯತ್ಯಾಸ ತೋರದೆ ನೀಲಿಯೇ ಆವಿರ್ಭಸಿರುವಂತೆ ಕಾಣುವಲ್ಲಿ ಪಶ್ಚಿಮ ಸಮುದ್ರಾಧಿಪತಿಯು ತರಂಗಕರಗಳಿಂದ ಆಕಾಶದೇವಿಯ ಅರ್ಚನೆ ಮಾಡುವುದೂ ಕಾಣಿಸುವುದು. ಹಾಗೆ ನಿಟ್ಟಿಸುತ್ತಿದ್ದಂತೆಯೇ. ದೃಷ್ಟಿಯು ಅಸ್ಪಷ್ಟವಾಗಿ, ಬಾನಿನ ನೀಲಿಕರಗಿ ನೀರಿಗೆ ಸುರಿದು ಆ ನೀರು ನಮ್ಮೆಡೆಗೆ ಹರಿದು ಬರುತ್ತ ಹಸುರಾಗಿ ಕಾಡಾಗಿ ಬೆಟ್ಟವಾಗಿ ಬರುವಂತೆಯೂ ಭಾಸವಾಗುವುದು. ಪೂರ್ವದಿಕ್ಕಿಗೆ ತಿರುಗಿದರೆ ಬೆಟ್ಟವು ಇಳಿದಿಳಿದು ಹುಲ್ಲುಗಾವಲಾಗಿ ಮರೆಯಾಗುವ ದೃಶ್ಯ ಕಾಣುವುದು.

ಇಂತಹ ಬ್ರಹ್ಮಗಿರಿಯನ್ನೇ ಹಿಂದೆ ಬ್ರಹ್ಮದೇವನು ತಪಸ್ಸಿಗಾಗಿ ಆಶ್ರಯಿಸಿದನು ಎಂದರೆ ಆಶ್ಚರ್ಯವಿದೆಯೇ? ಸೃಷ್ಟಿಕರ್ತ ಬ್ರಹ್ಮನು ಅತ್ಯಂತ ಕುಶಲಿಯಾದ ಪ್ರತಿಭಾವಂತನಾದ ಶಿಲ್ಪಿ ಮತ್ತು ಕವಿ. ಭೂಲೋಕವೇ ಅವನ ಕೃತಿಯಾದರೂ ಈ ಬ್ರಹ್ಮಗಿರಿಯರಲ್ಲಿಯ ಎರಕಹೊಯ್ದ ಸೌಂದರ್ಯವನ್ನು ಅವನು ಬಲು ಮೆಚ್ಚಿದನು. ಹಾಗಾಗಿ ಶ್ರೀಮನ್ನಾರಾಯಣನನ್ನು ಕುರಿತು ಬ್ರಹ್ಮದೇವನು ತಪಸ್ಸು ಮಾಡಬೇಕಾಗಿ ಬಂದಾಗಿ ಈ ಪರ್ವತಾಗ್ರದಲ್ಲಿ ಮಂಡಿಸಿದ್ದನು ಎಂದು ಪ್ರತೀತಿ ಇದೆ. ಹೀಗೆ ಸಾಕ್ಷಾತ್‌ಬ್ರಹ್ಮನ ಪಾದಕಮಲಗಳಿಂದ, ಬ್ರಹ್ಮನ ತಪಸ್ಸಿನಿಂದ ಪಾವಿತ್ರ್ಯಗಳಿಸಿ ಅಧಿಕ ಪೂಜ್ಯತೆ ಪಡೆದ ಪರ್ವತ ಅಂದಿನಿಂದ ಬ್ರಹ್ಮಗಿರಿಯೆಂದೇ ಕರೆಯಲ್ಪಟ್ಟಿತು. ಆ ಸಮಯದಲ್ಲಿ ಬ್ರಹ್ಮಗಿರಿಯ ತಪ್ಪಲಿನಲ್ಲಿ ವಿಸ್ತಾರವಾದ ಕೊಳವೊಂದ**ಲ್ಲದೇ** ಬೇರೆ ಏನೂ ಇರಲಿಲ್ಲ ಕಾವೇರೀಮಾತೆಯಂತೂ ಜನ್ಮತಾಳಿರಲಿಲ್ಲ.

ಚಂದ್ರವರ್ಮನು ಧರ್ಮಾತ್ಮನಾದ ರಾಜ. ದಕ್ಷಿಣಭಾರತದ ದಕ್ಷಿಣಾರ್ಧ ಭಾಗವಿಡೀ ಅವನ ಆಳ್ವಿಕೆಯಲ್ಲಿದ್ದಿತು. ಚಂದ್ರವರ್ಮನ ರಾಜ್ಯಭಾರದಲ್ಲಿ ಮಳೆ ಬೆಳೆಗಳು ಸಕಾಲದಲ್ಲಿ ಆಗಿ ಪ್ರಜೆಗಳು ಸುಖಸಂತೃಪ್ತಿಯಲ್ಲಿದ್ದರು. ಧರ್ಮವು ನೆಲಸಿರುವ ರಾಜ್ಯದಲ್ಲಿ ಸಂತುಷ್ಟಿಯೂ ಬೀಡು ಬಿಟ್ಟಿರುವುದು. ಚಂದ್ರವರ್ಮನು ತನ್ನ ವಿಶಾಲ ರಾಜ್ಯದಲ್ಲಿ ಆಗಾಗ ಸಂಚರಿಸುತ್ತ ಪ್ರಜೆಗಳ ಕ್ಷೇಮವನ್ನೂ ಹಿತವನ್ನೂ ಕೋರುತ್ತಿದ್ದನು. ಕಷ್ಟ ಸಹಿಷ್ಣುಗಳೂ ಧರ್ಮಮಾರ್ಗಿಗಳೂ ಆದ ಪ್ರಜೆಗಳಿಂದ ಕೂಡಿದ ರಾಜ್ಯವು ವರ್ಧಿಸುತ್ತಿದ್ದಿತು.

ಮುಂದಿನ ಕೆಲವು ವರ್ಷಗಳಲ್ಲಿ ಕಾಲ ಪರಿಸ್ಥಿತಿಯು ವಿಪರೀತವಾಯಿತು. ಅಧರ್ಮದ ಏರಿಕೆ ಎಲ್ಲಿಯಾದರೂ ಆಯಿತೋ, ದೇವದೇವತೆಗಳಿಗೆ ಸರಿಯಾದ ಅರ್ಘ್ಯ ನೈವೇದ್ಯಗಳು ಸಲ್ಲಲಿಲ್ಲವೋ ಏನೋ ಚಂದ್ರವರ್ಮನ ಸಮೃದ್ಧವಾದ ರಾಜ್ಯದಲ್ಲಿ ಮಳೆಯು ಸರಿಯಾಗಿ ಸುರಿಯದೆ ಜನರಲ್ಲಿ ಹಾಹಾಕಾರ ಉಂಟಾಯಿತು. ವಿಶೇಷವಾಗಿ, ತಮಿಳುನಾಡಿನ ಬಯಲು ಸೀಮೆಯಲ್ಲಿ ಕ್ಷೋಭೆ ವಿಪರೀತವಾಯಿತು. ಎರಡು ವರ್ಷ ಮಳೆಯಿಲ್ಲ; ಮೂರು ವರ್ಷಗಳಾದುವು ; ನಾಲ್ಕು ವರ್ಷಗಳೂ ಮುಗಿದುವು – ಮಳೆಯ ಸುಳಿವೇ ಇಲ್ಲ. ಪ್ರತಿವರ್ಷವೂ ಮಳೆಗಾಲದ ಸಮಯದಲ್ಲಿ ರೈತರು ಆಕಾಶವನ್ನು ನೋಡಿ ನೋಡಿ ಬೇಸತ್ತರು. ಬಿಳಿ ಮೋಡಗಳು ಬಂದು ಅಣಕಿಸಿ ಹೋಗುವಂತೆ ಹೋಗುತ್ತಿದ್ದುವು. ಸೂರ್ಯೋಷ್ಣ ಪ್ರಖರವಾಯಿತು. ಭೂಮಿವಾಸಿಗಳ ಮೇಲೆ ಅತಿಯಾದ ಕೋಪದಿಂದ ಸೂರ್ಯನು ಜ್ವಲಿಸುತ್ತಿರುವಂತೆ ತೋರಿತು. ಅವನ ಕಿರಣವರ್ಷದ ಪ್ರತಿಹತಿಯನ್ನು ಸಹಿಸಲಾರದೆ ಜನರು ಗ್ರಾಮ ನಗರಗಳನ್ನು ತೊರೆದು ಅಡವಿಗಳಿಗೆ ಹೋದರು. ಭಯಂಕರ ವಿಶಾಲ ಕಾನನಗಳು ಮಳೆಯಿಲ್ಲದೆ ಒಣಗುತ್ತಿದ್ದುವು. ವನ್ಯ ಜಂತುಗಳು ಸೆಕೆಯಿಂದ ಹುಚ್ಚು ಹುಚ್ಚಾಗಿ ಓಡಿ ಓಡಿ ದಾರಿಯಲ್ಲಿಯೇ ಬಿದ್ದು ಸತ್ತು ಹೋಗುತ್ತಿದ್ದುವು. ರಾಷ್ಟ್ರದ ಬೇರೆ ಕಡೆಗಳಿಂದ ಆದಷ್ಟು ಶೀಘ್ರಗತಿಯಿಂದ ಆಹಾರ ಪದಾರ್ಥಗಳನ್ನು ತಂದು ಜನರಿಗೆ ಹಂಚುವ ವ್ಯವಸ್ಥೆ ಮಾಡಲಾಯಿತು. ಆದರೆ ಕುಡಿಯುವ ನೀರಿಗೇನು ಗತಿ? ಮಳೆ ಮೋಡಗಳು ಎಷ್ಟೋ ಸಲ **ದಿನಗಟ್ಟಲೆ ವಾರಗಟ್ಟಲೆ ಕೂಡಿ ಕೂಡಿ ಗುಡು ಗುಡು ಸದ್ದನ್ನು** ಮಾಡಿ ಮಾಡಿ ಒಂದೆರಡು ಹನಿಕರೆದು ಹಾಗೆಯೇ ಗಾಳಿಯಲ್ಲಿ ಚದರಿ ಮಾಯವಾಗುತ್ತಿದ್ದುವು. ದುಃಖಿತ ಜನರಲ್ಲಿ ಇದರಿಂದ ಇನ್ನಷ್ಟು ಸಂಕಟವಾಯಿತು. ಅನಾರೋಗ್ಯ ಸಾರ್ವತ್ರಿಕವಾಗಿ ವ್ಯಾಪಿಸಿತು. ದೇವಾಲಯಗಳಲ್ಲಿ ಪೂಜೆ ಪ್ರಾರ್ಥನೆಗಳು ಅಹರ್ನಿಶೆ ನಡೆದುವು. ಅನ್ನ ಸಂತರ್ಪಣೆ ಯಥೇಚ್ಛವಾಗಿ ರಾಜನ ನೇತೃತ್ವದಲ್ಲಿಯೇ ನಡೆಯಿತು. ಸಹಸ್ರ ಶತಸಹಸ್ರ ವರುಣಜಪವೂ ನಿಷ್ಫಲವಾಯಿತು. ವರುಣ ಯಜ್ಞ ಮುಂತಾದ ಮಹಾಯಜ್ಞಗಳು ನೀರಮೇಲಿನ ಹೋಮಗಳಾದುವು – ನೀರನ್ನು ತರಲಿಲ್ಲ. ಇ**ಷ್ಟಾಗು**ವಾಗ ಐದನೆಯ ವರ್ಷರ್ತುವೂ ಕ್ಷಾಮರ್ತುವಾಗಿ ಪರಿಣಮಿಸಿತು. ಎಷ್ಟೋ ವರ್ಷಗಳಿಂದ ಸಂಪತ್ಸಮೃದ್ಧವಾಗಿ ಪುಷ್ಕಳವಾಗಿ ನಂದನವನದಂತೆ ಕಣ್ಗೆ**ಡ್ಡವಾಗಿದ್ದ** ನಾಡನ್ನು ಜನರು ದುಃಖದಿಂದ ತೊರೆದು ಬೇರೆ ಭಾಗಗಳಿಗೆ ವಲಸೆಹೋಗಲು ತೊಡಗಿದರು.

ಚಂದ್ರವರ್ಮ ರಾಜನಿಗೆ ವಿಪರೀತ ಚಿಂತೆಯಾಯಿತು. ಜನಸಂಖ್ಯೆ ಕಡಿಮೆಯಾಗಿದ್ದ ಆ ದಿನಗಳಲ್ಲಿ ಜನರು ಒಂದು ಕಡೆಯಿಂದ ಇನ್ನೊಂದು ಕಡೆಗೆ ಬೀಡುಗಳನ್ನು ತೊರೆದು ಹೋದರೆ ರಾಷ್ಟ್ರಕ್ಕೆ ವಿಶೇಷ ತೊಂದರೆಯಾಗುತ್ತಿರಲಿಲ್ಲ. ಆದರೆ ಅಂತಹ ದುರ್ಮುಹೂರ್ತ ಒದಗಿ ಬಂದರೆ ಅದು ರಾಜನಿಗೆ ರಾಷ್ಟ್ರಕ್ಕೆ ಅನಿಷ್ಟ ಸಂಭವಿಸುವುದನ್ನು ಸೂಚಿಸುವುದು ಎಂದು ಎಲ್ಲರೂ ತಿಳಿದಿದ್ದರು. ದೇವತೆಗಳ ಆಕ್ರೋಶ ಹೀಗೇಕೆ ಎಂದು ಚಂದ್ರವರ್ಮನಿಗೆ ತಿಳಿಯಲಿಲ್ಲ. ಧರ್ಮದಿಂದ ಅವನು ರಾಜ್ಯಭಾರ ನಡೆಸುತ್ತಿದ್ದರೂ ಇಂತ**ಹ ದು**ರ್ದೈವ ಏಕೆ ಎಂದು ಅವನಿಗೆ ಅರ್ಥವಾಗಲಿಲ್ಲ.

ಜ್ಯೋತಿಷ್ಯ ನೋಡುವವರು ಗ್ರಹಗಣಿತವನ್ನು ಅಡಿಮೇಲೆ ಮಾಡಿ ಏನೂ ಹೇಳಲಾರದವರಾದರು. ಸೂರ್ಯ ಸಿದ್ಧಾಂತದಿಂದ, ದೃಗ್ಗಣಿತದಿಂದ ಏನೂ ತಿಳಿಯಲಿಲ್ಲ. ಸೂರ್ಯನು ಮಾತ್ರ ಪ್ರಖರನಾಗಿದ್ದನು. ಗ್ರಹಗಳ ಸಂಕ್ರಾಂತಿಯೋ ನಕ್ಷತ್ರಗಳಲ್ಲಿ ಉತ್ಕ್ರಾಂತಿಯೋ ಅಂತೂ ಜನರಿಗೆ ಭಯ ಭ್ರಾಂತಿಗಳು ವಿಪರೀತವಾದವು. ಒಂದು ಕೊಳಗ, ನಾಲ್ಕು ಕೊಳಗ, ಮಳೆಯನ್ನು ಸುರಿಸಬೇಕಾದ

ಮೇಘರಾಜರು ಗರ್ಜನೆ ಮಾಡಿ ಓಡಿಸಲ್ಪಟ್ಟವರಂತೆ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು, ಚಂದ್ರವರ್ಮನು ಪ್ರಜೆಗಳ ಕ್ಷೇಮಕ್ಕಾಗಿ ಮಳೆಯ ಅಮೃತ ವರ್ಷಕ್ಕಾಗಿ ಏನನ್ನು ಬೇಕಾದರೂ, ತನ್ನ ಜೀವವನ್ನೇ ಬೇಕಾದರೂ, ತೊರೆದು ಬಿಡಲು ಸಿದ್ಧನಾಗಿದ್ದನು.

ಚಿಂತ್ರಾಕ್ರಾಂತನಾಗಿದ್ದ ರಾಜನ ಆಸ್ಥಾನಕ್ಕೆ ಒಂದು ದಿವಸ ತೇಜಸ್ವಿಯಾದ ಋಷಿಯೊಬ್ಬನು ಬಂದನು. ರಾಜನು ಅವನಿಗೆ ಉಚಿತವಾದ ಸ್ವಾಗತೋಪಚಾರ ಸತ್ಕಾರ ಮಾಡಿ ಮರ್ಯಾದೆಯಿಂದ ಬರಮಾಡಿಕೊಂಡರು.

ಋಷಿವರ್ಯನೇ ಮಾತನ್ನು ಪ್ರಾರಂಭಿಸಿದನು : "ರಾಜನೇ, ನಿನ್ನ ರಾಜ್ಯದಲ್ಲಿ ಉಂಟಾಗಿರುವ ಕ್ಷೋಭೆಯು ಬೇಗನೆ ಕೊನೆಗಾಣುವುದು."

ರಾಜನು ಸಂತೋಷವನ್ನು ವ್ಯಕ್ತಪಡಿಸಿದನು.

"ಆದರೆ ನೀನ**ದಕಾ**ಗಿ ಕಷ್ಟಪಡಬೇಕಾಗುವುದು."

"ಎಂತಹ ತ್ಯಾಗವನ್ನು ಮಾಡಲೂ ಎಂತಹ ಕಷ್ಟವನ್ನು ಪಡಲೂ ನಾನು ಸಿದ್ಧನಾಗಿರುವೆನು, ಸ್ವಾಮೀ!"

"ಬ್ರಹ್ಮದೇವನನನ್ನು ಕುರಿತು ನೀನು ಏಕಾಗ್ರವಾಗಿ ನಿರಂತರವಾದ ತಪಸ್ಸನ್ನು ಮಾಡಬೇಕು. ಆಗ ನಿನ್ನ ಇಷ್ಟಾರ್ಥ ಸಿದ್ಧಿಸುವುದು."

"ಶಿರಸಾವಹಿಸಿದೆನು ನಿಮ್ಮ ಅಪ್ಪಣೆ. ಬ್ರಹ್ಮದೇವನೇ ಈ ರೀತಿ ನಿಮ್ಮ ಬಾಯಿಯಿಂದ ಆಜ್ಞೆ ಕೊಡಿಸುತ್ತಿರುವನೆಂದು ನಂಬಿದ್ದೇನೆ."

ಋಷಿವರೇಣ್ಯನು ಚಂದ್ರವರ್ಮ ಮಹಾರಾಜನನ್ನು ಹರಸಿ ಸಾಗಿದನು.

ಮರುದಿನ ಶುಭಮೂರ್ಹತದಲ್ಲಿ ಚಂದ್ರವರ್ಮ ರಾಜನು ರಾಜ್ಯವನ್ನು ಮಂತ್ರಿಯ ವಶಕ್ಕೆ ಒಪ್ಪಿಸಿ ತಪಶ್ಚರ್ಯೆಗಾಗಿ ವನಾಂತರಕ್ಕೆ ನಿರ್ಗಮಿಸಿದನು. ಜನಜನಿತವಾಗಿದ್ದ, ಅನೇಕ ಪುಣ್ಯಶ್ಲೋಕರ ಋಷಿಗಳ ತಪಸ್ಸಿನಿಂದ ಪಾವಿತ್ರ್ಯ ಹೊಂದಿ ದೇವತ್ವ ಪಡೆದಿದ್ದ ಬ್ರಹ್ಮಗಿರಿಯೆಡೆಗೆ ಚಂದ್ರವರ್ಮನು ಹೋದನು. ಪ್ರಕೃತಿ ದೇವಿಯ ಸುಮ್ಮುಖ, ವಿಶಾಲವಾದ ಸುಂದರವಾದ ಏಕಾಂತವಾದ ಪ್ರದೇಶ. ಅಂತಹ ಬ್ರಹ್ಮಗಿರಿಯ ಪ್ರದೇಶದಲ್ಲಿ ಅಲ್ಲದೆ ಬೇರೆ ಎಲ್ಲಿ ತಾನೇ ಭಗವಂತನು ಒಲಿದಾನು?

ಅಚ್ಛೋದ ಸರಸ್ಸಿನಲ್ಲಿ ಮಿಂದು ಪರಿ**ಪೂತ**ನಾಗಿ ಆತ್ಮ ನೈವೇದ್ಯವನ್ನು ಬ್ರಹ್ಮದೇವನಿಗೆ ಮಾಡಿ ಶುದ್ಧಾಂತಃಕರಣದಿಂದ ದೇವದೇವನನ್ನು ಸೃಷ್ಟ್ಯಧೀಶನನ್ನು ಕುರಿತು ತಪಸ್ಸು ಆಚರಿಸಲು ಚಂದ್ರವರ್ಮನು ತೊಡಗಿದನು. ಆ ನಿರ್ಧಾರಪೂರ್ವಕ ನಿರಂತರ ವ್ರತದಿಂದ ರಾಜನ ಶರೀರ ಕ್ಷೀಣವಾಯಿತು. ಆದರೆ ಅವನ ಆಯಾಸವನ್ನು ಪ್ರಕೃತಿದೇವಿಯೇ ಮಾತೃಹಸ್ತದ ಪ್ರೇಮದಿಂದ ಪರಿಹರಿಸುತ್ತಿದ್ದಳು. ದೇಹವು ಕ್ಷೀಣವಾದಂತೆ ಆತ್ಮಶಕ್ತಿಯು ವರ್ಧಿಸುತ್ತಿದ್ದಿತು. ಮನುಷ್ಯಶಕ್ತಿ, ಅಂದರೆ ಆತ್ಮಶಕ್ತಿ, ದುರ್ಧರ ಪ್ರಸಂಗಗಳಲ್ಲಿ ಮಹೌನ್ನತ್ಯವನ್ನೇರಿ ಉತ್ತರಿಸಲು ಶಕ್ತವಾಗಿರುವುದು. ಚಂದ್ರವರ್ಮನ ತಪಸ್ಸಿನ ಉಗ್ರ**ತೇಕಾ**ಗ್ರತೆಗಳು ಏರಿದುವು. ಪರಬ್ರಹ್ಮನಿಗೆ ಭಕ್ತನ ಅಭೀಷ್ಟದ ಗಭೀರತೆ, ಭಕ್ತಿಯ ದೃಢತೆ ಅರಿವಾದುವು.

ಭಗವಂತನು ಮೈದೋರಿ ಭಕ್ತನನ್ನು ಹರಸಿದನು. ಸರ್ವಶಕ್ತನಾದ ಪರಮಾತ್ಮನಲ್ಲಿ ಏನು ವರವನ್ನು ತಾನೇ ತೃಣ ಮನುಷ್ಯನು ಬೇಡಿಯಾನು?

"ರಾಜ್ಯಕ್ಕೆ, ಪ್ರಜೆಗಳಿಗೆ ಕ್ಷೇಮವಾಗುವಂತೆ ಅನುಗ್ರಹಿಸಬೇಕು. ಪರಮಾತ್ಮ" ಎಂದು ಕರಮುಗಿದು ಬೇಡಿಕೊಂಡನು.

"ಅದು ನಡೆದಿದೆ. ಅದೂ ಅಲ್ಲದೇ ನೀನು ತಪಸ್ಸು ಮಾಡಿರುವ ಈ ಪವಿತ್ರ ಸ್ಥಳದಲ್ಲಿ ನನ್ನ ಮಾನಸಪುತ್ರಿ ಲೋಪಾಮುದ್ರೆಯು ನದಿಯಾಗಿ ಜನ್ಮತಾಳಿ ನಿನ್ನ ರಾಜ್ಯಕ್ಕಾಗಿ ಹರಿದು ಅದನ್ನು ಶಾಶ್ವತವಾದ ನಂದನವನ್ನಾಗಿ ಮಾಡುವಳು" ಎಂದು ಬ್ರಹ್ಮದೇವನು ಆಶೀರ್ವದಿಸಿದನು.

ರಾಜನು ಅಮಿತಾನಂದದಿಂದ ಕೃತಜ್ಞತೆಯಿಂದ ಶ್ರೀ ಮಹಾವಿಷ್ಣುನಾಭಿ ಕಮಲ ಸಂಭೂತನನ್ನು ಸ್ತುತಿ ಮಾಡುತ್ತಿದ್ದಂತೆಯೇ ಸೃಷ್ಟಿ ಕರ್ತೃವು ಸೃಷ್ಟಿ ಸೌಂದರ್ಯದಲ್ಲಿ ಕರ**ಕರಗಿ** ಲೀನನಾಗಿ ಹೋದನು.

ಚಂದ್ರವರ್ಮನು ತಪಸ್ಸಿಗೆ ಹೋದಾಗಲೇ ದೇಶದಲ್ಲಿ ಮಳೆಯು ಅಮೃತ ಧಾರೆಯಾಗಿ ಸುರಿಯಲು ತೊಡಗಿತು. ಪ್ರಜೆಗಳು ಮಹಾರಾಜನನ್ನು ಮಹಾನುಭಾವ ಎಂದು ಸ್ತುತಿಸಿದರು. ಊರುಬಿಟ್ಟು ಹೋದವರು ಮರಳಿಬಂದು ಕೃಷಿಯನ್ನು ಪ್ರಾರಂಭಿಸಿದರು. ಸಸ್ಯಕೋಟಿಗಳು ಚಿಗುರಿ ಹೂವನ್ನು ಬಿಟ್ಟುನಾಡು ಪುನಃ ಸೌಂದರ್ಯದ ಬೀಡಾಯಿತು, ರಾಜನು ತಪಸ್ಸಿನಿಂದ ಪವಿತ್ರನಾಗಿ ದೇವದರ್ಶನದಿಂದ ಕೃತಾರ್ಥನಾಗಿ ಹಿಂತಿರುಗುವಾಗ ಅವನ ಕಣ್ಮನಗಳನ್ನು ಈ ಸ್ವರ್ಗೀಯ ದೃಶ್ಯಗಳು ಸೂರೆಗೊಂಡವು. ಅಪಾರ ಹರ್ಷದಿಂದ ಅವನು ನಲಿದುಲಿದು ರಾಜ್ಯಪ್ರವೇಶ ಮಾಡಿದನು. ಅಪೂರ್ವ ಸಂಭ್ರಮದಿಂದ ಪ್ರಜೆಗಳು ಅವನನ್ನು ಸ್ವಾಗತಿಸಿದರು.

ಮುಂದಿನ ದೃಶ್ಯ ಎಷ್ಟೋ ವರ್ಷಗಳ ಅನಂತರ ಪ್ರಾರಂಭವಾಗುವುದು. ಆಗ ಮಹಾರಾಜನಿಗೆ ಐವತ್ತು ವರ್ಷಪ್ರಾಯ ಮೀರಿದ್ದಿತು. ಇನ್ನು ವಾನಪ್ರಸ್ಥಾಶ್ರಮಕ್ಕೆ ಹೋಗಬೇಕೆಂದು ಅವನು ಆಲೋಚಿಸುತ್ತಿದ್ದ ಕಾಲ.

ಬ್ರಹ್ಮಗಿರಿಯ ಸಮೀಪ ಪಾಡಿಬೆಟ್ಟವಿದೆ. ಅದರ ತಪ್ಪಲಿನಲ್ಲಿ ಕವೇರ ಮಹರ್ಷಿಯ ಆಶ್ರಮವಿದ್ದಿತು. ಅವನ ಅಖಂಡ ಬ್ರಹ್ಮಚಾರೀವ್ರತಕ್ಕೆ ಆ ಸ್ಥಳ ಅತ್ಯುತ್ತಮವಾದ ಏಕಾಂತತೆಯನ್ನು ಒದಗಿಸಿಕೊಟ್ಟಿತ್ತು. ದೇವಚಿಂತನೆಗೆ ಆ ಪ್ರದೇಶವು ಸರ್ವ ವಿಧದಲ್ಲಿಯೂ ಪ್ರಶಸ್ತವಾಗಿದ್ದಿತು. ಅನೇಕ ಸ್ಥಳಗಳಲ್ಲಿ ಸಂಚರಿಸಿದ ಋಷಿವರ್ಯನು ಆ ಸ್ಥಳದ ಸುಂದರ ಮತ್ತು ಪಾವನ ಏಕಾಂತತೆಗೆ ಮಾರುಹೋಗಿ ಅಲ್ಲಿಯೇ ನೆಲೆಸುವುದೆಂದು ನಿಶ್ಚಯಿಸಿದನು. ಸೂರ್ಯೋದಯ ಪೂರ್ವದಲ್ಲಿ ಪ್ರಾರಂಭವಾಗುತ್ತಿದ್ದ ಪರಮಾತ್ಮಾರಾಧನೆಯು ಹೊತ್ತು ಏರುವವರೆಗೂ ಅಖಂಡವಾಗಿ ನಡೆಯುತ್ತಿದ್ದಿತು. ಅನಂತರ ಋಷಿಯು ವನಾಂತರದಲ್ಲಿ ಸಂಚರಿಸಿ ಆಹಾರ ಪದಾರ್ಥಗಳನ್ನು ಸಂಗ್ರಹಿಸಿ ದೇವರಿಗೆ ನೈವೇದ್ಯ ಮಾಡಿ ತಾನು ಭುಂಜಿಸಿ ವಿಶ್ರಾಂತಿ ಪಡೆಯುತ್ತಿದ್ದನು. ಸಾಯಂಕಾಲವೂ ಇದೇ ರೀತಿ ಉಪಾಸನೆ ಮುಂತಾದವುಗಳು ನಡೆಯುತ್ತಿದ್ದುವು. ಪ್ರಕೃತಿಯೂ ಕವೇರನೂ ಏಕ ಮನಸ್ಸಿನಿಂದ ಹೀಗೆ ಭಗವತ್ಸೇವೆಯನ್ನು ಅನುದಿನ ನಡೆಸುತ್ತಿದ್ದರು.

ಒಂದು ದಿನ ಸಾಯಂಕಾಲ. ಮುನಿಪುಂಗವನು ಫಲಸಂಗ್ರಹಾರ್ಥವಾಗಿ ಕಾಡುಗಳಲ್ಲಿ ಅಲೆಯುತ್ತ ಹೋಗುತ್ತಿದ್ದನು. ಹಾಗೆ ಹೋಗುತ್ತ ಬಹಳ ಹೊತ್ತು ತಿರುಗಾಡಿ ಬೇಕಾದಷ್ಟು ಹಣ್ಣುಹಂಪಲುಗಳನ್ನು ಸಂಗ್ರಹಿಸಿಕೊಂಡು ಹಿಂತಿರುಗಿದನು. ಆಶ್ರಮವನ್ನು

ಪ್ರವೇಶಿಸುವಾಗ ಅವನಿಗೆ ಆಶ್ಚರ್ಯದ ಮೇಲೆ ಪರಮಾಶ್ಚರ್ಯ. ಅವನ ಕುಟೀರದೊಳಗೆ ಒಂದು ಕಿರಿಯ ಹೆಣ್ಣು ಶಿಶು ಮಲಗಿಕೊಂಡು ಮೇಲೆ ನೋಡುತ್ತ ಕೈಕಾಲು ಬಡಿದುಕೊಂಡು ಅಳುತ್ತಿತ್ತು. ಅದರ ರೋದನಧ್ವನಿಯಿಂದ ಕವೇರನು ವಿಸ್ಮಯಭರಿತನಾದನು. ನಿರ್ಜನ ಪ್ರದೇಶದಲ್ಲಿ ಒಂದು ಅನಾಥ ಶಿಶು! ಹೋಗುವಾಗ ಇರಲಿಲ್ಲ. ಈಗ ಬಂದಿದೆ! ಯಾರೋ ದೇವಾಂಶಸಂಭೂತರು ತಂದು ಮಲಗಿಸಿರಬೇಕು. ಏನದ್ಭುತ! ಆ ಶಿಶುವನ್ನೇ, ಆ ಸರ್ವಾಂಗ ಸುಂದರ ಮನುಷ್ಯ ಬಿಂಬವನ್ನೇ, ಋಷಿಯು ದೃಷ್ಟಿಸಿ ನೋಡಿದನು. ಅದನ್ನು ಎತ್ತಿಕೊಳ್ಳಲು ಲಗುಬಗೆಯಿಂದ ಮುಂದೆ ಹೋದನು. ಮುನಿಶ್ರೇಷ್ಠನ ಹೆಗಲಮೇಲೆ ಶಿಶು**ವು** ಸಮಾಧಾನಹೊಂದಿತು. ಅದು ಶಾಂತವಾಗಿ ಕಣ್ಣರಳಿಸಿ ಸುತ್ತಲೂ ನೋಡುತ್ತಿತ್ತು. ಋಷಿಯ ಆಶ್ಚರ್ಯ ಮೇರೆ ಮೀರಿತು. ಆಶ್ರಮದಿಂದ ಹೊರಗೆ ಮಗುವನ್ನು ಎತ್ತಿಕೊಂಡು ಹೋಗಿ, ಅಲ್ಲಿ ಎಲ್ಲಿಯಾದರೂ ಆ ಮಗುವಿನ ತಂದೆತಾಯಿಯರು ಇರುವರೇ ಎಂದು ಔತ್ಸುಕ್ಯದಿಂದ ಪರೀಕ್ಷಿಸಿದನು. ನಿಸರ್ಗವು ತಾನೇ ಮಗುವಿನ ತಾಯಿಯೆನ್ನುವಂತೆ ಗಾಳಿ ಬೀಸಿ ಸಮೀಪದ ರಂಜದ ಮರದಿಂದ ಹತ್ತೆಂಟು ರಂಜದ ಹೂವುಗಳನ್ನು ಆ ಮಗುವಿನ ಮೇಲೆ ಬೀರಿತು.

ಕವೇರನು ಮಗುವನ್ನು ಮುದ್ದಿನಿಂದ ಲಾಲಿಸಿಪಾಲಿಸಿ ರಕ್ಷಿಸಿದನು. ಮಗುವು ದಿನದಿಂದ ದಿನಕ್ಕೆ ಚೆನ್ನಾಗಿ ಬೆಳೆಯುತ್ತಿದ್ದಿತು. ತನ್ನ ಬಾಲಲೀಲೆಗಳಿಂದ ಕವೇರನನ್ನು ಸಂತೋಷಪಡಿಸತೊಡಗಿತು. ಮುಂದೊಂದು ದಿವಸ ಆ ಮಾರ್ಗವಾಗಿ ಉತ್ತರಕ್ಕೆ ಪ್ರಯಣಿಸುತ್ತಿದ್ದ ಕಾಶ್ಯಪ ಋಷಿಯು ಕವೇರಾಶ್ರಮಕ್ಕೆ ಬಂದು ವಿಶ್ರಮಿಸಿದನು. ಅವನು ಈ ಹೆಣ್ಣು ಮಗುವಿನ ವಿಷಯ ತಿಳಿದು ವಿಸ್ಮಿತನಾದನು. ಸ್ವಲ್ಪ ಹೊತ್ತು ಮನಸ್ಸಿನಲ್ಲಿಯೇ ಚಿಂತಿಸಿ ಯೋಗದೃಷ್ಟಿಯಿಂದ ರಹಸ್ಯವನ್ನು ತಿಳಿದು ಕವೇರನಿಗೆ ಹೀಗೆಂದು ಹೇಳಿದನು: **"**ಬ್ರಹ್ಮನ ಮಾನಸ ಪುತ್ರಿಯಾದ ಈಕೆ ಅವತಾರಸ್ತ್ರೀ. ಘನೋದ್ದೇಶದಿಂದ ಭೂಮಿಯಲ್ಲಿ ಜನನ ಪಡೆದಿದ್ದಾಳೆ. ಇವಳ ಹೆಸರು ಲೋಪಾಮುದ್ರೆ. ಆದರೂ ನಿನ್ನ ಪ್ರೀತಿಯ ಸಾಕುಮಗಳಾದುದರಿಂದ ಕಾವೇರಿಯೆನ್ನುವ ಹೆಸರಿನಿಂದ ಲೋಕಪ್ರಖ್ಯಾತಳಾಗುವಳು.**"**

ಸ್ವಾಭಾವಿಕವಾಗಿಯೇ ಲೋಪಾಮುದ್ರೆಯಲ್ಲಿ ಕವೇರನಿಗಿದ್ದ ಪ್ರೇಮ ಈ ನೂತನ ಜ್ಞಾನದಿಂದ ಆತ್ಮೀಯತೆಯಾಗಿ ಪರಿಣಮಿಸಿತು. ಆತ್ಮೀಯತೆಗೆ ಮಹತ್ತ್ವವೂ ಸೇರಿತು. ಆ ಮಗು ಅವನಿಗೆ ಇನ್ನಷ್ಟು ಪ್ರಿಯವಾದುದಾಯಿತು. ಹೀಗೆ ಎಂಟು ಹತ್ತು ವರುಷಗಳು ಸಂದುವು. ಲೋಪಾಮುದ್ರೆಯು ಕವೇರ ಮಹರ್ಷಿಯ ಕಣ್ಮಣಿಯಾಗಿ, ಅವನಿಗೆ ಸರ್ವವಿಧದಲ್ಲಿಯೂ ಮಗಳಾಗಿ ಸಹಾಯಕಿಯಾಗಿ, ಅವನನ್ನು ಒಂದು ಕ್ಷಣವೂ ಅಗಲದೇ ಬೆಳೆದಳು. ತಂದೆ, ಮಗಳು ಪಾಡಿ ಬೆಟ್ಟಕ್ಕೆ ಜೀವಕಳೆ ತುಂಬುತ್ತ ತಮ್ಮ ದಿವ್ಯಾದರ್ಶ ಜೀವನದಿಂದ ಆ ಪ್ರದೇಶವನ್ನು ಪಾವನಗೊಳಿಸಿದ್ದರು. ಋಷ್ಯಾಶ್ರಮವು ಅನೇಕ ಜೀವಿಜಂತುಗಳ ಬಿಡಾರವಾಗಿದ್ದಿತು. ಜಿಂಕೆಗಳ ಆಟ, ಕಾಡುಕೋಣಗಳ ಓಟ, ಹುಲಿಗಳ ಗಂಭೀರವಾದ ಸ್ನೇಹಮಯವಾದ ನಡಿಗೆ, ಆನೆಗಳ ಸೇವೆ, ದನಕರುಗಳು ವಾತ್ಸಲ್ಯದ ಕರೆಯುವಿಕೆ ಇವುಗಳಿಂದ ಕೂಡಿದ ಆಶ್ರಮವು ಒಂದು ಕಿರಿಯ ಸ್ನೇಹಪೂರಿತ ಜಗತ್ತೇ ಆಗಿತ್ತು. ಪಕ್ಷಿಸಂಕುಲಗಳು ನಿತ್ಯವೂ ಸ್ವರ್ಗೀಯಗಾನವನ್ನು ವಿವಿಧ ರಾಗಗಳಲ್ಲಿ ಹಾಡಿ ಆಶ್ರಮದ ಸಂತೋಷವನ್ನು ವರ್ಧಿಸುತ್ತಿದ್ದುವು. ಹಸ್ತಿದಂತಗಳ ಸಾರದಿಂದಲೂ, ಲತೆಗಳ ಕೋಮಲತೆಯಿಂದಲೂ, ಪುಷ್ಪಗಳ ಸೌರಭ್ಯದಿಂದಲೂ, ವಿಹಂಗಮಗಳ ಇಂಚರದಿಂದಲೂ, ಪ್ರಕೃತಿ ಸೌಂದರ್ಯ ಸರ್ವಸ್ವದಿಂದಲೂ ಕಂಡರಸಿ ನಿರ್ಮಿತವಾದ ದಿವ್ಯ ಮೂರ್ತಿಯಂತಿದ್ದ ಲೋಪಾಮುದ್ರೆಯು ಆ ವಾತಾವರಣದ ಜೀವವಾಗಿದ್ದಳು, ಉಸಿರಾಗಿದ್ದಳು. ಋಷಿ ಕನ್ಯೆಯ ದಿವ್ಯಪ್ರೇಮಪೂರಿತ ಸನ್ನಿಧಿಯನ್ನು ಪ್ರತಿ ಜೀವಜಂತುವೂ ಪ್ರತಿನಿತ್ಯವೂ ಬಯಸುತ್ತಿದ್ದಿತು.

ವಸಂತಮಾಸದ ಸುಪ್ರಭಾತ. ದಿನಮಣಿಯು ಬೆಳಕಿನ ಹುಡಿಗಳನ್ನು ತರುನಿಚಯಗಳ ಮೇಲೆರಚಿ ಆಟವನ್ನು ನೋಡುತ್ತಿದ್ದನು, ರಾರಾಜಿಸುತ್ತಿದ್ದನು. ಈ ಹುಡಿಗಳಲ್ಲಿ ಕೆಲವು ಒಂದಾಗಿ ಸೇರಿ ಹೂವುಗಳಾಗಿದ್ದಂತೆ ಮರಗಳ ಮೇಲೆ ಅಂಟಿಕೊಂಡಿದ್ದುವು. ಆನಂದ ಸಮಾಧಿಯಲ್ಲಿ ಗಿರಿವನಗಳಲ್ಲಿ ತಲ್ಲೀನತೆ ಹೊಂದಿದ್ದುವು. ವಿಹಂಗಮಗಳು ಪ್ರಾತರ್ಗಾನವನ್ನು ಹಾಡುತ್ತ ನಾನಾ ದಿಗಭಿಮುಖವಾಗಿ ಹಾರಾಡಿ ನಲಿಯುತ್ತ ಹೋಗುತ್ತಿದ್ದುವು. ಚೈತನ್ಯ ಸ್ರೋತಸ್ಸು ಎಲ್ಲೆಲ್ಲಿಯೂ ತುಂಬಿ ಪ್ರವಹಿಸುತ್ತಿತ್ತು. ಆ ಮಂಗಳ ಸನ್ನಿವೇಶದಲ್ಲಿ ಮಹರ್ಷಿಯು ದೇವಾರ್ಚನೆಯನ್ನು ಏಕಾ**ಗ್ರತೆ**ಯಿಂದ ಮಾಡುತ್ತಿದ್ದನು. ಲೋಪಾಮುದ್ರೆಯು ಪರಿವಾರದ ಜಿಂಕೆಗಳಿಂದ ಆವೃತಗಳಾಗಿ ವನದಲ್ಲಿ ಸಂಚರಿಸುತ್ತಿದ್ದಳು, ನಾಲ್ಕು ಹಣ್ಣುಗಳನ್ನು ಕೊಯ್ಯುವಳು, ಎರಡನ್ನು ಹರಿಣಶಿಶುಗಳಿಗೆ ತಿನ್ನಿಸುವಳು, ಇನ್ನೆರಡನ್ನು ಹಸುವಿನ ಕರುಗಳಿಗೆ ತಿನ್ನಿಸುವಳು. ಆಗ ಎಳೆಯ ಗರಿಕೆ ಹುಲ್ಲು ಚಿಗುರಿರುವುದು ಕಾಣುವುದು. ಅವುಗಳನ್ನು ಪಲ್ಲವಕೋಮಲವಾದ ಅವಳ ಕೈಬೆರಳುಗಳಿಂದ ಚಿವುಟಿ ಕೊಯ್ದು ಆ ಕಿರಿಯ ಹಸುಗಳಿಗೆ ಕೊಡುವಳು. ಅವುಗಳಿಗೆಲ್ಲ ಬಂಧುರ ಸ್ನೇಹದಿಂದ ತಾಯಿಯಾಗಿ ಹಿರಿಯಕ್ಕನಾಗಿ ಲೋಪಾಮುದ್ರೆಯು ಮರದಿಂದ ಮರಕ್ಕೆ ಗಿಡದಿಂದ ಗಿಡಕ್ಕೆ ಅಲೆಯುತ್ತಿದ್ದಳು. ಗಾಳಿಯ ಸ್ವಚ್ಛಂದತೆಯಿಂದ ಅಷ್ಟೇ ಪಾವಿತ್ರ್ಯ ಪಾರಿಶುದ್ಧ್ಯಗಳಿಂದ ಅಲ್ಲೆಲ್ಲ ಸಂಚರಿಸುತ್ತಿದ್ದಳು. ಪ್ರಕೃತಿದೇವಿಯೇ ಮೈತಳೆದು ಬಂದಂತೆ ಅಡ್ಡಾಡುತ್ತಿದ್ದಳು. ಅಲ್ಲಿ ಒಂದು ನೇರಿಳೆಯ ಮರವಿದ್ದಿತು. ಅದರ ಸ್ವಲ್ಪ ಎತ್ತರದ ಕೊಂಬೆಯಲ್ಲಿ ಕರಿದಾದ ದೊಡ್ಡ ಮಣಿಗಳನ್ನು ಪೋಣಿಸಿದಂತೆ ತುಂಬ ಹಣ್ಣುಗಳಿದ್ದುವು. ಅವುಗಳನ್ನು ಕೊಯ್ದು ತೆಗೆದುಕೊಂಡು ಹೋಗಬೇಕೆಂದು ಒಂದು ಅಡರಿನ ಸಹಾಯದಿಂದ ಹೊಡೆಯಲು ಪ್ರಯತ್ನಿಸಿದಳು. ಆದರೆ ಕೊಂಬೆಯು ಕೈಗೆ ಎಟುಕಲಿಲ್ಲ. ಪುನಃ ಪ್ರಯತ್ನ, ಪುನಃ ವಿಫಲ. ಹೀಗೆ ನಾಲ್ಕೆಂಟು ಸಲ ಪ್ರಯತ್ನಿಸಿದಳು. ಒಂದೆರಡು ಹಣ್ಣುಗಳ ಕೆಳಗೆ ಉದುರಿಬಿದ್ದು ತರಗೆಲೆ ಹುಲ್ಲುಗಳ ಮಧ್ಯೆ ಮಾಯವಾದವು. ಫಲಸಂಕುಲ ಲೋಪಾಮುದ್ರೆಯನ್ನು ಅಣಕಿಸುವಂತೆ ನೋಡಿತು. ಮುನಿಸುತೆಯು ಬೆವೆತು ಹೋದಳು. ಶ್ರಮ, ಅದಕ್ಕಿಂತಲೂ ಹೆಚ್ಚಾಗಿ ಅಭಿಮಾನಭಂಗ. ಅವಳ ಹಣೆಯಲ್ಲಿ ಕಾಣಿಸಿಕೊಂಡ ಸ್ವೇದಬಿಂದುಗಳಿಂದ ಸೂರ್ಯನು ಕಾಂತಿಬೀರಿದನು. ಅಳಕದ ಕೊನೆಯಿಂದ ಒಂದೆರಡು ಹನಿಗಳು ಜಗುಳಿದುವು. ಮತ್ತೊಮ್ಮೆ ಕೊನೆಯ ಪ್ರಯತ್ನವೆಂದು ಹಾರಿ ಹೊಡೆದಳು. ಆದರೆ ಕೊಂಬೆಯು ಬಳುಕಿ ತಪ್ಪಿಸಿಕೊಂಡಿತು. ಇನ್ನು ಆ ಕಾರ್ಯಕ್ರಮವನ್ನು ಬಿಡಬೇಕೆಂದು ದಣಿದು ನಿಂತಿದ್ದಾಗ **"**ನಾನು ಕೊಯ್ದು ಕೊಡುವೆನು**"** ಎಂಬ ಗಂಡು ಆಶರೀರವಾಣಿಯು ಅವಳಿಗೆ ಫಕ್ಕನೆ ಕೇಳಿಸಿತು.

ಲೋಪಾಮುದ್ರೆಯು ಬೆಚ್ಚಿ ಬೆದರಿ ಕಕ್ಕಾಬಿಕ್ಕಿಯಾಗಿ ನಾರುಡೆಯನ್ನು ಸರಪಡಿಸಿಕೊಂಡು ಧ್ವನಿಯು ಬಂದ ದಿಕ್ಕಿಗೆ ತಿರುಗಿ ನೋಡಿದಳು. ಅಲ್ಲಿ ಒಬ್ಬ ತರುಣ ಋಷಿವರ್ಯನು ಗಂಭೀರವಾಗಿ ನಿಂತಿದ್ದನು. ಬ್ರಹ್ಮಚರ್ಯದ, ತಪಸ್ಸಿನ ತೇಜಸ್ಸಿನಿಂದ ಅವನು ಅಲ್ಲೆಲ್ಲ

ಪ್ರಭೆಬೀರುವಂತೆ ತೋರುತ್ತಿದ್ದನು. ಅವನ ಸೌಂದರ್ಯದಲ್ಲಿ ದೇವತ್ವವೇ ಅಧಿಕವಾಗಿದ್ದಿತು. ಸಚ್ಚೀಲ, ಸಚ್ಚಾರಿತ್ರ್ಯಗಳಿಗೆ ಅವನು ಪ್ರತೀಕದಂತಿದ್ದನು. ಆ ದಿವ್ಯರೂಪದಿಂದ ಭ್ರಮಿಸಿ ಲೋಪಾಮುದ್ರೆಯು ಅವನನ್ನೇ ದಿಟ್ಟಿಸಿ ನೋಡಿದಳು. ಮತ್ತೆ ತನ್ನ ಹೆಣ್ತನದ ಅರಿವಾಗಿ ತಲೆತಗ್ಗಿಸಿದಳು.

ಋಷಿಯು ಮುಂದೆಸಾಗಿ ಆ ನೇರಳೆಯ ಹಣ್ಣುಗಳನ್ನು ಸುಲಭವಾಗಿ ಕೊಯ್ದು ಲೋಪಾಮುದ್ರೆಗೆ ಕೊಡಲು ಹೋದನು. ಅವುಗಳನ್ನು ಅವಳು ಸ್ವೀಕರಿಸುವಾಗ ಕೃತಜ್ಞತೆಗಿಂತಲೂ ಅಧಿಕವಾಗಿ ಲಜ್ಜೆ ಅಳುಕುಗಳಿಂದ ಅವಳ ಮುಖವು ಕೆಂಪಾಗಿ ಬಿರಿಯುವಂತಾಗಿತ್ತು.

ಧರ್ಮಪುರುಷ ಋಷಿಯು ಮಾತು ಮುಂದುವರಿಸಿದನು: "ಭದ್ರೇ! ನನ್ನ ಹೆಸರು ಅಗಸ್ತ್ಯನೆಂದು."

ಅಗಸ್ತ್ಯನ ಹೆಸರು ಕೇಳಿ ಲೋಪಾಮುದ್ರೆಯಲ್ಲಿ ಏನೋ ಒಂದು ಭಾವನೆ ಸ್ಫುರಿಸಿದ ಹಾಗಾಯಿತು. ಅದು ಆನಂದವಿರಬಹುದು ಅಥವಾ ಬೇರೆ ಯಾವುದೋ ಒಂದು ಉದ್ದೇಶದ ಸ್ಮರಣೆಯಿರಬಹುದು. ಅವಳ ನಯನದ್ವಯಗಳಲ್ಲಿ ಕಾಂತಿಯು ಮಿಂಚಿತು. ಅವಳು ಋಷಿಯನ್ನು ಇನ್ನೊಮ್ಮೆ ದಿಟ್ಟಿಸಿ ನೋಡಿ ಅಧೋವದನೆಯಾದಳು. ಕೈಬೆರಳುಗಳು ಸೆರಗನ್ನು ಸುರುಳಿ ಮಾಡುತ್ತಿದ್ದುವು. ಕಾಲ್ಬೆರಳುಗಳು ನೆಲ ಕೆರೆಯುತ್ತಿದ್ದವು.

ಋಷಿಯು ಮಾತಾಡಿದನು "ಕವೇರಾಶ್ರಮಕ್ಕೆ ನಾನು ಹೋಗುವವನು. ಅವನ ಪುತ್ರಿಯನ್ನು ವಿವಾಹವಾಗಲು ಬಂದಿದ್ದೇನೆ."

ಲೋಪಾಮುದ್ರೆಗೆ ಸ್ಫುರಿಸಿದ ಪೂರ್ವಸ್ಮರಣೆ ಸ್ಪಷ್ಟವಾಯಿತು.

"ಈಗ ನೀನೇ ಆ ಕುವರಿ ಎನ್ನುವುದರಲ್ಲಿ ನನಗೇನೇನೂ ಸಂದೇಹವಿಲ್ಲ. ಸರಿಯೇ?"

ಲೋಪಾಮುದ್ರೆಯ ಮೌನ ಸಮ್ಮತಿಯನ್ನು ವ್ಯಕ್ತಪಡಿಸಿತು.

"ನೀನು ನನ್ನ ಸಹಧರ್ಮಿಣಿಯಾಗಿ ನನ್ನನ್ನು ಧನ್ಯನನ್ನಾಗಿಸಬೇಕು."

ಲೋಪಾಮುದ್ರೆಯು ಅಳುಕಲಿಲ್ಲ; ಅವಳು ಸಾತ್ತ್ವಿಕ ಗುಣಸಂಪನ್ನೆಯಾದ ಋಷಿಕನ್ಯೆ, ಯಾರಿಗೂ ಹೆದರಬೇಕದ ಆವಶ್ಯಕತೆಯಿರಲಿಲ್ಲ.

"ಪೂಜ್ಯರೇ ! ನಿಮ್ಮ ಮಾತು ಸರಿ. ಆದರೆ ನಾನು ಜನ್ಮತಾಳಿರುವ ಉದ್ದೇಶ ಬೇರೆಯೇ ಇದೆಯೆಂದು ನನಗೀಗ ಅರಿವಾಗುತ್ತಿದೆ. ಆದುದರಿಂದ ನಿಮ್ಮನ್ನು ವಿವಾಹವಾಗುವುದು ಸಾಧ್ಯವಲ್ಲದ ಮಾತು."

"ಸ್ತ್ರೀ ಜನ್ಮದ ಉದ್ದೇಶ ಸತ್ಕುಲಪ್ರಸೂತನಾದ ಪತಿಯನ್ನು ಹೊಂದಿ ದೇವಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿ ಪತಿವ್ರತೆಯಾಗಿದ್ದು ಸತ್ಪುತ್ರ ಪುತ್ರಿಯರನ್ನು ಪಡೆದು ಪತಿಯೊಂದಿಗೆ ಪರಲೋಕವನ್ನೈದುವುದು. ಬೇರೆ ಏನಿದೆ?" ಅಗಸ್ತ್ಯನು ಸ್ಪಷ್ಟವಾಗಿ ಹೇಳಿದನು.

"ಅದು ಸರಿ. ಆದರೆ ನಾನು ನದಿಯಾಗಿ ಹರಿದು ಜನರನ್ನು ಸಂತೃಪ್ತಿಗೊಳಿಸಲು ಜನ್ಮತಾಳಿದವಳು ಬ್ರಹ್ಮದೇವನ ಆಜ್ಞೆ ಹಾಗಿದೆ."

"ನನ್ನನ್ನು ವಿವಾಹವಾಗಿಯೂ ಆ ಉದ್ದೇಶವನ್ನು ಸಫಲಗೊಳಿಸಬಹುದು. ಆಲೋಚನೆ ಮಾಡಿ ನೋಡು."

ಲೋಪಾಮುದ್ರೆಯು ಚಿಂತಿಸಿದಳು.

"ಆಗಲಿ, ನಾನು ನಿಮ್ಮ ಸಹಧರ್ಮಿಣಿಯಾಗಿರುವಾಗ ನೀವು ಎಂದೂ ನನ್ನನ್ನು ಅಗಲಿ ಹೋಗಕೂಡದು. ಹಾಗೆಲ್ಲಿಯಾದರೂ ಹೋದದ್ದಾದರೆ ನಾನು ನಿಮ್ಮನ್ನು ಎಡೆಬಿಡದೆ ಮೂರುಸಲ ಪತಿದೇವ – ಪತಿದೇವ– ಪತಿದೇವ ಎಂದು ಕರೆಯುವಷ್ಟು ಹೊತ್ತು ಮಾತ್ರ ಅಗಲಿರಬಲ್ಲೆನು. ಅಷ್ಟರಲ್ಲಿ ನೀವು ಬಾರದಿದ್ದರೆ ನಾನು ನದಿಯಾಗಿ ಹರಿದು ಹೋಗುವೆನು."

ಅಗಸ್ತ್ಯನು ಪರಮಸಂತೋಷದಿಂದ ಈ ನಿಬಂಧನೆಗೆ ಒಪ್ಪಿಕೊಂಡನು.

ಮುಂದೆ ಅವರಿಗೆ ಕವೇರಮಹರ್ಷಿಯ ನೇತೃತ್ವದಲ್ಲಿ ಅಗ್ನಿಸಾಕ್ಷಿಯಾಗಿ ವಿವಾಹವು ನೆರವೇರಿತು. **ಮಂಗ**ಳಗೀತವನ್ನು ಹಕ್ಕಿಗಳು ಹಾಡಿದುವು. ಜಿಂಕೆಮರಿಗಳು ಹಸುವಿನ ಕರುಗಳು ಇತರ ವನ್ಯಮೃಗಗಳು ನರ್ತನ ಮಾಡಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದುವು. ಆನೆಗಳು ಘೀಳಿಟ್ಟು ಈ ಮಂಗಳ ವಿವಾಹಬಂಧವನ್ನು ದಿಗ್ದಿಗಂತಗಳಿಗೆ ಸಾರಿದುವು. ತಂಗಾಳಿ ಹಿತಕರವಾಗಿ ಬೀಸಿ ವಧೂವರರಿಗೆ ಚಾಮರ ಬೀಸಿತು. ಗಿಡಮರಗಳಿಂದ ಪರಿಪರಿಯ ಪುಷ್ಪಗಳು ಅವರ ಮೇಲೆ ಉದುರಿಬಿದ್ದು ಸೇಸೆ ಎರಚಿದುವು. ಕವೇರ ಮಹರ್ಷಿಯು ಆನಂದಾತಿಶಯದಿಂದ, ತುಂಬಿಬಂದಿದ್ದ ಗಂಟಲಿನಿಂದ ಮಾತು ಹೊರಡದಿದ್ದರೂ, ಗದ್ಗ**ದ** ಕಂಠನಾಗಿ ತರುಣದಂಪತಿಗಳನ್ನು ಹರಸಿದನು.

"ಅಗಸ್ತ್ಯನೇ ! ಈ ಕೋಮಲ ಪುಷ್ಪವನ್ನು ರಕ್ಷಿಸುವ ಪವಿತ್ರ ಕಾರ್ಯ **ಇನ್ನು** ಮೇಲೆ ನಿನ್ನದು ಭಗವಂತಾರಾಧನೆ ನಿರ್ವಿಘ್ನವಾಗಿ ಸಾಗಲಿ, ಮಗಳೇ! ಪತಿದೇವನ ಒಲವೇ ನಿನ್ನ ಒಲವೆಂದು ತಿಳಿದು ಅನುಕೂಲೆಯಾಗಿದ್ದ ಅವನು ಸದಾ ಸನ್ಮಾರ್ಗಗಾಮಿಯಾಗಿರುವಂತೆ ವರ್ತಿಸು. ನಿಮಗೆ ಮಂಗಳವಾಗಲಿ."

ಹೃದಯವು ಪೂರ್ಣವಾದಾಗ ಜಿಹ್ವೆಗೆ ಕೆಲಸವಿಲ್ಲ.

ಅಗಸ್ತ್ಯ ಕಾವೇರಿಯರು ಪಾಡಿಪರ್ವತದಿಂದ ಅಗಸ್ತ್ಯಾಶ್ರಮದೆಡೆಗೆ ತೆರಳಿದರು. ಅಗಸ್ತ್ಯಾಶ್ರಮ ಬ್ರಹ್ಮಗಿರಿಯ ತಪ್ಪಲಿನ ಸರೋವರದ ಸಮೀಪ ಶೋಭಿಸುತ್ತಿದ್ದಿತು. ನೂತನ ದಂಪತಿಗಳು ಅಲ್ಲಿ ಆನಂದದಿಂದ ದೇವಕಾರ್ಯದಲ್ಲಿ ಉದ್ಯುಕ್ತರಾಗಿ ಸುಖಸಂಸಾರ ಜೀವನ ನಡೆಸುತ್ತಿದ್ದರು. ಶಿಷ್ಯರಿಗೆ ಅವರೇ ತಂದೆ ತಾಯಿಯರಾಗಿದ್ದರು. ಗುರು ಸಾಕ್ಷಾತ್ ಪರಬ್ರಹ್ಮನಾದ ಮೇಲೆ ಬೇರೆ ಏನು ಬೇಕಾಗಿದೆ ಶಿಷ್ಯರಿಗೆ? ಅಗಸ್ತ್ಯನು ತನ್ನ ಮಾತಿನ ಪ್ರಕಾರ ಒಂದು ಕ್ಷಣ ಕಾಲವೂ ಕಾವೇರಿಯನ್ನು ಅಗಲದೇ ಇದ್ದನು. ಅವನು ದೂರದ ಕ್ಷೇತ್ರಗಳಿಗೆ ಸ್ಥಳಗಳಿಗೆ ಯಾತ್ರೆ ಹೋಗುವುದಾದರೆ ಆಗ ಪತ್ನಿಯನ್ನು ಜತೆಯಲ್ಲಿಯೇ ಕರೆದೊಯ್ಯುತ್ತಿದ್ದನು. ಇವರ ಈ ಗೃಹಸ್ಥಾಶ್ರಮಜೀವನ ಹಲವಾರು ವರುಷ ಹೀಗೆ ಸುಖಮಯವಾಗಿ ಸಾಗಿತು.

ಗಿರಿಯು ಮಹಾತಪಸ್ವಿ, ಚಿರತಪಸ್ವಿ. ಅದರ ತಪಸ್ಸಿನ ಪುಣ್ಯಪ್ರಭಾವವನ್ನು ಗಿರಿಯಿಂದ ಸಂಜನಿಸಿ ಪ್ರವಹಿಸುವ ನದಿಯಲ್ಲಿ ಕಾಣಬೇಕು. ಪುರುಷನ ಪ್ರತೀಕ ಪರ್ವತವಾದರೆ ಪ್ರಕೃತಿಯ ಪ್ರತೀಕ ನದಿ. ಪ್ರಕೃತಿ ಪುರುಷನ ಕೃತಿ; ಹಾಗೆ ನದಿ ಪರ್ವತದ ಕೃತಿ. ಪುರುಷ ಪ್ರಕೃತಿಗಳು ಹೇಗ ಅವಿಭಾಜ್ಯಗಳೋ ಹಾಗೇ ಪರ್ವತ ನದಿ. ಬ್ರಹ್ಮಗಿರಿಯ ಶತಕೋಟಿ ಶತಮಾನಗಳ ತಪಸ್ಸು ಸಿದ್ಧಿಸುವ ಪರ್ವಕಾಲ ಸನ್ನಿಹಿತವಾಗುತ್ತಿತ್ತು. ಚಂದ್ರವರ್ಮನಿಗೆ ಬ್ರಹ್ಮದೇವನಿತ್ತ ವರವು ಜಲರೂಪ ಪಡೆಯುವ ಪುಣ್ಯಕಾಲ ಪ್ರಾಪ್ತವಾಗುತ್ತಿತ್ತು. ಕಾವೇರಿಯು ಸರ್ವಜನ ಪ್ರಿಯೆಯಾಗಿ ನದಿಯಾಗಿ ಹರಿಯುವ ಸುಕಾಲ ಸಮೀಪವಾಗುತ್ತಿತ್ತು. ಲೋಪಾಮುದ್ರೆಯ ಅವತಾರ ಸಂಪೂರ್ಣವಾಗಿ ಕಾವೇರೀನಾಮದಿಂದ ಪ್ರವಹಿಸುವ ಸುಸಂದರ್ಭ ಬಂದೊದಗಿತ್ತು.

ಒಂದು ರಾತ್ರಿ. ನಿಶೆಯು ಕಪ್ಪಾಗಿ ಗಿರಿವನಗಹ್ವರಗಳನ್ನು ಒಟ್ಟು ಬೆಸೆದು ಒಂದು ಮಾಡಿ ಹಬ್ಬಿತ್ತು. ಅಖಂಡ ಬ್ರಹ್ಮಾಂಡವು ಸಾಂದ್ರತಮಸ್ಸಿನ ಹಚ್ಚಡದಿಂದ ಆವೃತವಾಗಿದ್ದಿತು. ಈ ಆವರಣದಿಂದ ತಾವು ಮಾತ್ರ ಬೇರೆ ಎನ್ನುವ ಪ್ರತ್ಯೇಕತ್ವವನ್ನು ಸಾರುವ ತಾರೆಗಳು ತಮಸ್ಸಿನ ಮೊತ್ತವನ್ನು ಭೇದಿಸಲಾರದೆ ಕಣ್ಣುಗಳನ್ನು ಮಿಟಕಿಸುತ್ತಿದ್ದುವು. ಮೌನವು ಕರಗಿ ನೀರಾಗಿ ಹರಿದು ಅಲ್ಲೆಲ್ಲ ಶ್ಯ್ ಶ್ಯ್ ಎನ್ನುವ ಅವ್ಯಕ್ತ ಅಸ್ಪಷ್ಟ ನಿನದವನ್ನು ಪ**ಸರಿ**ಸಿತ್ತು. ಇಂತಹ ಮಧ್ಯರಾತ್ರಿಯ ನಿಶ್ಚಲತೆಯನ್ನು, ನೀರವತೆಯನ್ನು ಮೂಕ ವಾತಾವರಣವನ್ನು ಭೇದಿಸಿ ಬಿರಿದು ಒಂದು ಮಹಾಕ್ರಂದನಸ್ವರ ಅಗಸ್ತ್ಯಮಹರ್ಷಿಯ ಕರ್ಣಪಟಲವನ್ನು ಬಡಿಯಿತು. ಬಡಿದು ಅವನನ್ನು ಎಬ್ಬಿಸಿತು: "ಗುರುಗಳೇ ರಕ್ಷಿಸಿ ರಕ್ಷಿಸಿ" ಎಂದು ಕೇಳಿಸಿದ ಆ ದೀನವಾಣಿ ಕರ್ಣಕಠೋರವಾಗಿತ್ತು. ಪುನಃ ಪುನಃ ಅದೇ ಕರುಣಾಜನಕ ಸ್ವರ, ಪ್ರಿಯ ಶಿಷ್ಯ ಸು**ಕುಮಾರ** ರೋಹಿತನ ಆರ್ತಧ್ವನಿ. ಮಧ್ಯರಾತ್ರಿಯ ಶಾಂತಿಯು ಭಂಗವಾಗಿ, ಮೌನಸಮುದ್ರ ಕ್ಷೋಭೆಗೊಂಡಿತು. ಅಗಸ್ತ್ಯನ ಮನಸ್ಸು ಅದರ ಎರಡರಷ್ಟು ಅಶಾಂತಿಯನ್ನು ತಳೆಯಿತು. ಸುಖವಾಗಿ ನಿದ್ರಿಸಿದ್ದ ಶಿಷ್ಯನಿಗೆ ಈಗ ಏನಾಯಿತೋ? ಯಾವ ದುಷ್ಟ ಶಕ್ತಿ ಅವನನ್ನು ಸೆಳೆದುಕೊಂಡು ಹೋಗುತ್ತಿದೆಯೋ? ಮತ್ತೆ ಮತ್ತೆ ಅದೇ ದುಃಖಿತ ಧ್ವನಿಯನ್ನು ಆಲಿಸಿ ಋಷಿಯು ಶಿಷ್ಯರಕ್ಷಣೆಗಾಗಿ ಎದ್ದು, ಶಾಂತವಾಗಿ ನಿದ್ರಿಸುತ್ತಿದ್ದ ಪ್ರಿಯಪತ್ನಿಯನ್ನು ಒಮ್ಮೆ ನೋಡಿ, ಆಶ್ರಮದಿಂದ ಹೊರಗೆ ಧಾವಿಸಿ ಓಡಿದನು. ರೋಹಿತನ ಕರುಣಾಜನಕ ಸ್ವರ ಅಗಸ್ತ್ಯನಿಗೆ ಮಾಯಾಮೃಗವಾಯಿತು. ಆ ಸ್ವರ ಬಂದ ದಿಕ್ಕನ್ನರಸಿ ಅವನು ಮಿಂಚಿನ ವೇಗದಿಂದ ಓಡುತ್ತಿದ್ದನು. ಅಗಸ್ತ್ಯನು ಮುಂದೆಮುಂದೆ ಧಾವಿಸಿದಂತೆ ಆ ಸ್ವರವೂ ದೂರ ಕಾಡಿನಲ್ಲಿ ಜಿಗಿಯುತ್ತಿತ್ತು. ರಾತ್ರಿಯಲ್ಲಿ ಕಲ್ಲುಮುಳ್ಳಿಡಿದ ದಾರಿಯಲ್ಲಿ ಬಳ್ಳಿಹಂಬುಗಳನ್ನು ದಾಟಲಾರದೆ ಬಿದ್ದು ಎ**ದ್ದು** ಗುರುವು ಶಿಷ್ಯರಕ್ಷಣೆಗಾಗಿ ಓಡುತ್ತಿದ್ದನು. ಕೆಸರಿನ ಮೇಲೆ ಬೆಳೆದ ಹುಲ್ಲನ್ನು ಮೆಟ್ಟಿ ಜಾರಿ ಬೀಳುತ್ತಿದ್ದನು. ಬೀಳುವಾಗ ಕೈ ಹಿಡಿಯುವುದು ಒಂದು ಮುಳ್ಳಿನ ಗಿಡವನ್ನು, ಹೀಗೆ ಕೈ ಮೈ ಎಲ್ಲ ಗಾಯ. ದೇಹದ ವೇದನೆಯನ್ನು ಪರಿಗಣಿಸದೇ ಶಿಷ್ಯವತ್ಸಲನು ಕಂಗೆಟ್ಟು ಬಳಲಿ ತೊಳಲಿದನು. ನಿಬಿಡಾರಣ್ಯದ ನಡುವೆ ಕಾರ್ಗತ್ತಲೆಯ ಒಡಲೊಳಗೆ ರೋಹಿತನನ್ನು ಕೂಗಿ ಕರೆದು ಆಶ್ವಾಸನೆಯಿತ್ತನು. ಆದರೆ ಮತ್ತೆ ರೋಹಿತನ ಕರೆ ಕೇಳಿಸಲಿಲ್ಲ. ಅಗಸ್ತ್ಯನ ಭರವಸೆ ಅರಣ್ಯರೋದನವಾಯಿತು. ಶಿಷ್ಯನ ಸುಳಿವಿಲ್ಲ, ಧ್ವನಿಯಿಲ್ಲ. ಇನ್ನೇನು ಮಾಡುವುದೆಂದು ತಿಳಿಯದೆ ಒಂದು ನಿಮಿಷ ಚೇತರಿಸಿಕೊಳ್ಳಲು ಋಷಿಯು ನಿಂತನು. ಆಗ ಅವನಿಗೆ ತಾನು ಏಕಾಂಗಿಯಾಗಿ ಆಶ್ರಮದಲ್ಲಿ ಬಿಟ್ಟುಬಂದಿದ್ದ ಪ್ರಿಯಪತ್ನಿಯ ನೆನಪಾಗಿ ಉದ್ವೇಗವು ಮತ್ತುಷ್ಟು ಉಮ್ಮಳಿಸಿತು. ಬೆಟ್ಟವನ್ನಿಳಿದುದಕ್ಕಿಂತಲೂ ತ್ರಿಗುಣಿತ ವೇಗದಿಂದ ಆಶ್ರಮದೆಡೆಗೆ ಏರಿ ಏರಿ ಓಡಿದನು. ಶಿಷ್ಯರು ಆಶ್ರಮದಲ್ಲಿರುವರಲ್ಲ ಏನೂ ಭಯವಿಲ್ಲ ಎಂದು ಮನಸ್ಸಿನ ಒಂದು ಭಾಗ ಸಮಾಧಾನ ಹೇಳುತ್ತಿದ್ದರೆ ಇನ್ನೊಂ**ದು** ಭಾಗ ಪ್ರತಿಜ್ಞೆಗೆ ಭಂಗ ಬಂದಿತಲ್ಲ, ಕಾವೇರಿಯು ಇದನ್ನು ಸಹಿಸಿ ಉಳಿಯುವಂತಿಲ್ಲ ಎಂದು ಸ್ಪಷ್ಟವಾಗಿ ನುಡಿಯುತ್ತಿದ್ದಿತು. ಆಶ್ರಮದಿಂದ ಕೂಗಳತೆ ದೂರದಲ್ಲಿದ್ದಾಗಲೇ ಅಗಸ್ತ್ಯನ ಭಯ ಕಾವೇರಿಯ ಕೂಗಾಗಿ ಪರಿಣಮಿಸಿ ಅವನನ್ನು ತಿವಿಯಿತು – ನಾಲ್ಕು ಹೆಜ್ಜೆ ಇಟ್ಟು ಮುಗಿಸುವುದರೊಳಗೆ, ಉತ್ತರವನ್ನು ನುಡಿಯಲು ಉಸಿರೆಳೆದು ಗಂಟಲು ಸರಿಪಡಿಸಿಕೊಳ್ಳುವ ಮೊದಲೇ ಮೂರು ಸಲ ಲೋಪಾಮುದ್ರೆಯು "ಪತಿದೇವ!" ಎಂದು ಕರೆದು ಮುಗಿಸಿದ್ದಳು. ಜ್ಞಾನಿಯಾಗಿದ್ದ ಋಷಿಯ ಹೃದಯವನ್ನು ಆ ಕೂರುದನಿ ಕೊರೆಯಿತು. ಅವನ ಮಿದುಳನ್ನು ಕದಡಿತು. ಭಾವ**ನೆಗಳ** ತುಮುಲಯುದ್ಧದಲ್ಲಿ ಮುಂಗಾಣದವನಾಗಿ, ಅಲ್ಲಿ ನಿಲ್ಲಲು ಸಾಧ್ಯವಿಲ್ಲದವನಾಗಿ, ಓಡಲು ಶಕ್ತಿಯಿಲ್ಲದವನಾಗಿ, ಅಲ್ಲಿಯೇ ಋಷಿಯು ಕುಸಿದು ಕುಕ್ಕರಿಸಿದನು. ಅಲ್ಲಿಂದ ಕೂಡಲೇ ಬೆಂಕಿಯ ಮೇಲೆ ಕುಳಿತವನಂತೆ ಎದ್ದು ಆಶ್ರಮದೆಡೆಗೆ ನೆಗೆದು ಜಿಗಿದು ಓಡಿದನು – ಶಕ್ತಿಪೂರಿತವಾದ ಓಟ ಅದಲ್ಲ, ಉದ್ವೇಗದ ಸ್ಫೋಟ : ಬುದ್ಧಿಯ ಪ್ರಭಾವ ಅದರಲ್ಲಿರಲಿಲ್ಲ, ರಾಗದ ಹಿನ್ನೆಲೆ ಆ ಓಟಕ್ಕಿತ್ತು. ಅಗಸ್ತ್ಯನು ಕುಟೀರವನ್ನು ಸೇರಿದಾಗ ಅದು ಶೂನ್ಯವಾಗಿತ್ತು – ದೈವ ಸಂಕಲ್ಪವನ್ನು ಎದುರಿಸಲಾರದೇ ಮನುಷ್ಯ ಸಂಕಲ್ಪ ಸೋತುಹೋಗಿತ್ತು. ಕಾವೇರಿಯು ಕರಗಿ ನೀ**ರಾ**ಗಿ ಹೋಗಿದ್ದಳು. ಸರೋವರ ಸಮೀಪದ ಅಶ್ವತ್ಥವೃಕ್ಷದ ಬುಡದಲ್ಲಿ, ಅಗಸ್ತ್ಯನು ಧ್ಯಾನಮಗ್ನನಾಗಿ ಮಂಡಿಸುತ್ತಿದ್ದ ಪವಿತ್ರ ಪ್ರದೇಶದಲ್ಲಿ, ಒಂದು ಕಿರಿಯ ಕುಂಡಿಕೆಯಾಗಿದ್ದಿತು. ಅದರಲ್ಲಿ ನೀ**ರು** ಮೇಲೆ ಕೆಳಗೆ ಅಲುಗಾಡುತ್ತಿತ್ತು. ಅಗಸ್ತ್ಯನು ಆ ಕ್ಷೋಭೆಗೊಂಡಿದ್ದ ಕುಂಡಿಕೆಯನ್ನು ನೋಡಿ "ಕಾವೇರೀ! ಪ್ರಿಯ ಕಾವೇರೀ! ಹೋದೆಯಾ?" ಎಂದು ದುಃಖಿಸಿದನು. ಬೆಟ್ಟದ ಇನ್ನೊಂದು ಪಾರ್ಶ್ವದಿಂದ ಏದುತ್ತ ಉಬ್ಬಸಬಿಡುತ್ತ ರೋಹಿತನೂ ಅಗಸ್ತ್ಯನ ಇತರ ಶಿಷ್ಯರೂ ಬಂದರು. ಗುರುವಿನ ದುಃಖದಲ್ಲಿ ಅವರೂ ಭಾಗಿಗಳಾದರು.

"ಗುರುಗಳೇ! ನೀವೆಲ್ಲಿ ಮಾಯವಾಗಿ ಹೋಗಿದ್ದಿರಿ? ಮಾತೆಯವರು ನಿಮ್ಮನ್ನು ಮೂರು ಸಲ ಕರೆದರು" ರೋಹಿತನೇ ಮೊದಲು ಮಾತಾಡಿದ.

"ನಿನ್ನ ಆಕ್ರಂದನ ಸ್ವರದಿಂದ ನಾನು ಭಾಗಮಂಡಲದ ಕಡೆಗೆ ಹೋಗಬೇಕಾಯಿತು. ನೀನು ಕ್ಷೇಮವೇ?" ಗುರುವಿನ ಮರುಪ್ರಶ್ನೆ.

"ನಾನಿಲ್ಲಿಯೇ ನಿದ್ರಿಸುತ್ತಿದ್ದೆನಲ್ಲ! ಮಾತೆಯವರೆದ್ದು 'ಪತಿದೇವನೆಲ್ಲಿ?' ಎಂದು ಭಾವಾವೇಶದಿಂದ ಪ್ರಶ್ನಿಸುವಾಗ ನಮಗೇನೂ ಉತ್ತರ ಹೇಳಲು ಸಾಧ್ಯವಾಗಲಿಲ್ಲ. ನಾವು ಅವರನ್ನು ಸಮಾಧಾನಪಡಿಸಲು ಯತ್ನಿಸಿ ವಿಫಲರಾದೆವು."

"ರೋಹಿತನೇ! ದೈವವು ನನ್ನನ್ನು ವಂಚಿಸಿತು. ಆಗಬೇಕೆಂದಿದ್ದುದು ಆಗಿಹೋಯಿತು. ಕಾವೇರಿಯು ಮತ್ತೇನು ಮಾಡಿದಳು ಹೇಳಪ್ಪ."

"ನಿಮ್ಮನ್ನು ಮೂರುಸಲ ಕರೆದರು. ಒಡನೆಯೇ ನಾವು ಬೇಡ ಬೇಡ ಎನ್ನುತ್ತಿದ್ದ ಹಾಗೆಯೇ ನಿಮ್ಮ ಕಮಂಡಲುವಿನಿಂದ ನೀರನ್ನು ತಮ್ಮ ಮೈಮೇಲೆ ಧಾರೆಯೆರೆದುಕೊಂಡು ಹಾಗೆಯೇ ಕರಗಿ ನೆಲದೊಳಗೆ ಇಳಿದು ಹೋದರು. ಮಾತೆಯವರು ಈ ಸ್ಥಳದಲ್ಲಿ ಇಳಿದು ಹೋದುದು" ಎಂದು ಕುಂಡಿಕೆಯನ್ನು ತೋರಿಸಿದನು.

"ಆಗ ನೀವೇನು ಮಾಡಿದಿರಿ, ಹೇಳಿರಪ್ಪ, ಈ ದುಃಖಕ್ಕೆ ಸ್ವಲ್ಪ ಸಮಾಧಾನ ವಚನ ನುಡಿಯಿರಪ್ಪಾ!" ಅಗಸ್ತ್ಯನ ಕರುಣಾವಾಣಿ.

ಇನ್ನೊಬ್ಬ ಶಿಷ್ಯನು ಮುಂದುವರಿಸಿದನು : "ಹೀಗೆ ಇಳಿದು ಹೋದ ಮಾತೆಯವರನ್ನು ನಾವೆಲ್ಲರೂ ಬೆಂಬಿಡದೆ ಹಿಂಬಾಲಿಸಿದೆವು. ಆದರೆ ಅವರು ನಮಗೆ ಕಾಣಿಸಿಕೊಳ್ಳದೆ ನೆಲದಡಿಯಲ್ಲಿ ಹರಿದು ಹೋದರು. ಅವರು ಎಲ್ಲಿ ಮೇಲೆ ಬರುವರು ಎಂದು ರಾತ್ರಿಯಲ್ಲಿ ಅರಸಲು ಸಾಧ್ಯವಾಗಲಿಲ್ಲ. ಹತಾಶರಾಗಿ ಮರಳಿದೆವು."

ಅಗಸ್ತ್ಯನ ದುಃಖ ಮೇರೆಮೀರಿ ಹರಿಯಿತು. ಆ ಕುಂಡಿಕೆಯ ಜಲದಲ್ಲಿ ಈ ಬಾಷ್ಪಾಂಬು ಸೇರಿ ಅದು ಮತ್ತಷ್ಟು ಕ್ಷೋಭೆಯಿಂದ ಉಕ್ಕಲಾರಂಭಿಸಿತು.

ಪ್ರಕೃತಿಯು **ಮಂ**ಗಳಗೀತವನ್ನು ಹಾಡಿದಳು. ಲೋಕಪಾವನೆ ಕಾವೇರೀ ಮಾತೆಯಾಗಿ ಹರಿದುಹೋದ ಪ್ರಥಮ ಪ್ರತ್ಯೂಷವನ್ನು ಲೋಕವೇ ಸ್ವಾಗತಿಸಿತು. ಆದರೆ ಅಗಸ್ತ್ಯಾಶ್ರಮನಿವಾಸಿಗಳು ದುಃಖಪೀಡಿತರಾಗಿ ದುಃಖಮಯ ಪ್ರಭಾತವನ್ನು ಕಂಡರು ಯೋಗದೃಷ್ಟಿಯಿಂದ ನಡೆದ ಮಹಾಘಟನೆಯನ್ನರಿತ ಕವೇರ ಮಹರ್ಷಿಯು ಆಗಲೇ ತಲಕಾವೇರಿಗೆ (ಅಗಸ್ತ್ಯಾಶ್ರಮದ ಸ್ಥಳ) ದಯಮಾಡಿಸಿ ಸಂದರ್ಭದ ಮಹಾತ್ಮ್ಯವ**ನ್ನು** ಅಗಸ್ತ್ಯನಿಗೆ ಅರುಹಿ ಅವನನ್ನು ಸಮಾಧಾನಪಡಿಸಿದನು. ಆ ಗಳಿಗೆಯಲ್ಲಿಯೇ ಅಗಸ್ತ್ಯನು ತಲಕಾವೇರಿಯನ್ನು ತೊರೆದನು – ಅಲ್ಲಿಯ ಆತ್ಮೀಯ ದೃಶ್ಯ ಸನ್ನಿವೇಶಗಳು ಅವನ ದುಃಖವನ್ನು ವರ್ಧಿಸುತ್ತಿದ್ದುವೇ ವಿನಾ ಕಡಿಮೆ ಮಾಡುತ್ತಿರಲಿಲ್ಲ. ಸಕಲರೂ ಭಾಗಮಂಡಲಾಭಿಮುಖರಾಗಿ ನಡೆದರು. ಅಲ್ಲಿ ಬುಳ ಬುಳ ಸಪ್ಪಳದಿಂದ ಕಿರಿಯ ತೊರೆಯೊಂದು ಹರಿದು ಹೋಗುತ್ತಿದ್ದಿತು. ಗಿಡ ಮರಗಳು. ಈ ತೀರ್ಥ ಜಲಕ್ಕೆ ಬಾಗಿ ಹೂವೆರಚಿ ಪೂಜೆಗೈಯುತ್ತಿದ್ದುವು. ಗಿರಿವನಗಳು ಮೌನ ಮಂತ್ರವನ್ನು ಪಠಿಸುತ್ತಿದ್ದುವು. ಅಗಸ್ತ್ಯ, ಕವೇರ ಮತ್ತು ಅಗಸ್ತ್ಯ ಶಿಷ್ಯರು ತುಸು ದೂರದಲ್ಲಿ ಈ ದೃಶ್ಯವನ್ನು ನೋಡುತ್ತ ನಿಂತಿದ್ದರು. ಕಂಬನಿ ತುಂಬಿದ ಕಣ್ಣುಗಳಿಂದ ಅಗಸ್ತ್ಯನಿಗೆ ಅಲ್ಲಿಯ ಪ್ರದೇಶ ಮಬ್ಬಾಗಿ ಕಾಣುತ್ತಿತ್ತು. ತೊರೆಯು ಅದರ ಗತಿಯನ್ನು ಬದಲಾಯಿಸಿ ಕವೇರ ಮತ್ತು ಅಗಸ್ತ್ಯ ಋಷಿಪುಂಗವರು ನಿಂತೆಡೆಗಾಗಿ ಬಂದು ಅವರ ದಿವ್ಯ ಪಾದಪದ್ಮಗಳನ್ನು ಸೇಚನೆ ಮಾಡಿ ಪೂಜಿಸಿ ಹರಿದುಹೋಯಿತು. ಸಾಗರವನ್ನೇ ಸ್ವಾಹಾಕರಿಸಿದ ಅಗಸ್ತ್ಯನು ಈ ಪುಣ್ಯೋದಕವನ್ನು ಕರಗಳಿಂದ ಸ್ಪರ್ಶಿಸಿ "ಪಾವನೆ ಕಾವೇರಿ ಧನ್ಯೆ ಕಾವೇರಿ!" ಎಂದು ಸ್ತುತಿಸಿದನು. ಈ ಪ್ರಶಂಸೆಯು ಮೆಚ್ಚುಗೆಯಾಯಿತೋ ಎನ್ನುವಂತೆ ಹೊಳೆಯು ಇನ್ನಷ್ಟು ಕಲಕಲ**ರವ**ದಿಂದ ಹರಿದು ದೂರದ ಇರುಕಿನಲ್ಲಿ ಮರೆಯಾಯಿತು.

ಮುಂದೆ ಚಂದ್ರವರ್ಮ ಮಹಾರಾಜನು ವಾನಪ್ರಸ್ಥಾಶ್ರಮಕ್ಕಾಗಿ ಬ್ರಹ್ಮಗಿರಿಗೆ ತೆರಳಿದನು. ತಲಕಾವೇರಿಯ ಪವಿತ್ರ ಕುಂಡಿಕೆಯ ತೀರ್ಥಜಲವನ್ನು ಸೇವಿಸುತ್ತ ಕೃತ್ಯಕೃತ್ಯನಾಗಿ ಕಾಲಾಂತರದಲ್ಲಿ ಬ್ರಹ್ಮನಲ್ಲಿ ಐಕ್ಯನಾದನು.

# ರಕ್ತದ ಆಸೆ

## (ಹನ್ನೆರಡನೆಯ ಕತೆ –೧೯೪೯)

ನಾನು ಎಸ್‌ಎಸ್‌ಎಲ್‌ಸಿ ಪರೀಕ್ಷೆಗೆ ಕುಳಿತ ವರ್ಷವದು (೧೯೪೭ ಮಾರ್ಚ್). ಪರೀಕ್ಷೆ ಮುಗಿದ ಮೇಲೆ ನನ್ನ ಚಿಕ್ಕಪ್ಪನವರಲ್ಲಿಗೆ ಹೋದೆನು ಕೆಲವು ದಿನಗಳನ್ನು ಅಲ್ಲಿ ಕಳೆಯಲೆಂದು. ಅವರು ಕಾರುಗುಂದ ಎಂಬ ಹಳ್ಳಿಯಲ್ಲಿ ವೈದ್ಯರಾಗಿದ್ದರು. ಅವರ ಮನೆಯು ಎತ್ತರ ನೆಲೆಯಲ್ಲಿ ಪ್ರಕಾಶಮಾನವಾಗಿಯೂ ಆಹ್ಲಾದಕರವಾಗಿಯೂ ನಿಂತಿತ್ತು. ಒಂದು ಬದಿಯಲ್ಲಿ ಮಡಿಕೇರಿ ಭಾಗಮಂಡಲದ ರಸ್ತೆಯು ನೇರವಾಗಿ ಓಡುತ್ತದೆ. ಇನ್ನೊಂದು ಕಡೆ ನಾಪೋಕ್ಲಿಗೆ ಹೋಗುವ ದಾರಿ ಕವಲೊಡೆದಿದೆ. ರಸ್ತೆಗಳ ಮಧ್ಯದಲ್ಲಿ ಒಂದು ದ್ವೀಪದಂತೆ ಈ ಮನೆಯು ಇದೆ. ಹಗಲು ನಮಗೆ ಜನರ ಅಭಾವವೇ ಇರಲಿಲ್ಲ. ಔಷಧಿಗೆ ಬರುವವರು ಬಲುಮಂದಿ ಇರುತ್ತಿದ್ದರು. ಸುತ್ತಲಿನ ಹಳ್ಳಿಗಳಿಗೆ ಇಲ್ಲಿ 'ದಾಕುದಾರ'ರು ಇರುವುದಾಗಿತ್ತು. ಇಲ್ಲವಾದರೆ ಒಳ್ಳೆ ಔಷಧಿ ದೊರೆಯಲು ಮತ್ತೆ ಹನ್ನೆರಡು ಮೈಲು ದೂರದ ಮಡಿಕೇರಿಗೆ ಹೋಗಬೇಕು. ಚಿಕ್ಕಪ್ಪ ಕಾರುಗುಂದದಲ್ಲಿ ಔಷಧಾಲಯ ಸ್ಥಾಪಿಸಿ ಒಂದು ತಿಂಗಳಾಗಿತ್ತು ಅಷ್ಟೆ. ಆದ್ದರಿಂದ ಅವರಿಗೆ ಸುತ್ತಲಿನ ಜನರ ಪರಿಚಯ ಚೆನ್ನಾಗಿ ಆಗಿರಲಿಲ್ಲ. ಆದರೆ ನನಗೆ ಸಮಯ ಹೋಗಲು ಯಾವ ತೊಂದರೆಯೂ ಇರಲಿಲ್ಲ. ಸೈಕಲ್ ತೆಗೆದುಕೊಂಡು ದೊಡ್ಡ ದಾರಿಯಲ್ಲಿ ದೂರ ಸವಾರಿ ಹೋಗುವುದು. ನಾಪೋಕ್ಲು ಕಡೆ ಹೋದರೆ ಒಂದೂವರೆ ಮೈಲಿನಲ್ಲಿಯೇ ಕಾವೇರಿ ಹೊಳೆಯು ಸಿಗುವುದು. ಅದರ ಪರಂಬು (ಮಳೆಗಾಲದಲ್ಲಿ ಪ್ರವಾಹದ ನೀರು ನಿಂತು ಫಲವತ್ತಾದ ಹೊಳೆಯ ಕರೆಯ ಬಯಲು) ವಿಶಾಲವಾಗಿ ಸುಂದರವಾಗಿ ಹಬ್ಬಿದೆ, ಅಲ್ಲಿ ಹೋಗಿ ಮಲಗಿಕೊಂಡು ಮುಗಿಲನ್ನೂ ನಿಬಿಡವಾಗಿ ಬೆಳೆದಿರುವ ಕಾಡುಗಳನ್ನೂ ನೋಡುವದು; ನೇರಿಳೆ ಹಣ್ಣುಗಳನ್ನು ತಿನ್ನಲು ಹೋಗಿ ಕೆಂಪಿರುವೆಗಳಿಂದ ಕಡಿಸಿಕೊಂಡು ಕೈ ಕುಡುಗುವುದು; ಇನ್ನು ಮನೆಯಲ್ಲಿಯೇ ಕುಳಿತಾಗ ಮಕ್ಕಳೊಡನೆ ಆಡುವುದು, ಕೆಣಕಿ ಅಳಿಸುವುದು; ಅಡುಗೆಮನೆಯೊಳಗೆ ಅವಲಕ್ಕಿ ಕಾಯನ್ನು ಮೆಲ್ಲುತ್ತ ಚಿಕ್ಕಮ್ಮನೊಡನೆ ಪಟ್ಟಾಂಗ – ಇವೇ ಮುಂತಾದವುಗಳು ನನ್ನ ಮುಖ್ಯ ಕಾರ್ಯಗಳಾಗಿದ್ದುವು. ಒಮ್ಮೊಮ್ಮೆ ಹಳ್ಳಿಯವರು ಮಡಿಕೇರಿಯ ಈ 'ಪ್ರಭೃತಿ'ಯನ್ನು ನೋಡಬೇಕೆಂದು ಬಯಸುತ್ತಿದ್ದರು. ಆಗ ಚಿಕ್ಕಪ್ಪ ನನ್ನನ್ನು ಕರೆಯುತ್ತಿದ್ದರು. ನನ್ನೊಡನೆ ಕೆಲವು ಮಾತಾಡಿ, ಆ ಹಳ್ಳಿಗನು "ಇಂದಿಗೆ ಧನ್ಯನಾದೆ" ಎಂಬಂತೆ ಹೋಗುತ್ತಿದ್ದ. ನಾನು ಇದು ಬಹಳ ವಿನೋದಕರವಾಗಿದೆಯಂದು ಒಳಗೆ ಹೋಗುತ್ತಿದ್ದೆನು. ಸಾಯಂಕಾಲ ಪೇಷಂಟುಗಳಿಲ್ಲದಿದ್ದರೆ ನಾನೂ ಚಿಕ್ಕಪ್ಪನೂ ಸ್ವಲ್ಪ ದೂರ ತಿರುಗಾಡಿಕೊಂಡು ಹೋಗುತ್ತಿದ್ದೆವು. ಆದರೆ ದಾರಿಯಲ್ಲಿ ಕೆಲವರು "ಸ್ವಲ್ಪ ಬನ್ನಿ, ಸ್ವಾಮಿ" ಎಂದು ಕರೆದುಕೊಂಡು ತಮ್ಮ ಮನೆಗೆ ಹೋಗಿ ಖಾಯಿಲಸ್ತರನ್ನು ತೋರಿಸುತ್ತಿದ್ದರು. ನಾನು ಅವರನ್ನು ಹಿಂಬಾಲಿಸಬೇಕಿತ್ತು. ಅಲ್ಲಿ ಕಾದು ಕಾದು ಬೇಸರ ಬರುತ್ತಿತ್ತು. ಹೊರಡುವಾಗ ಮಾತ್ರ ಹಾಲು, ಬಾಳೇಹಣ್ಣು, ನೇರಿಳೇ ಹಣ್ಣು ಇವೆಲ್ಲ ತಿನ್ನಲು ದೊರೆಯುತ್ತಿದ್ದುವು. ಯಾರು ನನಗೆ ಸರಿಯೆನ್ನುವ ಭಾವನೆಯಿಂದ ಆ ದಿನಗಳನ್ನು ಸಂತೋಷದಿಂದ ಕಳೆಯುತ್ತಿದ್ದೆನು.

ಒಂದು ರಾತ್ರಿ ನಾವೆಲ್ಲರೂ ಮಲಗಿ ನಿದ್ರೆಮಾಡಿದ್ದೆವು. ನನಗೆ ಒಂದು ಕನಸು ಬಿದ್ದಹಾಗಿತ್ತು. "ಯೂರೋಪಿನಲ್ಲಿ ನಡೆಯುತ್ತಿದ್ದ ಯುದ್ಧ ನಮ್ಮ ದೇಶಕ್ಕೂ ಬಂತು. ನಮ್ಮ ಮನೆಯ ಮೇಲೂ ಬಾಂಬು ಸುರಿಯುತ್ತಿದ್ದಾರೆ. ರಕ್ತದ ಹೊಳೆ ಹರಿಯುತ್ತಿದೆ....." ನಾನು ಗಾಬರಿಯಿಂದ ಎದ್ದೆನು. ಹೊರಗಿನ ಬಾಗಿಲನ್ನು ಯಾರೋ ದಡ ಬಡ ಎಂದು ಬಡಿಯುತ್ತಿದ್ದರು. "ಸ್ವಾಮಿ, ಸ್ವಾಮಿ" ಎಂದು ಕರೆಯುತ್ತಿದ್ದರು. ಮನೆಯಿಡೀ ಕತ್ತಲೆ. ಕನ್ನಡಿಯ ಕಿಟಕಿಯಿಂದ ಹೊರಗಿನ ಪ್ರದೇಶ ಸ್ವಲ್ಪ ಬೆಳ್ಳಗೆ ಕಂಡಹಾಗೆ ಆಗುತ್ತಿತ್ತು. ಯಾರಪ್ಪ ಇಷ್ಟುಹೊತ್ತಿಗೆ ಬರುವವರು ಎಂದು ನನಗೆ ಹೆದರಿಕೆಯೇ ಆಯ್ತು. ಕಳ್ಳರ ಒಂದು ಗುಂಪೇ ಬಂದಿರಬಹುದೇ? ಅಷ್ಟರಲ್ಲೇ ಚಿಕ್ಕಪ್ಪ ಎದ್ದು ಕಂದೀಲು ಹಿಡಿದುಕೊಂಡು ಹೋಗಿ ಕದ ತೆರೆದರು. ಅವರು ಕದ ತೆರೆಯುವುದನ್ನು ನಾನು ಹಾಸಿಗೆಯಿಂದಲೇ ನೋಡುತ್ತಿದ್ದೆನು. "ಅಯ್ಯೋ, ಹಾಗೆ ತೆರೆಯಬೇಡಿ, ಹೊರಗಿನವರು ಕೊಲೆಗಡಕನಾಗಿದ್ದರೆ ? ಕಳ್ಳರ ಒಂದು ಪಂಗಡವೇ ಬಂದಿದ್ದರೆ, ಬೇಡ, ಬೇಡ" ಎಂದು ಕೂಗಬೇಕು ಎಂದು ನನಗೆ ಅನಿಸಿತು. ಆದರೆ ಬಾಯಿ ಬಿಡಲಿಕ್ಕೆ ನನಗೆ ಹೆದರಿಕೆ. ಅಷ್ಟರಲ್ಲೇ ಅವರು ಬಂದು ಬಾಗಿಲು ತೆರೆದು ಅಲ್ಲೀ ನಿಂತು, "ಯಾರಪ್ಪ, ಏನು?" ಎಂದರು. ನನಗೆ ಹೊರಗೆ ಯಾರಿದ್ದರೆಂದು ಕಾಣಲಿಲ್ಲ. ಚಿಕ್ಕಮ್ಮನು ಎದ್ದು ಅಲ್ಲಿಗೆ ಹೋದರು. ನಾನೂ ಧೈರ್ಯಮಾಡಿ ಎದ್ದೆನು.

"ನನ್ನ ಅಜ್ಜಿಗೆ ಸಕತ್ತು ಖಾಯಿಲೆ, ನೀವು ನೋಡಲು ಒಂದು ಸಲ ಬಂದಿದ್ದರೆ ಆಗುತ್ತಿತ್ತು."

"ಸರಿಯಾಯ್ತು, ಈಗ ಈ ರಾತ್ರಿಯಲ್ಲಿ?"

"ಇಲ್ಲ ಸ್ವಾಮಿ, ಅವಳಿಗೆ ಸಕತ್ತು. ಈಗಾಗಲೇ ಸತ್ತಹೋದಳೋ ಏನೋ."

ನಾನು ಬಾಗಿಲ ಹಿಂದೆ ನಿಂತಿದ್ದೆ. ಹೊರಗಿನವರು ಕಾಣಲಿಲ್ಲ.

"ಏನಾಗಿದೆ ಅವಳಿಗೆ?"

"ನನಗೇನೂ ಗೊತ್ತಿಲ್ಲ, ಸ್ವಾಮೀ. ಅವಳು ಹುಚ್ಚುಚ್ಚಾಗಿ ಕೂಗುತ್ತಾಳೆ. ಜ್ವರ ಕೆಂಡದ ಹಾಗೆ ಸುಡುತ್ತದೆ. ನೀವು ಬಂದು ನೋಡಿ."

"ನಾನೀಗ ಔಷಧಿ ಕೊಡುತ್ತೇನೆ. ಬೆಳಿಗ್ಗೆ ಬಂದು ನೋಡುತ್ತೇನೆ, ಎಲ್ಲಿ ಇರುವುದು ನೀನು?"

"ನೀವು ಈಗಲೇ ಬರಬೇಕು. ಇಲ್ಲವಾದರೆ ನಿಮ್ಮನ್ನು ಬಿಡೋದೇ ಇಲ್ಲ. ಇಲ್ಲೇ ಕಡಿಯತ್ತೂರು ಹೊಳೆಯಿಂದಾಚೆಗೆ."

"ಈ ಅಪರಾತ್ರಿಯಲ್ಲಿ ಬರುವುದೇನು ತಮಾಷೆಯೇ? ಜ್ವರ ಬರುವಾಗ ಔಷಧಿಗೆ ಬರದೇ, ಸಾಯಲು ಬೀಳುವಾಗ ಬರುತ್ತಾರಲ್ಲ."

"ನೀವು ಬರದೇ ನಾನು ಹೋಗುವುದೇ ಇಲ್ಲ" ಎಂದು ಮುಂದೆ ನುಗ್ಗಿ ಅವರ ಕಾಲು ಹಿಡಿಯಲು ಬಗ್ಗಿದನು.

"ಛೇ, ಛೇ, ಕಾಲನ್ನೆಲ್ಲ ಹಿಡಿಯಬೇಡ" ಎಂದು ಚಿಕ್ಕಪ್ಪ ಹಿಂದೆ ಸರಿದರು. ಅವನು ತೆವಳಿಕೊಂಡು ಬಂದು ಹೊಸ್ತಿಲ ಮೇಲೆ ಕುಳಿತನು.

ಚಿಕ್ಕಪ್ಪನದು ದಾಕ್ಷಿಣ್ಯ ಪ್ರಕೃತಿ. ಯಾರಿಗೂ ಹುಬ್ಬು ಗಂಟುಹಾಕಿ ಜೋರಿನ ಮಾತು ಹೇಳುವುದು ಅವರಿಗೆ ಸಾಧ್ಯವಿಲ್ಲ. ಅವರಿಗೆ ಅವನ ವಿಷಯದಲ್ಲಿ ದಯೆ ಮೊಳೆತಿರಬೇಕು. ಅಂತೆಯೇ ಆ ರಾತ್ರಿ ಹೊರಟರು. ಅವನನ್ನು ಕೇಳಿ ಆ ಖಾಯಿಲೆಯ ವಿವರ ತಿಳಿದುಕೊಂಡರು. ಐದಾರು ದಿನಗಳಿಂದ ಬಂದ ಜ್ವರ ಕುದಿಯುತ್ತಿದೆಯಂತೆ. ಔಷಧಿಯ ಒಂದು ಸಣ್ಣ ಡಬ್ಬಿ, ಇಂಜಕ್ಷನ್ ಪೆಟ್ಟಿಗೆ ಎಲ್ಲವನ್ನೂ ಸಿದ್ಧಪಡಿಸಿದನು.

"ಈ ರಾತ್ರಿ ಹೋಗುವುದೇನು ಹುಡುಗಾಟಿಕೆಯೇ? ಈ ಸ್ಥಳಗೊತ್ತಿಲ್ಲ. ಅವನನ್ನು ನೋಡಿದರೆ ನನಗೇನೋ ಹೆದರಿಕೆಯಾಗುವುದು. ಈಗ ಬರೋದಿಲ್ಲ ಎಂದು ಹೇಳಿ ಪಡಿ ಮುಚ್ಚಿದರೆ ಏನು ಮಾಡುತ್ತಾನೆ?" ಎಂದು ಪಿಸುಗುಟ್ಟಿದರು ಚಿಕ್ಕಮ್ಮ. ನನಗೂ ಇದು ಹೌದೆಂದು ಅನಿಸಿತು. ಅವನನ್ನು ನೋಡಿದರೆ – ಗುಳಿಬಿದ್ದು ಕೆಂಪಾದ ಕಣ್ಣು, ಕೆದರಿದ ತಲೆ, ಅರ್ಧ ಬೆಳೆದ ಗಡ್ಡಮೀಸೆ, ಚಪ್ಪಟೆಯಾದ ಮುಖ, ಹರಕು ಬಟ್ಟೆ – ಆ ಸೀಮೆಯೆಣ್ಣೆಯ ದೀಪದ ಕುರುಡು ಬೆಳಕಿನಲ್ಲಿ ಅವನು ನಿಜವಾಗಿ ಮನುಷ್ಯನೋ ಅಥವಾ ಭೂತವೋ ಎಂದು ನನಗೆ ಹೆದರಿಕೆಯಾಯಿತು. ಅವನು ಭಯಂಕರವಾಗಿ ತೋರುತ್ತಿದ್ದನು. ಆದರೆ ಚಿಕ್ಕಪ್ಪ ಹೊರಟರು. ಅವರು ಒಂದು ನಿಶ್ಚಯ ಮಾಡಿದ ಮೇಲೆ ಯಾರಿಂದಲೂ ಅದನ್ನು ಮುರಿಯಲು ಸಾಧ್ಯವಾಗುತ್ತಿದ್ದಿಲ್ಲ. ನಡೆದರು ಮುಂದೆ ಚಿಕ್ಕಪ್ಪ.

"ಅವರು ಒಬ್ಬರೇ ಹೋಗುತ್ತಾರಲ್ಲ. ಅವನು ಯಾರೋ ಏನೋ? ನೀನಾದರೂ ಹೋಗು ನಾರಾಯಣ, ಜೊತೇಲಿ" ಎಂದರು ನನಗೆ ಚಿಕ್ಕಮ್ಮ.

ಚಿಕ್ಕಪ್ಪನ ಜತೆಯಲ್ಲಿ ಎಲ್ಲಿಗೂ ಎಷ್ಟೂ ಹೊತ್ತಿಗೂ ಹೋಗಲು ನಾನು ಸಣ್ಣವನಾಗಿರುವನಿಂದಲೇ ಸಿದ್ಧ. ಅವರಿಗಿಂತ ಬಲಶಾಲಿ, ಧೈರ್ಯಶಾಲಿ ಬೇರೆ ಯಾರೂ ಇಲ್ಲವೆಂದೇ ನನ್ನ ಅಭಿಪ್ರಾಯ. ಆದ್ದರಿಂದ ಇಷ್ಟು ಹೊತ್ತು ಸುಮ್ಮನೆ ಹೆದರಿದೆನಲ್ಲ ಎಂದು ನನಗೆ ನಗು ಬಂದಿತು.

"ನಾರಾಯಣ ಬರಲಿ ಆಗದಾ?"

"ಬೇಡ, ಅವನು ಯಾಕೆ ಈ ರಾತ್ರಿಯಲ್ಲಿ, ನಿದ್ರೆ ಮಾಡಲಿ."

"ನನಗೆ ನಿದ್ರೆ ಮಾಡಿಯಾಗಿಹೋಯ್ತು. ನಾನೂ ಬರ್ತೇನೆ" ಎಂದು ನಾನು ಹಠಮಾಡಿದೆನು.

"ಹಾಗಾದರೆ ನಿನ್ನಿಷ್ಟ."

"ನೀವ್ಯಾಕೆ ಚಿಕ್ಸಾಮೀ, ಕಾಡು, ಹಳ್ಳ....."

ಅವನು ಬಾಯಿಬಿಟ್ಟ ಕೂಡಲೇ ನನಗೆ ಮೈ ಜುಮ್ಮೆಂದಾಯಿತು. ಬಚ್ಚಬಾಯಿ, ಮಹಾನಾತ, ಆದರೆ ಚಿಕ್ಕಪ್ಪ ಇದ್ದಾರೆ ನನಗೆ ಹೆದರಿಕೆಯಿಲ್ಲ.

"ಅದೇನೂ ಪರವಾ ಇಲ್ಲ" ಎಂದು ನಾನು ಅವನ ಕಡೆ ನೋಡಲಾರದೆ ಬೇರೆಕಡೆ ತಿರುಗಿ ಹೇಳಿದೆನು.

ನಾವು ಹೊರಡುವಾಗ ಮಧ್ಯರಾತ್ರಿಯ ಒಂದು ಘಂಟೆಯಾಗಿತ್ತು.

ಅವನು ಔಷಧಿಯ ಗಂಟನ್ನು ಹೊತ್ತುಕೊಂಡನು. ಕೈಯಲ್ಲಿ ಒಂದು ಲಾಂದ್ರವನ್ನೂ (ಐಚಿಟಿಣಜಡಿಟಿ) ಹಿಡಿದುಕೊಂಡಿದ್ದನು. ನಮ್ಮ ಲಾಂದ್ರವನ್ನು ನಾನು ಹಿಡಿದುಕೊಂಡೆನು. ಮುಂದೆ ದಾರಿ ತೋರಿಸುತ್ತ ಅವನು, ಮಧ್ಯ ಪರಮಧೈರ್ಯಸ್ಥನಾದ ನಾನು, ಹಿಂದೆ ಚಿಕ್ಕಪ್ಪ ಹೀಗೆ ಆ ಕಾಲುದಾರಿಯಲ್ಲಿ ನಡೆದೆವು.

ಕೃಷ್ಣಪಕ್ಷದ ಪ್ರಥಮಾರ್ಧ. ಮನೆಯಿಂದ ಹೊರಡುವಾಗ ತಿಂಗಳು ಸುಮಾರು ಮೇಲೆ ಬಂದಿತ್ತು. ಮನೆಯ ಸುತ್ತಲಿನ ಕಾಡುಗಳಿಂದ ಜಿರೋ ಎಂದು ಹುಳುಗಳ ಕೂಗು ಕೇಳುತ್ತಿತ್ತು. ಜಗ್ ಜಗ್ ಎಂದು ಮರಗಳ ಮೇಲೆ ಮಿನುಂಬುಳುಗಳು ಒಟ್ಟಿಗೆ ಬೆಳಕು ಬೀರಿ ಮರೆಯಾಗುತ್ತಿದ್ದುವು. ಹಿಂದುಗಡೆ ಬೆಳ್ಳಗೆ ನಮ್ಮ ಮನೆ, ಕತ್ತಲೆಯ ಕಡಲಿನಲ್ಲಿ ಒಂದು ದ್ವೀಪ. ಇನ್ನೂ ದೂರದಲ್ಲಿ ಕರಿ ಮುಸುಕನ್ನೆಳೆದುಕೊಂಡು ಭಾರೀ ಬೆಟ್ಟಗಳು ನಿಂತಿದ್ದುವು. ಅವುಗಳ ಅಂಚು ದಿಗಂತದ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ತೋರುತ್ತಿತ್ತು. ಒಂದು ಗಭೀರತೆ. ಒಂದು ಭಯ ಸುತ್ತಲೂ ವ್ಯಾಪಿಸಿತ್ತು, ನಮ್ಮ ಅಥವಾ ನನ್ನ ಜೀವವನ್ನು ತಿನ್ನುತ್ತಿತ್ತು. ಆದರೆ ಚಿಕ್ಕಪ್ಪ ಇದ್ದಾರೆ ಎಂದು ಪುನಃ ಧೈರ್ಯ. ನಾವು ಮನೆಯಿಂದ ಕಾಲುದಾರಿಯಲ್ಲಿ ಸ್ವಲ್ಪ ದೂರ ಹೋಗುವಾಗಲೇ ದಾರಿಯಿಡೀ ಕತ್ತಲಾಯಿತು. ಮರಗಳು ನಿಬಿಡವಾಗಿ ಎರಡು ಕಡೆಗಳಲ್ಲಿಯೂ ಹೆಣೆದುಕೊಂಡಿದ್ದುವು. ಸುತ್ತಲೂ ಕಾಡು, ಬಂದ ದಾರಿಯಲ್ಲಿಯೇ ಹಿಂದೆ ನೋಡಿದರೆ ಕಾಡು. ಕತ್ತಲೆಯ ರಾಶಿ ಮಯ ಮಯ ಅನ್ನುತ್ತಿತ್ತು. ಮೇಲೆ ನೋಡಿದರೆ ಆಕಾಶದ ಛಾಯೆ ಮರಗಳ ಎಲೆಗಳ ಮರೆಯಲ್ಲಿ ಹೌದೋ ಅಲ್ಲವೋ ಎಂಬಂತೆ ಭಾಸವಾಗುತ್ತಿತ್ತು. ಮಿನುಂಬುಳಗಳೂ ಆ ಕಾಡಿನಲ್ಲಿ ಮರೆಯಾಗಿದ್ದುವು. ಬಹುಶಃ, ಅವುಗಳೂ ಮರಗಳ ಮೇಲ್ಭಾಗದಲ್ಲಿ ಕುಳಿತಿರುವುವೋ ಏನೋ, ಕತ್ತಲೆಗೆ ಹೆದರಿ! ಸದ್ದು ವಿಶೇಷವಿಲ್ಲ. ನಮ್ಮ ಕಾಲಿನ ಜೋಡುಗಳ ಶಬ್ದ. ಮತ್ತೆ ತರಗೆಲೆ ಮೆಟ್ಟುವಾಗ ಆಗುವ ಚರಪರ ಶಬ್ದ. ಲಾಂದ್ರದ ಮಸಕು ಬೆಳಕಿನಲ್ಲಿ ನಮ್ಮ ನೆರಳುಗಳೂ ಒಮ್ಮೆ ಉದ್ದವಾಗುತ್ತ ಒಮ್ಮೆ ಗಿಡ್ಡವಾಗುತ್ತ ಹಿಂದಕ್ಕೂ ಮುಂದಕ್ಕೂ ಆ ಕಪ್ಪು ಗೋಡೆಯಮೇಲೆ ಓಲಾಡುತ್ತ ಸಾಗುತ್ತಿದ್ದುವು. ಹಗಲು ನಾನು ಸೈಕಲ್ಲಿನಲ್ಲಿನ ಒಬ್ಬನೇ ಹೋಗುತ್ತಿದ್ದ ದಾರಿಯದು – ಕಾವೇರಿ ಹೊಳೆಯ ಹಾದಿ. ಆಗ ಮಹಾ ಧೈರ್ಯಸ್ಥನ ಹಾಗೆ ಯಾರು ನನಗೆ ಸಮವೆಂದು ಹಾಡುತ್ತ ಹೋಗುತ್ತಿದ್ದೆ. ಆದರೆ ಕೇವಲ ೧೨ ಘಂಟೆಗಳ ಅಂತರದಲ್ಲಿ ನಿಸರ್ಗವು ಯಾವ ಪಾತಾಳದ ಗುಹೆಯನ್ನು, ಯಾವ ವಿಲಯರುದ್ರನ ಗರ್ಭವನ್ನು ಹೊಕ್ಕಿತ್ತು – ಅದೆಂತಹ ಅಪಾಯದ ನೆಗೆತ ! ನಾನು ಹೀಗೆಲ್ಲ ಆಗಬಹುದೆಂದು ಊಹಿಸಿಯೂ ಇರಲಿಲ್ಲ. ನಾನೊಬ್ಬನೇ ಆ ದಾರಿಯಲ್ಲಿ ಆ ಸಮಯದಲ್ಲಿ ಹೋಗಿದ್ದರೆ ಇಷ್ಟರ ಒಳಗೇ ಮರಗಟ್ಟಿ ಹೋಗಿರುತ್ತಿದ್ದೆ. "ಈಗ ಬಂದೆಯಾ? ನುಂಗುತ್ತೇನೆ" ಎಂದು ಹುಲಿಯೋ ಭೂತವೋ ಬ್ರಹ್ಮರಾಕ್ಷಸನೋ ಬಾಯಿ ಕಳೆದುಕೊಂಡು ನಿಂತಂತೆಯೇ ನನಗನ್ನಿಸುತ್ತಿತ್ತು. ಆಗಾಗ ಹಿಂದೆ ತಿರುಗಿ ನೋಡಿ ಚಿಕ್ಕಪ್ಪ ಇದ್ದಾರೆಂದು ಧೈರ್ಯ ತಳೆಯುತ್ತಿದ್ದೆ.

"ನೋಡು ನಿನಗೆ ಹೆದರಿಕೆಯಲ್ಲವೇ? ಬರಬೇಡವೆಂದರೆ ಯಾಕೆ ಹೊರಟೆ?"

"ಹೆದರಿಕೆಯಂತೆ, ಯಾಕಾಗಿ? ಹೆದರಿಕೆಯೇ ಇಲ್ಲ ನನಗೆ" ಎಂದು ಗಟ್ಟಿಯಾಗಿಯೇ ಒದರಿದೆ, ಮೂಳೆಯೇ ನಡುಗುತ್ತಿತ್ತು. ಹೆದರಿ!

ಕಾವೇರಿ ಹೊಳೆಯು ಬಂದಿತು. ಅದು ಬೇಸಗೆಯಲ್ಲಿ ತೋಡಿನ ಹಾಗೆ ಹರಿಯುತ್ತದೆ. ಜೋಡುಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊಳೆಯನ್ನು ದಾಟಿದೆವು. ದಂಡೆಯ ಮರಳಿನಲ್ಲಿ ಕಾಲುಗಳನ್ನು ಸರಪರ ಎಂದು ಎಳೆಯುತ್ತ, ಮರಳನ್ನು ಝಾಡಿಸಲು ಆಗಾಗ ಕಾಲುಗಳನ್ನು ಕುಡುಗುತ್ತ ಮುಂದೆ ಪರಂಬಿಗೆ ಹತ್ತಿದೆವು.

"ಇನ್ನೆಷ್ಟು ದೂರ, ಇಲ್ಲೇ ಹತ್ತಿರವೆಂದೆಯಲ್ಲ" ಎಂದರು ಚಿಕ್ಕಪ್ಪ.

"ಆ ತಿರುಗಾಸಿನಿಂದ ಮುಂದೆ. ಹತ್ತಿರವಾಯಿತು. ಹೀಗೆ ಬನ್ನಿ" ಎಂದನು 'ಮಾರ್ಗದರ್ಶಕ.'

"ಇನ್ನೇನು ಒಂದು ಫರ್ಲಾಂಗು ಉಂಟೋ?"

"ಹ್ಞಾ, ಅಷ್ಟೇ."

ಆದರೆ ಪರಂಬಿನಲ್ಲಿ ಅಡ್ಡ ತಿರುಗಿ ಎಷ್ಟೋ ತಿರುಗಾಸುಗಳನ್ನು ಕಳೆದು ಮುಂದೆ ಹೋದೆವು. ಅವನ ಮನೆ ಬರಲಿಲ್ಲ. ಬೆಳಕು ಚೆನ್ನಾಗಿ ಹಬ್ಬಿದ್ದ ಸುಂದರವಾದ ಪರಂಬಿನ ಬಯಲನ್ನು ಬಿಟ್ಟು ಬಂದು ಕಾಡೊಳಗೆ ನುಗ್ಗಿದೆವು.

"ಏನು ನಿನ್ನ ಮನೆಯಿನ್ನೂ ಬರಲಿಲ್ಲ?"

"ನೋಡಿ ಈಗ ಬಂದಿತು, ಅಲ್ಲೇ ಮುಂದೆ."

ಹಳ್ಳಿಯವರ ಒಂದು ಫರ್ಲಾಂಗೆಂದರೆ ಅದು ನಿಜಕ್ಕೂ ಒಂದು ಮೈಲಿಗೆ ಕಡಿಮೆಯಿರುವುದಿಲ್ಲ. ಒಂದು ಕೊಂಬಿನ ಕೂಗಳತೆ, ಹತ್ತಿರ ಎಂದರೆ ಅದು ನಾಲ್ಕು ಮೈಲಾಗುವುದು. ಕಾಡು ಮೊದಲಿಗಿಂತಲೂ ಭೀಕರವಾಗಿತ್ತು. ಮೊದಲಿನ ಕಾಡಾದರೆ ನಾಪೋಕ್ಲಿಗೆ ಹೋಗುವ ದಾರಿ ಕಡೆಯದು. ನನಗೆ ಹಗಲು ಅಲ್ಲಿ ನಡೆದು ತಿಳಿದಿತ್ತು. ಆದರೆ ಅದು ಎಲ್ಲಿಯೋ ಏನೋ ನನಗೆ ದಿಕ್ಕು ತಿಳಿಯದಾ**ಯಿತು**. ಹೆದರಿಕೆ ಜೋರಾಗುತ್ತಿತ್ತು. ದೆವ್ವಗಳು ಹೀಗೆ ಬಂದು ಮನುಷ್ಯರನ್ನು ದೂರ ಕರೆದುಕೊಂಡು ಹೋಗಿ ಅಲ್ಲಿ ರಾಕ್ಷಸಾಕಾರ ತಾಳಿ ಕೊಂದು ತಿಂದುಬಿಡುವುವೆಂದು ಕೇಳಿದ್ದೇನೆ. ಅಲ್ಲೇ ಮನೆಯಲ್ಲಿ ಸುಖವಾಗಿ ಮಲಗಿ ಗೊರಕೆ ಹೊಡೆಯಬಹುದಿತ್ತಲ್ಲ. ಇಲ್ಲಿಗೇಕೆ ಬಂದೆ ಚಿಂತಿಸುತ್ತಿದ್ದೆ. ಆದರೆ ಚಿಕ್ಕಪ್ಪ ಜತೆಯಲ್ಲಿರುವಾಗ ಯಾವ ಹೆದರಿಕೆ? ಅದೂ ಅಲ್ಲದೆ ನನಗೆ ಗಾಯತ್ರಿ ತಿಳಿದಿದೆ. ಜನಿವಾರದ ಗಂಟನ್ನು ಭದ್ರವಾಗಿ ಹಿಡಿದುಕೊಂಡು ಮನಸ್ಸಿನಲ್ಲಿಯೇ ಗಾಯತ್ರೀ ಜಪ ಮಾಡತೊಡಗಿ**ದೆ**ನು.

ಹೊಳೆಯಿಂದ ಒಂದು ಫರ್ಲಾಂಗು ಎ**ಂದು** ಇದ್ದ ದೂರ, ರಬ್ಬರು ಎಳೆದಾಗ ಉದ್ದವಾಗುವಂತೆ, ನಡೆದಂತೆ ಹಿಗ್ಗುತ್ತ ಸಾಗಿತು. ಅಂತೂ ಕೊನೆಗೆ ಆ ಬಡಪಾಯಿಯ ಮನೆ ಬಂದಿತು. ಕನಿಷ್ಠ ಪಕ್ಷ ಎರಡು ಮೈಲು ದೂರ ಹೊಳೆಯಿಂದ ಅಲ್ಲಿಗೆ ಇರಬೇಕೆಂದು ನಾನು ಊಹಿಸಿದೆ. ಅದೊಂದು ಹುಲ್ಲುಜೋಪಡಿ. ಆ ಲಾಂದ್ರದ ಬೆಳಕಿನಲ್ಲಿ, ಕತ್ತಲೆಯ ಮಧ್ಯೆ ಒಂದು ಬೂದಿಯ ರಾಶಿ ನಿಂತ ಹಾಗೆ ಕಂಡೆ. "ಅಕೊಳ್ಳಿ ಬಂತು ಸ್ವಾಮೀ" ಎಂದನು. ಸುತ್ತಲೂ ಮನೆಯನ್ನು ನುಂಗುವಂತೆ ಕಾಡುಗಿಡಗಳು ಹಬ್ಬಿದ್ದುವು. ಎಲ್ಲ ಕಡೆಗಳಲ್ಲಿಯೂ ಈ ದುರ್ಗ ಅಭೇದ್ಯ. ನಾನು ಬಂದ ಕಡೆ ನೋಡಿದರೂ ಕತ್ತಲೆಯ ಕಾಡೇ. ಇಲ್ಲಿಯೂ ಒಂದು ಮನೆಯು ಇರಬಹುದೇ ಎಂದು ನನಗಾಶ್ಚರ್ಯ! ಚಂದ್ರನು ನೆತ್ತಿನಿಂದ ಕೆಳಗೆ (ಯಾವ ಕಡೆಗೆ ಎಂದು ನನಗೆ ತಿಳಿಯಲಿಲ್ಲ) ಇದ್ದನು. ನನಗೆ ಮೈಗೆ ತಣ್ಣೀರು ಚೆಲ್ಲಿದಂತೆ ಆಗುತ್ತಿತ್ತು.

ಅವನು ಗುಡಿಸಲು ಬಾಗಿಲನ್ನು ನೂಕಿ ತೆರೆದು "ಅಜ್ಜೀ, ಅಜ್ಜೀ" ಎಂದು ಕೂಗಿದನು. ಒಳಗಿನಿಂದ ಒಂದು ಮಂದಪ್ರಕಾಶ ಹೊರಗೆ ಬಂದಿತು. ನಾವು ಅಂಗಳದಲ್ಲಿಯೇ ನಿಂತಿದ್ದೆವು. ಡಾಕ್ಟರರ ಪೆಟ್ಟಿಗೆಗಳನ್ನು ಅವನು ಒಳಗಿಟ್ಟು ನಮ್ಮನ್ನು ಒಳಗೆ ಬರಲು ಕರೆದನು. "ಬನ್ನಿ ಸ್ವಾಮೀ, ಅವಳೇ ನನ್ನಜ್ಜಿ" ಎಂದು ನಿಟ್ಟುಸಿರುಗರೆದನು.

ಆ **ಮಸ**ಕು ಬೆಳಕಿನಲ್ಲಿಯೇ ಅದೊಂದು ಹೊಲಸುಗೂಡು ಎಂದು ನನಗನಿಸಿತು. ಗೋಡೆಯೇ ಇಲ್ಲ. ಬಿದಿರು ದಬ್ಬೆಯನ್ನು ಕಟ್ಟಿದ್ದರು. ಒಂದು ದುರ್ವಾಸನೆ ಅಲ್ಲೆಲ್ಲ ತುಂಬಿತ್ತು. ನನಗೆ ಹೊರಗೇ ನಿಲ್ಲಬೇಕೆಂದಾಯಿತು. ಆದರೆ ಚಿಕ್ಕಪ್ಪ ಒಳಗೆ ಹೋದಮೇಲೆ, ನಾನು ಅವರ 'ಅಂಗರಕ್ಷಕ' ಹೊರಗೆ ನಿಲ್ಲುವುದು ಸರಿಯೇ? ಅತ್ತಿತ್ತ ನೋಡಲೂ ನನಗೆ ಧೈರ್ಯವಿಲ್ಲ – ಕೆಂಪು ಕಣ್ಣುಗಳೋ, ಕೋರೆದಾಡೆಯ ಮುಖವೂ ಕಂಡರೇ? 'ಹ್ವಾ ಸಿಕ್ಕಿದೆಯಾ?' ಎಂದು ಕೇಳಿದರೆ? ನನ್ನ ಎದೆಯು ವೇಗವಾಗಿ ಹೊಡೆಯತೊಡಗಿತು – ಒನಕೆ ತೆಗೆದುಕೊಂಡು ಕುಟ್ಟಿದಂತೆ ನನಗಾಗುತ್ತಿತ್ತು. ಚಳಿಯಾಗಬೇಕಾದ ಹವೆಯಾದರೂ ಮೈ ಬೆವರಿತ್ತು. ಅಂತೂ ಹೊರಗೆ ನಿ**ಲ್ಲಲೂ ಆ**ರದೇ, ಒಳಗೆ ಹೋಗಲೂ ಒಗ್ಗದೇ ಚಿಕ್ಕಪ್ಪನವರನ್ನು ಹಿಂಬಾಲಿಸಿದೆನು.

ನುಗ್ಗಿದ ಹಾಗೇ ಎಡಗಡೆ ಹರಕು ಚಾಪೆಯಲ್ಲಿ ಮುದುಕಿ ಮುದುರಿ ಮಲಗಿದ್ದಳು. ಅದೊಂದು ಚಿಂದಿ ಬಟ್ಟೆಯ ರಾಶಿಯೆಂದು ನಾನು ಮೊದಲು ಊಹಿಸಿದೆನು.

"ಅಜ್ಜೀ ಡಾಕ್ಟ್ರು ಬಂದರು ನೋಡು."

ಚಿಕ್ಕಪ್ಪ ಸ್ಟೆತಸ್ಕೋಪ್ ತೆಗೆದುಕೊಂಡು ಮುಂದೆ ಬಗ್ಗಿದರು. ಮುದುಕಿಗೆ ಪ್ರಜ್ಞೆಯೇ ಇರಲಿಲ್ಲ. ಬಹಳ ಹೊತ್ತು ಚಿಕ್ಕಪ್ಪ ಪರೀಕ್ಷೆ ಮಾಡಿದರು. ಅವನು ಮೂಲೆಯಲ್ಲಿ ನಿಂತು ನೋಡುತ್ತಿದ್ದನು.

"ಮಗೂ ನಾನು ಬಂದೆ, ನಾನು ಬಂದೆ ಚಿನ್ನಾ" ಎಂದು ಅವಳು ಚೀರಿದಳು. ನನಗೆ ಗಾಬರಿಯಾಗಿ ಎದೆಯು ಒಡೆಯುವಂತೆ ಆಯಿತು.

"ಬೇಡಬೇಡ ಅಜ್ಜೀ, ನನ್ನ**ನ್ನು** ಬಿಟ್ಟು ಹೋಗಬೇಡ ಡಾಕ್ಟ್ರು ಬಂದಿದ್ದಾರೆ. ಕಣ್ಣುಬಿಟ್ಟು ನೋಡು" ಎಂದು ಅವನು ಅಳುತ್ತ ಹೇಳಿದನು. ಕುಡಿಯುವ ನೀರನ್ನು ತರಲು ಚಿಕ್ಕಪ್ಪ ಅವನಿಗೆ ಹೇಳಿದರು. ಅವನು ಹೊರಗೆ ಹೋಗಿ ಒಂದು ಮಸಿ ಹಿಡಿದ ಕುಡಿಕೆಯಲ್ಲಿ ನೀರನ್ನು ತಂದನು. ಮದ್ದಿನ ಪೆಟ್ಟಿಗೆಯಿಂದ ಸ್ಪಿರಿಟ್ ದೀಪವನ್ನು ತೆಗೆದು ಉರಿಸಿದರು. ಅವಳಿಗೊಂದು ಇಂಜಕ್ಷನ್ (ಸೂಜಿಮದ್ದು)

ಕೊಟ್ಟರು. ಮತ್ತೆ ತಂದಿದ್ದ ಕೆಲವು ಔಷಧಿಯ ಸೀಸೆಗಳಿಂದ ಔಷಧಿಯ ಪುಡಿಗಳನ್ನು ತೆಗೆದು ಸಣ್ಣ ಪೊಟ್ಟಣಗಳಾಗಿ (ಹೋಮ್ಯೋಪತಿ ಮದ್ದು) ಮಾಡಿಕೊಟ್ಟರು.

"ಎರಡು ಗಂಟೆಗಳಿಗೊಂದು ಪೊಟ್ಟ ಕೊಡು. ಅಕ್ಕಿ ಹುರಿದು ಗಂಜಿ ಮಾಡಿಕೊಡು. ಮತ್ತೆ ತಲೆಗೆ ತಣ್ಣೀರು ಬಟ್ಟೆ ಇಡಬೇಕು" ಎಂದರು ವೈದ್ಯರು. ಅವನು ಭಕ್ತಿಯಿಂದ ಕಿವಿಗಳನ್ನರಳಿಸಿ ಕೇಳಿದನು. ಅವನ ಆಗಿನ ವಿಕಾರಸ್ವರೂಪವನ್ನು ನೋಡಿ ನನಗೆ ಅಸಹ್ಯವಾಯಿತು.

"ಮತ್ತೆ ಅವಳ ಪ್ರಾಣಕ್ಕೆ...."

"ಈಗ ಏನು ಹೇಳಲೂ ಸಾಧ್ಯವಿಲ್ಲ. ಇನ್ನೆರಡು ದಿವಸವಾಗಬೇಕು, ನಾಳೆ ಮಧ್ಯಾಹ್ನದವರೆಗೆ ಮದ್ದುಂಟು, ಮತ್ತೆ ಮನೆಗೆ ಬಾ."

ಅವನ ಮುಖ ಸಣ್ಣದಾಯಿತು. ಆ ನೆರಿಗಟ್ಟಿದ ಗಡ್ಡ ಅರ್ಧ ಹೆರೆದ ಮುಖ ಇನ್ನೂ ಭಯಕಾರಕವಾಗಿ ತೋರಿತು.

ಅಬ್ಬ, ಅಂತೂ ಒಂದು ಸಲ ಮುಗಿಯಿತಲ್ಲ ಎಂದು ನಾನು ನಿಟ್ಟುಸಿರು ಬಿಟ್ಟು ಹೊರಟೆ. ಆದರೆ ಹೊರಗೆ ಮಾತ್ರ ಮೊದಲಾಗಿ ಕಾಲಿಡಲು ನನಗೆ ಧೈರ್ಯವಿರಲಿಲ್ಲ.

"ನಮಗೀಗ ಕಾವೇರಿ ಹೊಳೆವರೆಗಾದರೂ ದಾರಿ ತೋರಿಸಬೇಕಲ್ಲ" ಎಂದರು ಚಿಕ್ಕಪ್ಪ.

"ನಿಮ್ಮ ಮನೆಯವರೆಗೂ ಬಂದುಬಿಡುತ್ತೇನೆ, ಸ್ವಾಮೀ! ದೇವರು ಬಂದ ಹಾಗೆ ತಾವು ಬಂದಿರಿ. ಈ ಪಾಪಿಯ ಮೇಲೆ ಇಷ್ಟಾದರೂ ದಯ ಬಂದಿತಲ್ಲ!" ಎಂದು ಅವನು ನಡುಗುವ ಧ್ವನಿಯಿಂದ ಹೇಳಿದನು. ನಾನು ನಮ್ಮ ಲಾಂದ್ರವನ್ನು ಹಿಡಿದು ಹೊರಗೆ ಇಳಿದೆನು. ತಂಗಾಳಿಯನ್ನು ಉಚ್ಛ್ವಸಿಸಿ ಸಮಾಧಾನವಾಯ್ತು.

"ಅಜ್ಜೀ, ಅಜ್ಜೀ, ಔಷಧಿ ತಿನ್ನು ಅಜ್ಜೀ" ಎಂದು ಅವನು ಹೇಳುತ್ತಿದ್ದುದು ಕೇಳುತ್ತಿತ್ತು.

ಕೆಲವು ನಿಮಿಷಗಳಲ್ಲಿಯೇ ಅವನು ಹೊರಗೆ ಬಂದನು.

"ಏನು ಔಷಧಿ ತಿನ್ನಿಸಿದೆಯಾ?"

"ತಿನ್ನಿಸಿದ ಹಾಗಾಯ್ತು. ನನ್ನನ್ನು ಬಚಾವು ಮಾಡಿದಿರಿ ಸ್ವಾಮೀ ಈ ದಿನ  ನೀವು" ಎಂದು ಅವನು ಮುಂದೆ ಹೊರಟನು. ನಾನು ನಡುವೆ, ಚಿಕ್ಕಪ್ಪ ಹಿಂದೆ. ಗಂಟನ್ನು ಅವನೇ ಹೊತ್ತುಕೊಂಡನು. ಚಂದ್ರನು ಇನ್ನೂ ಕೆಳಗೆ ಇಳಿದಿದ್ದನು. ಆದ್ದರಿಂದ ನಾವು ಬಂದು ತಲುಪಿದಾಗಲೇ ಪಶ್ಚಿಮಾಭಿಮುಖಿಯಾಗಿದ್ದ ಅಂದುಕೊಂಡೆ.

"ನೀನು ಯಾರೆಂದು ತಿಳಿಯಲಿಲ್ಲವಲ್ಲ. ಈ ಕಾಡಿನ ಮಧ್ಯೆ ಇದ್ದೀಯಲ್ಲ. ನಿನ್ನ ಕಸಬೇನು?"

"ಸ್ವಾಮೀ ಇವತ್ತು ನಿಮ್ಮಿಂದ ದಯೆ ಅನ್ನುವುದನ್ನು ಕಂಡೆನು."

"ಅದೇನು ಮಹಾ. ನೀನು ಯಾರೆಂದು ಹೇಳು."

"ಅದನ್ನು ಹೇಳಿದರೆ ನೀವು ಕೂಡಲೇ ಪೊಲೀಸಿಗೆ ಹೇಳುತ್ತೀರಿ. ಆದರೆ ಆ ಪಾಪದ ಅಜ್ಜಿ ಬದುಕಿರುವವರೆಗೆ ಹಾಗೆ ಮಾಡಬೇಡಿ."

"ನೀನು ಯಾರಾದರೂ ನಾನು ಯಾಕೆ ಪೊಲೀಸಿಗೆ ಹೇಳಬೇಕು? ಧೈರ್ಯವಾಗಿ ಹೇಳು."

"ನನ್ನ ಹೆಸರು ಬಿದನೂರು ಸಿಂಗಪ್ಪ...."

"ಏನು ನೀನು ಸಿಂಗಪ್ಪ, ಕೇಡಿ ಸಿಂಗಪ್ಪನೋ?"

"ಹೌದು ಸ್ವಾಮೀ ನಾನೇ ಕೇಡಿ ಸಿಂಗಪ್ಪ, ನರರಕ್ತ ಹೀರಿದ ಸಿಂಗಪ್ಪ. ಹೆದರುತ್ತೀರಾ?"

"ಅಯ್ಯೋ" ಚೀರಿದೆನು ನಾನು. ಹೆದರಿ ಚಿಕ್ಕಪ್ಪನವರ ಹಿಂದೆ ನಿಂತೆನು.

"ನೀವು ನನ್ನಿಂದ ಹೆದರಬೇಕಾಗಿಲ್ಲ ಸ್ವಾಮೀ. ನೀವು ಬರೋದೇ ಇಲ್ಲ ಅಂದಿದ್ದರೆ ನೋಡಿ ನಿಮ್ಮ ರಕ್ತ ಹೀರುತ್ತಿದ್ದೆ. ಆದರೆ ನೀವು ನನ್ನ ಅಜ್ಜಿಗೆ ಔಷಧಿ ಕೊಟ್ಟವರು...." ಎಂದು ಒಂದು ಚೂರಿಯನ್ನು ಜೇಬಿನಿಂದ ತೆಗೆದು ತೋರಿಸಿದನು. ಆ ಲಾಂದ್ರದ ಬೆಳಕಿನಲ್ಲಿಯೂ ಅದು ಫಳ ಫಳ ಎಂದು ಹೊಳೆಯಿತು.

"ಆದರೆ ನೀವು ಒಳ್ಳೇ ಮನುಷ್ಯರು, ನಡೆಯಿರಿ." ಅವನು ಮುಂದೆ ನಡೆದನು. ನಾನು ಚಿಕ್ಕಪ್ಪನ ಜತೆಯಲ್ಲಿಯೇ ಆ ಅಗಲಕಿರಿದಾದ ದಾರಿಯಲ್ಲಿ ಕಷ್ಟದಿಂದ ನಡೆಯತೊಡಗಿದೆನು.

"ನೀನು ಸಿಂಗಪ್ಪನೇ ಹೌದೇ? ಈಗ ಸುಮಾರು ತಿಂಗಳ ಹಿಂದೆ ಉಡುವತ್ತು ಮೊಟ್ಟೆಯಲ್ಲಿ ನಡೆದ ಅಂಚೆ ಗಿರಿಯಪ್ಪನ ಖೂನಿಗೆ ನಿನ್ನ ಮೇಲೆ ಗುಮಾನಿಯಿಂದ ಪೊಲೀಸರು ಹುಡುಕುತ್ತಿದ್ದರಲ್ಲ?"

"ಪೊಲೀಸಿನವರಿಗೇನು? ಯಾರಾದರೂ ಸಿಕ್ಕಿದರೆ ಅವರಿಗೆ ಛಡಿ ಹೊಡೆಯುವುದೇ ಅವರ ಕಾರ್ಯ. ನಾನೇ ಗಿರಿಯಪ್ಪನನ್ನು ಕೊಂದು ರಕ್ತ ಕುಡಿದುದು. ಆದರೆ ಪೊಲೀಸರಿಗೆ ನಾನು ಎಲ್ಲಿದ್ದೇನೆಂದೂ ಗೊತ್ತಿಲ್ಲ. ನನ್ನ ಕತೆ ಗೊತ್ತುಂಟೋ ನಿಮಗೆ?"

"ನೀನು ಮಹಾ ಕೇಡಿಯೆಂದು ಕೇಳಿದ್ದೇನೆ. ನಿನ್ನ ವಿಷಯ ಹೇಳಬಹುದಾದರೆ ಹೇಳು. ಆದರೆ ನನ್ನಿಂದ ನಿನಗೆ ಯಾವ ಕೇಡೂ ಆಗಲಾರದು. ಇದು ಮಾತು."

"ಕೇಡಾದರೆ ನಾನು ಹೆದರಲಾರೆ. ನನ್ನ ರಕ್ತದ ಆಸೆ ತೀರಿಸಿಕೊಳ್ಳುತ್ತೇನೆ. ಆದರೆ ನೀವು ಒಳ್ಳೆಯವರು. ನನಗೆ ದಯೆ ತೋರಿಸಿದಿರಿ. ಪೊಲೀಸಿನವರಿಗೆ ಮಾತ್ರ ನನ್ನ ವಿಷಯ ತಿಳಿಸಬೇಡಿ. ನನ್ನ ಕತೆ ಕೇಳಿ.

"ಮದೆನಾಡಿನಲ್ಲಿ ನಾನು ಹುಟ್ಟಿದೆ. ನಮ್ಮ ಮನೆಯಲ್ಲಿ ನಾನು ನನ್ನ ತಮ್ಮ ಮತ್ತೆ ತಮ್ಮ ತಂದೆ ತಾಯಿ ಮಾತ್ರ ಇದ್ದೆವು. ಅಪ್ಪ ನನ್ನನ್ನು ಕರೆದುಕೊಂಡು ಗದ್ದೆಗೆ, ಕಾಡಿಗೆ ಎಲ್ಲ ಹೋಗುತ್ತಿದ್ದ. ಅವನು ನನಗೆ ಹೊಡೆದದ್ದೇ ಇರಲಿಲ್ಲ. ಆದರೆ ಅವ್ವ ಬಹಳ ಹೊಡೆಯುತ್ತಿದ್ದಳು. ಸಣ್ಣ ಸಣ್ಣ ತಪ್ಪಿಗೆ ಛಡಿ ಏಟು ಬೀಳುತ್ತಿದ್ದಿತು. ಒಂದು ಹೊಳೆಯಲ್ಲಿ ಮಿಂದೆನೆಂದು ಬಾಸುಂಡೆ ಬರುವಹಾಗೆ

ಬಡಿದಳು – ಆದರೆ ಇವೆಲ್ಲ ಅಪ್ಪ ಮನೆಯಲ್ಲಿ ಇಲ್ಲದಾಗ. ನನಗೆ ಅವ್ವನ ಮೇಲೆ ಬಹಳ ಸಿಟ್ಟು ಬರುತ್ತಿತ್ತು. 'ದೊಡ್ಡವನಾದಮೇಲೆ ನಿನಗೆ ನಾನು ಖಂಡಿತ ಪಾಠ ಕಲಿಸುತ್ತೇನೆ ನೋಡು' ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಿದ್ದೆ. ನನ್ನ ತಮ್ಮನಿಗೂ – ಅವನು ಮಗುವಾಗಿದ್ದ – ಅವಳು ತುಂಬ ಹೊಡೆಯುತ್ತಿದ್ದಳು, ಆದರೆ ನನಗೇ ಬಲವಾದ ಪೆಟ್ಟು. ತಮ್ಮನ ಮೇಲೆ ನನಗೆ ತುಂಬಾ ಪ್ರೀತಿಯಿತ್ತು.

"ಒಂದು ದಿವಸ ಯಾವುದೋ ಒಂದು ಹಬ್ಬ. ನಮ್ಮ ಮನೆಯಲ್ಲಿ ಭಾರೀ ಭಾರೀ ಒಂದು ಹಂದಿ ಬೆಳೆದಿತ್ತು. ಅದನ್ನು ಅಪ್ಪ ಹಿಡಿದುಕೊಂಡ. ಆಗ ಹತ್ತಿರದ ಮನೆಯ ಕಾಳಪ್ಪನೂ ಬಂದನು. ಇಬ್ಬರೂ ಸೇರಿ ಆ ಹಂದಿಯ ಕೈಕಾಲುಗಳನ್ನು ಬಲವಾಗಿ ಕಟ್ಟಿದರು. ಅದು ಅರಚುತ್ತ ನೆಲದಮೇಲೆ ಉರುಳುತ್ತಿತ್ತು. ಹಳೇ ಬೊಡ್ಡು ಬಾಳು ಕತ್ತಿಯನ್ನು ಅವ್ವನು ಮನೆಯೊಳಗಿನಿಂದ ತಂದುಕೊಟ್ಟಳು. ನಾನು ಹಂದಿ ಕೂಗುವುದನ್ನು ನೋಡಿ ನಗುತ್ತ ನಿಂತೆ. ಅಪ್ಪ ಕತ್ತಿ ಹಿಡಿದುಕೊಂಡು ಹೊರಟ. ಕಾಳಪ್ಪ ಆ ಹಂದಿಯ ಮುಸುಡನ್ನು ಅಮುಕಿ ಹಿಡಿದನು. ಬಾಳುಕತ್ತಿ ಎತ್ತಿ ಅದರ ದಪ್ಪವಾದ ಕುತ್ತಿಗೆಗೆ ಒಂದು ಏಟನ್ನು ಅಪ್ಪನು ಹೊಡೆದನು. ನನಗೆ ಅದನ್ನು ನೋಡಿ ಭಾರೀ ಸಂತೋಷವಾಯಿತು. ನನಗೇ ಹೊಡೆಯಲಿಕ್ಕೆ ಸಿಕ್ಕಿದ್ದರೆ ಎಂದಾಯಿತು. ಬಾಳು ಕತ್ತಿ ಅದರ ಕೊಬ್ಬಿದ ಕುತ್ತಿಗೆಯಲ್ಲಿ ಒಂದು ಗಾಯ ಮಾಡಿ ಹಿಂದೆ ಚಿಮ್ಮಿತು, ಹಂದಿಯು ಅರಚಿತು, ಉರುಳಿತು, ಉರುಚಿತು. ಕಾಳಪ್ಪ ಬಲವಾಗಿ ಹಿಡಿದನು. ನಾನು ನಗಾಡಿದೆನು. ಅಪ್ಪನು ಇನ್ನೊಂದೇಟು ಬಲವಾಗಿ ಅಲ್ಲಿಗೆ ಹೊಡೆದನು. ಈ ಗಾಯ ಆಳವಾಗಿ, ಅಲ್ಲಿಂದ ರಕ್ತ ಹರಿಯಿತು. ಹಂದಿ ಮಲಗಿದಲ್ಲೇ ಹೊರಳಿ ಅಂಗಳದ ಆ ಕಡೆಗೆ ಉರುಳಿತು. ಅದರ ಕೂಗು ಕರ್ಕಶವಾಗಿತ್ತು. ನನಗೆ ಹಿತಕರವಾಗಿತ್ತು. ನಾನು 'ಹೇ ಕೂಗುತ್ತೀಯಾ ಹಂದಿ' ಎಂದು ಅದರ ಹಿಂದೆಯೇ ಓಡಿದೆನು. ಕಾಳಪ್ಪ ಪುನಃ ಹಿಡಿದನು. ಅಪ್ಪ ಆ ಗಾಯದೊಳಗೆ ಕತ್ತಿಯನ್ನು ನುಗ್ಗಿಸಿ ಕರಕರ ಎಂದು ಅದರ ಕುತ್ತಿಗೆಯನ್ನು ಕೊಯ್ದನು. 'ಎಷ್ಟು ಚಂದ, ಎಷ್ಟು ಚಂದ, ಎಷ್ಟು ಚಂದ' ಎಂದು ನಾನು ಅಲ್ಲಿಯೇ ಕುಣಿದಾಡಿದೆನು. ಅಂಗಳವಿಡೀ ರಕ್ತಮಯವಾಯಿತು, ಹಂದಿಯ ತಲೆ ತುಂಡಾಗಿ ಅಡ್ಡ ಬಿದ್ದಿತು. ನಾನು ಓಡಿಹೋಗಿ ಸತ್ತ ಹಂದಿಯ ಮೇಲೆ ಕೂತೆ. ಅದರ ಕುತ್ತಿಗೆಯಿಂದ ರಕ್ತ ಚಿಮ್ಮಿತು. ಅಪ್ಪ 'ಏಳೋ' ಅಂದನು. ನಾನು ಅಲ್ಲಿಯೇ ನಿಂತು 'ಎಷ್ಟು ಚಂದ ನಾನು ನೋಡಲೇ ಇಲ್ಲ' ಎಂದುಕೊಂಡೆನು. ಸುರಿಯುತ್ತಿದ್ದ ರಕ್ತವನ್ನು ತುದಿ ಬೆಟ್ಟಿನಲ್ಲಿ ಮುಟ್ಟಿ ಚೀಪಿದನು. ಅದೆಷ್ಟು ರುಚಿ! ಅದರ ಮುಚ್ಚಿದ್ದ ಕಣ್ಣುಗಳನ್ನು ಬಿಡಿಸಿ ಒಂದು ಕಡ್ಡಿಯಿಂದ ಚುಚ್ಚಲು ನೋಡಿದೆನು. 'ನಡೀತೀಯೋ ಇಲ್ಲವೊ ಮಾರಿ' ಎಂದು ಅವ್ವನು ಕೋಲು ತಂದಳು. ನಾನು ದೂರ ಓಡಿದೆನು. ರಕ್ತದ ರುಚಿಯಿಂದ ಬಾಯಿ ಚಪ್ಪರಿಸುತ್ತ ನಿಂತುಕೊಂಡೆನು. ಮತ್ತೆ ಅದರ ಚರ್ಮ ಸುಲಿದು, ಕಡಿದು ಹೋಳು ಮಾಡಿ ಏನೇನೋ ಮಾಡಿದರು. ಅದರ ಕುತ್ತಿಗೆ ಕೊಯ್ದುದನ್ನು ಪುನಃ ಪುನಃ ಯೋಚಿಸಿಕೊಂಡು ಎಂಥ ಅದ್ಭುತವೆಂದು ನಾನು ಆನಂದಪಡುತ್ತಿದ್ದೆನು. ಆ ದಿನ ನಮಗೆ ಹಂದಿಯ ಉದಕ (ಮೇಲೋಗರ) ಇತ್ತು. ಇನ್ನೂ ಯಾರಾರೋ ಬಂದಿದ್ದರು. ಹಂದಿ ಮಾಂಸದ ಊಟ ಒಳ್ಳೇ ರುಚಿಯಾಗಿತ್ತು.

"ನಾನೂ ಒಂದು ಹಂದಿಯ ಕುತ್ತಿಗೆ ಕೊಯ್ಯಬೇಕೆಂದು ನನಗೆ ಆಸೆಯಾಯಿತು. ಆದರೆ ಅಷ್ಟು ದೊಡ್ಡ ಹಂದಿಯೆಲ್ಲಿ? ಅಪ್ಪ ಅವ್ವ ಎಲ್ಲ ಗದ್ದಗೆ ಹೋದಾಗ ನಾನು ಮನೆಯಲ್ಲಿಯೇ ಕುಳಿತುಕೊಂಡು ಇರುತ್ತಿದ್ದೆ. ಅವರು ಹೋದ ಮೇಲೆ ನಾನು ಹೊರಗೆ ಹೋಗಿ ಕೋಳಿಮರಿಗಳನ್ನು ಹಿಡಿದು ಅವುಗಳ ಕುತ್ತಿಗೆ ಮುರಿಯುತ್ತಿದ್ದೆನು. ಹಾಗೆ ಆ ಮರಿಯನ್ನು ಕೈಯಲ್ಲಿ ಹಿಡಿದಾಗ ಅದು ಸಣ್ಣ ರೆಕ್ಕೆಗಳನ್ನು ಪಟಪಟನೆ ಬಡಿಯುತ್ತಿತ್ತು. ತಾಯಿ ಕೋಳಿಯು ಬೆರಸುತ್ತಿತ್ತು. ನನಗೆ ಆಗ ರಂಗೇರುತ್ತಿತ್ತು. ಮರಿಯ ಕುತ್ತಿಗೆ ಮುರಿದು ರಕ್ತ ಹೀರುವುದೆಂದರೆ ನನಗೆ ತುಂಬಾ ಖುಷಿಯ ಆಟವಾಯಿತು. ಮನೆಯಲ್ಲಿ ಸಾಕಷ್ಟು ಕೋಳಿಗಳೂ ಮರಿಗಳೂ ಇದ್ದುದರಿಂದ ಇದು ಅವ್ವನಿಗೆ ತಿಳಿಯಲೇ ಇಲ್ಲ. ಸತ್ತ ಮರಿಯನ್ನು ನಾನು ದೂರ ಎಸೆದು ಬಿಡುತ್ತಿದ್ದೆ. ಆದರೆ ಒಂದು ದಿವಸ ಅವ್ವ ಇದನ್ನೆಲ್ಲಿಯೂ ನೋಡಿಯೇ ಬಿಟ್ಟಳು. ನನಗೆ ಬಾರುಕೋಲಿನ ಭಡಿ ಏಟು – ಈಗಲೂ ನನಗೆ ಸಿಟ್ಟು ಏರುತ್ತದೆ – ಬಿತ್ತು. ಮೈಯ್ಯೆಲ್ಲ ಬಾಸುಂಡೆ ಬಂದಿತು. ಅಪ್ಪನೂ ಗದರಿಸಿದನು. ಕೋಳಿಗಳನ್ನೇ ಕೊಂದು ರಕ್ತ ಹೀರುತ್ತೇನೆ ಎಂದು ನಾನು ನಿಶ್ಚಯ ಮಾಡಿದೆನು. ಆದರೆ ಅವ್ವ ಕೋಳಿಗಳನ್ನು ಹೊರಗೆ ಬಿಡಲಿಲ್ಲ ಮತ್ತು ನನ್ನನ್ನು ಅವಳ ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದಳು. ಗದ್ದೆಯಲ್ಲಿ ಹಸಿ ಹುಲ್ಲು ಕೊಯ್ಯುವ ಕೆಲಸವನ್ನೂ ಕಾಡಿನಿಂದ ಸೌದೆ ಹೆಕ್ಕಿ ತರುವ ಕೆಲಸವನ್ನೋ ಕೊಡುತ್ತಿದ್ದಳು. ನನಗೆ ಭಾರೀ ಸಿಟ್ಟು ಬರುತ್ತಿತ್ತು. ಆದರೆ ಅವಳ ಏಟು ಉಂಟಲ್ಲ. ಅಪ್ಪನಿಗೆ ದೂರು ಹೇಳಿದರೆ? ಅಪ್ಪನಿಗೂ ನಾನು ಹೆದರುತ್ತಿದ್ದೆನು. ಎಷ್ಟು ದಿವಸವಾಯಿತೆಂದು ನನಗೆ ಲೆಕ್ಕ ಗೊತ್ತಿರಲಿಲ್ಲ. ಆದರೆ ಕೋಳಿಮರಿಯ ರಕ್ತ ಹೀರದೇ ನನಗೆ ತಡೆಯಲಿಕ್ಕಾಗಲಿಲ್ಲ. ಬಾಳೆಯ ಕಂದುಗಳನ್ನು ಕತ್ತಿಯಿಂದ ಕಡಿಯುತ್ತಿದ್ದೆ. ಬೇಲಿಯ ಗಿಡಗಳನ್ನು ಮುರಿದು ಎಸೆಯುತ್ತಿದ್ದೆ. ಮನೆಯ ಹಿಂದಿನ ಬರೆಯನ್ನು ಅಗೆದಗೆದು ಹಾಕುತ್ತಿದೆ. ಇಲ್ಲಿಯೂ ಅವ್ವನು ನೋಡಿದರೆ ನನಗೆ ಬಾಸುಂಡೆಯೇ ಗತಿ. ನಾನಾಗ ಸುಮಾರು ದೊಡ್ಡವನಾಗಿದ್ದೆ. ಅವ್ವನಷ್ಟೇ ಎತ್ತರವಾಗಿದ್ದೆ. ಅಪ್ಪನ ಹೆಗಲಿಗೆ ಬರುತ್ತಿದ್ದೆ. ಮತ್ತೊಂದು ದಿನದಿಂದ ದನ ಕಾಯಲಿಕ್ಕೆಂದು ನನ್ನನ್ನು ಬಾಣೆಗೆ ಕಳಿಸಿದರು. ತಮ್ಮ ಅವ್ವನ ಜೊತೆಯಲ್ಲಿ ಗದ್ದೆಗೆ ಹೋಗುತ್ತಿದ್ದ. ದನಕಾಯುವ ಕೆಲಸ ಬಹಳ ಬೇಜಾರದ್ದು. ಬೆಳಗ್ಗೆ ದನಗಳ ಜೊತೆಯಲ್ಲಿ ಹಡ್ಲಿಗೆ (ಬಯಲು) ಹೋದರೆ ಸಾಯಂಕಾಲವೇ ಹಿಂದೆ ಬರುವುದು. ಮಧ್ಯಾಹ್ನ ತಮ್ಮ ಬುತ್ತಿ ತಂದುಕೊಡುತ್ತಿದ್ದ. ರಾತ್ರಿಯಾಗುವವರೆಗೂ ದನಗಳ ಹಿಂದೆಯೇ ಅಲೆಯಬೇಕು. ಯಾವುದಾದರೊಂದು ಕರು ಹಿಂದಕ್ಕೆ ಬರದಿದ್ದರೆ, ಬೇರಾವುದಾರೂ ದನ ಗದ್ದೆಗೆ ಇಳಿದರೆ ನನಗೆ ಪೆಟ್ಟು. ಹಿಂದಕ್ಕೆ ಹೊಡೆಯಬೇಕು ಎಂದು ಸಿಟ್ಟು ಬರುತ್ತಿತ್ತು. ಆದರೆ ಅಪ್ಪ ಒಂದೇಟು ಹೊಡೆಯದಿದ್ದರೂ ನಾನು ಅವನಿಗೆ ಹೆದರುತ್ತಿದ್ದೆ.

"ಆ ಹಂದಿಯ ಕುತ್ತಿಗೆಯನ್ನು ಕೊಯ್ದಂತೆ ಒಂದು ಹಸುವಿನ ಕರುವಿನ ಕುತ್ತಿಗೆಯನ್ನೂ ಕತ್ತರಿಸಬೇಕೆಂದು ಒಂದು ದಿನ ನನಗೆ ಥಕ್ಕನೆ ಹೊಳೆಯಿತು. ಅಷ್ಟು ದಿನಗಳ ಬೇಜಾರವೆಲ್ಲವೂ ಆಗ ಮಾಯವಾಯಿತು. ನನಗೆ ಸಂತೋಷ ಉಕ್ಕಿತು. ಕೂಡಲೇ ಒಂದು ಕರುವನ್ನು ಹಿಡಿದುಕೊಂಡೆನು. ನನ್ನ ಕೈಯ್ಯಲ್ಲಿದ್ದ ಕತ್ತಿಯಿಂದ ಅದರ ಕುತ್ತಿಗೆಗೆ ಬಲವಾದ ಒಂದು ಏಟನ್ನು ಹೊಡೆದನು. ಹಂದಿಯ ಹಾಗೆ ಕರುವು ಒದ್ದಾಡಲಿಲ್ಲ – ಅದರ ಕತ್ತಿಗೆ ಅರ್ಧ ಗಾಯವಾಗಿ ಕರುವು ದೂರಕ್ಕೆ ಹಾರಿತು. ನಾನು ಅಲ್ಲಿಗೆ ಓಡಿ ಹೋಗಿ ಅದರ

ಕುತ್ತಿಗೆಯನ್ನು ಪೂರ್ಣವಾಗಿ ಕತ್ತರಿಸಿದೆನು. ನೆತ್ತರು ಹಾರಿತು, ಕಡಿದ ಭಾಗಕ್ಕೆ ಬಾಯನ್ನು ಇಟ್ಟು ರಕ್ತವನ್ನು ಹೀರಿದೆ. ಕೋಳಿ, ಹಂದಿ ರಕ್ತದಷ್ಟು ಇದು ನನಗೆ ರುಚಿಸಲಿಲ್ಲ. ಆದರೆ ಆ ಕಡಿಯುವ ಕೆಲಸ ಎಷ್ಟು ಸಂತೋಷದ್ದು! ಅಷ್ಟರಲ್ಲೇ ನನಗೆ ಅವ್ವನ ನೆನಪಾಯಿತು. ಕರುವನ್ನೆಳೆದು ಹತ್ತಿರದ ಬಿದಿರು ಹಿಂಡಲಿನ ಬುಡಕ್ಕೆ ಎಸೆದೆನು. ಹೊಳೆಯಲ್ಲಿ ಕತ್ತಿಯನ್ನೂ ನನ್ನ ಕೈ ಬಾಯಿಗಳನ್ನೂ ತೊಳೆದನು. ಸಂಜೆಯಾಗುವಾಗ ನಾನು ಉಳಿದ ದನಕರುಗಳನ್ನು ಅಟ್ಟಿಕೊಂಡು ಉಲ್ಲಾಸದಿಂದ ಮನೆಗೆ ಹಿಂತಿರುಗಿದೆ. 'ಗೋಪಿ ಕರುವೆಲ್ಲಿ' ಎಂದು ಅವ್ವ ಕೇಳಿದಳು. ನನಗೆ ಗೊತ್ತಿಲ್ಲವೆಂದು ತಲೆಯಲ್ಲಾಡಿಸಿದೆ. ಸರಿ ಛಡಿ ಬಿತ್ತು. ನಾನು ಅವ್ವನಿಗಿಂತ ಉದ್ದವಾಗಿದ್ದರೂ ಅದನ್ನು ಸಹಿಸಿದೆ. ನನ್ನನ್ನು ಸಣ್ಣ ಮಗುವೆಂದೇ ಅವಳು ತಿಳಿದಿದ್ದಳೋ ಏನೋ? ಅಪ್ಪ ಬಂದು ಹೆಚ್ಚಿಗೆ ಬೀಳುತ್ತಿದ್ದ ಪೆಟ್ಟನ್ನು ತಡೆದನು. ನನಗೆ ಎಲ್ಲಿಯಾದರೂ ಓಡಿಹೋಗಬೇಕೆಂದಾಯ್ತು. ಹಸಿವು ಜೋರಾಗುತ್ತಿತ್ತು. ಊಟಮಾಡಿ, ಮಧ್ಯರಾತ್ರಿ ಎದ್ದು ಓಡಿಹೋಗುವುದೆಂದು ಮಲಗಿದೆ. ಮಧ್ಯರಾತ್ರಿಯಾಯಿತೆಂದು ಫಕ್ಕನೆ ಎದ್ದು ನೋಡುವಾಗ ಮಾರನೇ ದಿನ ಬೆಳಗಾಗಿತ್ತು. ಹಾಳು ನಿದ್ರೆ ನನಗೆ ಗಾಢವಾಗಿ ಬಂದಿತ್ತು. ಮರುದಿನ ಅಪ್ಪ ಅವ್ವ ಎಲ್ಲರೂ ಕರುವನ್ನು ಹುಡುಕಲು ಹೋದರು. ನಾನು ದನ ನೋಡಲು ಹೋದೆ. ಆ ಬಿದಿರುಮೆಳೆಯ ಹತ್ತಿರ ಅವರು ಪರೀಕ್ಷೆಮಾಡುವುದನ್ನು ನಾನು ದೂರದಿಂದ ನೋಡಿದೆನು. ಆದರೆ ಅವರು ಅಲ್ಲಿಂದ ಸುಮ್ಮನೆ ಗದ್ದೆಗೆ ಮರಳಿದರು. ಅವ್ವ ನನಗೆ ಹೊಡೆಯಲಿಕ್ಕೆ ಬರಲಿಲ್ಲ. ಮತ್ತೆ ನಾನು ಅಲ್ಲಿಗೆ ಹೋಗಿ ನೋಡುವಾಗ ಆ ಕರುವಿನ ಅರ್ಧದೇಹವನ್ನು ಯಾವುದೋ ಪ್ರಾಣಿ ತಿಂದಹಾಗಿತ್ತು. ಅಂತೂ ಇನ್ನೊಂದು ಪೆಟ್ಟಿನ ಹೊಡೆತ ನನಗೆ ತಪ್ಪಿತು ಎಂದು ಖುಷಿಯೂ ಆಯಿತು. ಇನ್ನೂ ಕಡಿದು ಕುಡಿಯುವ ಆನಂದ ಅನುಭವಿಸಬೇಕೆಂದೂ ಅನಿಸಿತು. ಆದರೆ ಮರುದಿವಸದಿಂದಲೇ ನನ್ನನ್ನು ದನ ಕಾಯಲು ಹೋಗಬಿಡಲಿಲ್ಲ. ನನ್ನ ತಮ್ಮ ಆ ಕೆಲಸ ಮಾಡಹೊರಟ. ನಾನು ಗುದ್ದಲಿಯಿಂದ ಸುಮ್ಮಸುಮ್ಮನೆ ಮಣ್ಣು ಅಗೆಯುವುದು, ಗಿಡಗಳ ತಲೆ ಕತ್ತರಿಸುವುದು ಹೀಗೆಲ್ಲ ಮಾಡುತ್ತ ನನ್ನ ಸೇಡನ್ನು ತೀರಿಸಿಕೊಳ್ಳುತ್ತಿದ್ದೆ. ಆದರೆ ಕೋಳಿಮರಿಯೂ ಇಲ್ಲ, ಕರುವೂ ಇಲ್ಲ, ಹಂದಿಯಂತೂ ಇಲ್ಲವೇ ಇಲ್ಲ. ನಾನು ಅವ್ವನ ಮೇಲೆ ಸಿಟ್ಟಿನಿಂದ ಕುದಿಯುತ್ತಿದೆ. ಹಲ್ಲು ಕಡಿಯುತ್ತಿದ್ದೆ.

"ಮತ್ತೆಷ್ಟೋ ದಿವಸವಾಯಿತು. ಮಳೆಗಾಲ ಕಳೆದು ಬೆಳೆ ಕೆಲಸದ ಸಮಯ. ಅಪ್ಪ ಯಾವಾಗಲೂ ನನ್ನನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿ**ದ್ದನು**. ಅವನು ದೂರ ಎಲ್ಲಿಯಾದರೂ ಹೋದರೆ ಅವ್ವನ ಕಣ್ಣು ಯಾವಾಗಲೂ ನನ್ನ ಮೇಲೆಯೇ ಇರುತ್ತಿತ್ತು. ಆ ಬೆಳೆ ಕೆಲಸದ ಸಮಯದಲ್ಲಿ ನಾನು ಗದ್ದೆಯಲ್ಲಿ ತಿರುಗುತ್ತಿದ್ದೆ. ದೂರದಲ್ಲಿ ಒಂದು ಹಸುವನ್ನು ನಮ್ಮ ಗದ್ದೆಯನ್ನು ಮೇಯುತ್ತಿತು. 'ಹೋಗು ಅದನ್ನು ಬೆರಸು ಸಿಂಗಾ' ಎಂದನು ಅಪ್ಪ. ನಾನು ಕತ್ತಿಯನ್ನು ಹಿಡಿದುಕೊಂಡೇ ಓಡಿದೆನು. ನಾನು ಓಡುತ್ತಿದ್ದ ಹಾಗೆಯೇ ಹಸು ಅಲ್ಲಿಂದ ಧಾವಿಸಿತು. ಗದ್ದೆಗಳನ್ನು ತುಳಿದು, ಬೇಲಿಯನ್ನು ಹಾರಿ, ಹೊರಗೆ ಬಯಲಿಗೆ ಜಿಗಿಯಿತು. ನಾನು ಅದನ್ನೇ ಕಡಿದೇ ಬಿಡಬೇಕು, ಅಥವಾ ಒಂದು ಏಟನ್ನಾದರೂ ಕತ್ತಿಯಿಂದ ಹೊಡೆಯಲೇಬೇಕೆಂದು ಹಠದಿಂದ ಓಡಿದೆನು. ಆಗಲೇ 'ಯಾಕೋ ನಮ್ಮ ದನ ಬೆರಸುತ್ತೀಯ?' ಎಂದು ಯಾರೋ ಕೂಗಿದರು. ನಾನು ಆ ಪೋರ ಸಣ್ಣನನ್ನು ನೋಡಿ 'ನೀನ್ಯಾರೋ ಕೇಳಲಿಕ್ಕೆ?' ಎಂದು ಉತ್ತರ ಕೊಟ್ಟೆನು. ಆ ಹೈದನು 'ನೋಡು ಅಪ್ಪನ ಹತ್ತಿರ ಹೇಳುತ್ತೇನೆ. ನಡೀತೀಯೋ ಇಲ್ಲವೋ ದೂರ?' ಎಂದನು. ನನ್ನ ಹೆಗಲಿನವರೆಗೂ ಬರದ ಆ ಪೋರ್ಕಿ ಹೈದನ ಧೈರ್ಯ ನೋಡಿ! 'ಏನ್ಮಾಡ್ತೀಯೋ!' ಎಂದು ನಾನು ಕೇಳಿದೆನು. 'ನೀನು ನಮ್ಮ ದನದ ಮೈ ಮುಟ್ಟು ನೋಡುವ' ಎಂದನು. 'ಮುಟ್ಟುತ್ತೇನೆ. ಅಲ್ಲ. ಕಡಿಯುತ್ತೇನೆ. ಬಾ ನೋಡು' ನಾನು ಆ ದನದ ಹಿಂದೆ ಓಡಿದೆನು. ಅವನು 'ಏ ಅಪ್ಪಾ ಬಾ ಇಲ್ಲಿ' ಎಂದು ಕೂಗುತ್ತ ನನಗೆ ಕಲ್ಲನ್ನು ಬೀಸಿ ಬೀಸಿ ಹೊಡೆದನು. ಒಂದೆರಡು ನನಗೆ ತಗಲಿದುವು. ನನಗೆ ಸಿಟ್ಟು ತಡೆಯದಾಯಿತು. 'ಬಾರೋ ಮಗನೇ' ಎಂದು ಅಲ್ಲಿಯೇ ನಿಂತೆನು. ಅವನು ಕಲ್ಲು ಹೊಡೆಯುತ್ತಾ ಹತ್ತಿರ ಬಂದನು, ನನ್ನ ಕೈಯಲ್ಲಿದ್ದ ಕತ್ತಿಯು ಕುಣಿಯಿತು, ರಕ್ತದ **ದಾಹ** ಏರಿತು. 'ನಿನಗೆ ಬರಲಿ ಬುದ್ಧಿ' ಎಂದು ಅವನೆಡೆಗೆ ಹಾರಿ ಅವನ ಕುತ್ತಿಗೆಗೇ ಹೊಡೆದೆನು. ಕರ್ಕ್ ಎಂದು ಬಾಳೆದಿಂಡು ತುಂಡಾಗುವಂತೆ ಅದು ತುಂಡಾಗಿ ದೂರ ರಟ್ಟಿತು – ಆಹಾ ಅದೆಂಥ ಧಿಮಾಕಿನ ಕೆಲಸ. ಅವನ ರಕ್ತವನ್ನು ಚೆನ್ನಾಗಿಯೇ ಹೀರಿದೆನು. ಮನುಷ್ಯ ರಕ್ತ ತುಂಬಾ ರುಚಿ. ಈಗ ಸುಮಾರು ತಿಂಗಳಿಂದ ಮನುಷ್ಯ ರಕ್ತ ಕುಡಿಯದೇ ನನಗೆ ಬಾಯಾರಿಕೆಯಾಗಿದೆ. 'ಪಾಠ ಕಲಿತೆಯಾ, ಹಾಗೆ ಬಿದ್ದಿರು' ಎಂದು ನಾನು ಅಲ್ಲಿಂದ ಮನೆಗೆ ಹೋದೆ. ನನ್ನ ಉತ್ಸಾಹದ ಕೋಡಿ ಬಿರಿದಿತ್ತು. ಮೈಯ, ಬಟ್ಟೆಯೆಲ್ಲ ರಕ್ತಮಯವಾಗಿತ್ತು. ಅವ್ವ ನೋಡಿ 'ಇದೇನೋ ಸಿಂಗ' ಎಂದು ಕೇಳಿದುದಕ್ಕೆ ನಾನು ಮಾತಾಡಲಿಲ್ಲ. 'ಹೇಳ್ತೀಯೋ ಇಲ್ಲವೋ' ಎಂದು ಅವಳಿಂದ ಪೆಟ್ಟು ಬಿತ್ತು. ಆದರೆ ನನಗೆ ಮನಸ್ಸಿನಲ್ಲಿ ಹರ್ಷ ತುಂಬಿತ್ತು, ಆ ಪೆಟ್ಟುಗಳನ್ನು ನಾನು ಲೆಕ್ಕಿಸಲೇ ಇಲ್ಲ. ಮನುಷ್ಯ ರಕ್ತ ಎಷ್ಟು ರುಚಿ ಎಂದೇ ನನ್ನ ತಲೆಗೆ ಅಂಟಿ ಹೋಯಿತು.

"ಆದರೆ ನನ್ನನ್ನು ಸುಮ್ಮನೆ ಬಿಡಲಿಲ್ಲ. ಅವತ್ತು ರಾತ್ರಿಯೇ ಕರೀಬಟ್ಟೆ ಹಾಕಿಕೊಂಡವರು – ಪೊಲೀಸರು ಎಂದು ಮತ್ತೆ ತಿಳಿಯಿತು – ನನ್ನನ್ನು ಹಿಡಿದು ಕೊಂಡು ಹೊರಟರು. 'ಅವನು ಕಾಡುಹಂದೀನ ಹೊಡೆದಾಗ ಹಾರಿದ ರಕ್ತ ಇದು ದೇವರೂ' ಎಂದು ಅಪ್ಪನು ಅವರಿಗೆ ಹೇಳುತ್ತಿದ್ದನು. ಅವ್ವ, ತಮ್ಮ ಇವರೆಲ್ಲ ದೂರ ನಿಂತಿದ್ದರು. ಇನ್ನೂ ಯಾರಾರೋ, ಹತ್ತಿರದ ಮನೆಯವರೂ ಬೇರೆಯವರೂ ಅಲ್ಲಿಗೆ ಬಂದಿದ್ದರು. ನನಗೆ ಇವೆಲ್ಲ ಏನೆಂದು ತಿಳಿಯಲಿಲ್ಲ. ನನ್ನನ್ನು ಎಲ್ಲಿಗೆ ಯಾಕೆ ಆ ಪೊಲೀಸರು ಹಿಡಿದುಕೊಂಡು ಹೋಗುತ್ತಾರೆಂದು ಆಗ ತಿಳಿಯಲಿಲ್ಲ. ದೂರದಲ್ಲಿ ಒಳ್ಳೇ ಬಟ್ಟೆ, ಹ್ಯಾಟು ಹಾಕಿಕೊಂಡವನೊಬ್ಬನು ನಿಂತಿದ್ದನು. ಅವನು ನನ್ನನ್ನು ಕೇಳಿದನು 'ನೀನು ಸಣ್ಣಣ್ಣನನ್ನು ಕೊಂದೆಯಾ?' 'ಹೌದು, ಅವನ ಕುತ್ತಿಗೆಯನ್ನು ಕತ್ತರಿಸಿ ರಕ್ತವನ್ನೇ ಹೀರಿದೆ. ಅಬ್ಬ ಅವನ ಸೊಕ್ಕೇ!' ಎಂದು ನಾಲಗೆಯನ್ನು ಚಪ್ಪರಿಸಿ ಹೇಳಿದೆನು. 'ಅಯ್ಯೋ ಏನ್ಮಾಡಿದೆ ಸಿಂಗಾ' ಎಂದನು ಅಪ್ಪ. ಅಪ್ಪ ಯಾಕೆ ಹೀಗೆ ಮಾಡುತ್ತಾನೆ ಎಂದು ನನಗೆ ತಿಳಿಯಲಿಲ್ಲ. ಆ ಪೊಲೀಸರು ನನ್ನನ್ನು ಹಿಡಿದುಕೊಂಡು ಹೋದರು. ಉಳಿದವರು ಯಾರೂ ಜೊತೆಯಲ್ಲಿ ಬರಲಿಲ್ಲ.

"ನನ್ನನ್ನು ಮೋಟಾರ್ ಕಾರಿನಲ್ಲಿ ಕೂರಿಸಿ ಆ ರಾತ್ರಿ ಮಡಿಕೇರಿಗೆ ಕರೆದುಕೊಂಡು ಹೋದರು. ಕಗ್ಗತ್ತಲೆಯ ಹೊಲಸು ಕೋಣೆಯಲ್ಲಿ ಕೂಡಿ ಪಡಿಯಿಕ್ಕಿ ಬೀಗ ಜಡಿದರು. ಅಲ್ಲಿ ಮಲಗಲು ಏನೂ ಇರಲಿಲ್ಲ. ನನಗೆ ಚಳಿಯೂ ಆಗುತ್ತಿತ್ತು. ಆದರೆ ನಿದ್ರೆ ಜೋರು ಬರುತ್ತಿದ್ದುದರಿಂದ ನೆಲದ ಮೇಲೆಯೇ ಮಲಗಿ ನಿದ್ರೆ ಮಾಡಿದೆನು. ಇದೆಲ್ಲ ಯಾಕೆ, ಸಣ್ಣಣ್ಣನನ್ನು ನಾನು ಕಡಿದರೆ ನನಗೇಕೆ

ಹೀಗೆ ಕಷ್ಟಕೊಡಬೇಕು ಎಂದು ನನಗೆ ತಿಳಿಯಲಿಲ್ಲ. ನಿಜಕ್ಕೂ ನೋಡಿ ಈಗಲೂ ಹೇಳುತ್ತೇನೆ, ನನ್ನದು ಅದರಲ್ಲಿ ಏನೂ ತಪ್ಪು ಇರಲಿಲ್ಲ. ಮಾರನೇ ದಿನದಿಂದ ನನಗೆ ಛಡಿ ಏಟುಗಳನ್ನು ಬಾರುಕೋಲುಗಳಿಂದ ಬಾರಿಸುತ್ತಿದ್ದರು. ಅವ್ವ ಹೊಡೆದ ಒಂದು ಪೆಟ್ಟೂ ಅಷ್ಟು ಬಿರುಸಾಗಿರಲಿಲ್ಲ. ನಾನು 'ಅಯ್ಯೋ ಅಯ್ಯೋ ಅಪ್ಪಾ' ಎಂದು ಅರಚುತ್ತಿದ್ದೆ. ಮೈಯೆಯಲ್ಲಾ ಹುಣ್ಣಿನ ಹಾಗೆ ನೋಯುತ್ತಿತ್ತು. ದೊಡ್ಡ ದೊಡ್ಡ ಬಾಸುಂಡೆಗಳೆದ್ದವು ಕೆಲವುಗಳಿಂದ ರಕ್ತ ಸೋರಲು ಶುರುವಾಯಿತು. ಅವರು ಹೋದ ಮೇಲೆ ಆ ರಕ್ತವನ್ನು ನಾನು ನೆಕ್ಕುತ್ತಿದ್ದೆ. ಆದರೆ ನೋಡಿ, ಬೇರೆಯವರ ರಕ್ತದಷ್ಟು ನಮ್ಮ ರಕ್ತ ರುಚಿಯಿರುವುದಿಲ್ಲ. ಎಷ್ಟೋ ದಿವಸ ಹೀಗೆ ಕಳೆಯಿತು. ನಾನು ಸತ್ತು ಹೋಗುತ್ತಿದ್ದೇನೆ ಎಂದು ನನಗನಿಸುತ್ತಿತ್ತು. ಮತ್ತೆ ಒಂದು ದಿವಸ ನನ್ನ ಕೈ ಕಾಲಿಗೆ ಸರಪಳಿ ಕಟ್ಟಿ ಎಲ್ಲಿಗೋ ಕರೆದುಕೊಂಡು ಹೋದರು. ಅಲ್ಲಿ ತುಂಬಾ ಜನರಿದ್ದರು. ಒಂದು ಕಟಕಟೆ ಗೂಡಿನಲ್ಲಿ ನನ್ನನ್ನು ನಿಲ್ಲಿಸಿ ಒಂದು ಸರಪಳಿಯಿಂದ ನನ್ನನ್ನು ಅದಕ್ಕೆ ಕಟ್ಟಿದರು. ನನಗೆ ಮಂಕು ಕವಿದಂತೆ ಆಗಿತ್ತು. ಕೂರಬೇಕೆಂದರೆ ಕೂರಲು ಆಗಲಿಲ್ಲ. ನಿಂತು ನಿಂತು ಹುಣ್ಣುಗಳು ನೋಯುತ್ತಿದ್ದುವು. ಯಾರೋ ಎತ್ತರದಲ್ಲಿ ಕುಳಿತವನೊಬ್ಬನು ನನ್ನನ್ನು ಏನೇನೋ ಪ್ರಶ್ನೆ ಕೇಳಿದವನ ರಕ್ತ ಹೀರಿದರೆ ಹೇಗಾದೀತೆಂದು ಯೋಚಿಸುತ್ತ ನಿಂತಿದ್ದೆ. ಸ್ವಲ್ಪ ಹೊತ್ತಿನ ಮೇಲೆ ನನ್ನನ್ನು ಇನ್ನೆಲ್ಲಿಗೋ ಕರೆದುಕೊಂಡು ಹೋದರು. ದಾರಿಯಲ್ಲಿ ಅಪ್ಪ ಅಡ್ಡ ಬಂದು 'ಏನು ಮಾಡಿದೆ ಸಿಂಗಾ, ಹೀಗೆ ಮಾಡಿದೆಯಾ!' ಎಂದು ಅತ್ತನು. ನನಗೂ ಅಳು ಬರುವಂತಾಯಿತು. ಒಂದು ದಿವಸವೂ ಅವನು ನನಗೆ ಹೊಡೆದಿರಲಿಲ್ಲ, ಈಗ ಮೈಯೆಲ್ಲ ಬಾಸುಂಡೆಗಳು. ಆದರೆ ಪೋಲೀಸಿನವರು ನನ್ನನ್ನು ಎಳೆದುಕೊಂಡು ಬೇರೆ ಕಡೆಗೆ ಹೋದರು."

ಕಾವೇರಿ ಹೊಳೆಯು ಬಂದಿತು. ಜೋಡು ಹಾಕಿಕೊಂಡ ನಮ್ಮ ಕಾಲುಗಳು ಅದರ ದಂಡೆಯಲ್ಲಿ ಮುಂದುವರಿಯಲಿಲ್ಲ. ಆಗ ನಮಗೆ ಎಲ್ಲಿದ್ದೇವೆ ಎಂಬ ಅರಿವಾಯಿತು. ಅಲ್ಲಿಂದ ನಮ್ಮ ಮನೆಗೆ ಒಂದೂವರೆ ಮೈಲು ದೂರ. ತಿಳಿದ ಹಾದಿ.

"ನಿನಗೆ ಹೊತ್ತಾದರೆ ಹೋಗು. ಅಲ್ಲಿ ಆ ಮುದುಕಿ ನರಳುತ್ತಿದ್ದಾಳೆ. ಅವಳಿಗೆ ಉಪಚಾರ ಮಾಡು. ಆದರೆ ನಿನ್ನ ವಿಷಯ ಪೂರ್ಣ ತಿಳಿಯಬೇಕೆಂದು ಆಸೆಯುಂಟು ನಾನು ಯಾರಿಗೂ ಹೇಳುವುದಿಲ್ಲ" ಎಂದರು ಚಿಕ್ಕಪ್ಪ.

"ನನಗೆ ಇನ್ನು ಬೇಗ ಹಿಂದೆ ಹೋಗಬೇಕು ಸ್ವಾಮೀ, ಬೆಳಗಾದ ಮೇಲೆ ನಾನಿಲ್ಲೆಲ್ಲ ಬರುವಂತಿದೆಯೇ? ಇನ್ನು ಯಾವಾಗ ಬಂದು ನಿಮ್ಮನ್ನು ನೋಡುವುದೋ ಏನೋ? ಬೇಗ ಹೇಳಿ ಮುಗಿಸಿಬಿಟ್ಟು ಹಿಂದೆ ಹೋಗುತ್ತೇನೆ. ನಡೀರಿ ಹೋಗುವ.

"ನನ್ನನ್ನವರು ಬೇರೆ ಊರಿಗೆ ಕರೆದುಕೊಂಡು ಹೋದರು. ಆ ಹೊಸ ಸ್ಥಳದಲ್ಲಿ ನನಗೆ ತುಂಬಾ ಕಷ್ಟವಾಯಿತು. ಯದ್ವಾತದ್ವಾ ಕೆಲಸ. ಹೊಟ್ಟೆಗೆ ಅನ್ನ ಸಾಲದು. ಹೊರಗೆ ಹೋಗಲು ಬಿಡುತ್ತಿದ್ದಿಲ್ಲ. ಕೆಲಸ ಮಾಡದಿದ್ದರೆ ಛಡಿ ಏಟು ಬೀಳುತ್ತಿತ್ತು. ಆ ಹುಡುಗನನ್ನು ಕೊಂದದ್ದಕ್ಕೆ ಈ ಶಿಕ್ಷೆ ಎಂದು ತಿಳಿದುಕೊಂಡೆನು. ಆದರೆ ನನ್ನದೇನು ತಪ್ಪು, ಸ್ವಾಮೀ, ಅವನನ್ನು ಕೊಂದದ್ದರಲ್ಲಿ? ಅಪ್ಪಹಂದಿಯನ್ನು ಕೊಯ್ಯಬಹುದಂತೆ, ನಾನು ಇದನ್ನು ಮಾಡಬಾರದೋ ಹಾಗೆ ಎಷ್ಟೋ ವರ್ಷಗಳು ಕಳೆದುವು; ಎಷ್ಟೆಂದು ನನಗೆ ಗೊತ್ತಿಲ್ಲ. ನನ್ನನ್ನು ಪುನಃ ಮಡಿಕೇರಿಗೆ ಕರೆದುಕೊಂಡು ಹೋಗಿ. 'ಇನ್ನು ನೀನು ಎಲ್ಲಿಗೆ ಬೇಕಾದರೂ ತೊಲಗಿ ಹೋಗು. ಆದರೆ ಸರಿಯಾಗಿ ನಡೆದುಕೋ. ಆರು ತಿಂಗಳಿಗೊಮ್ಮೆ ನಿನ್ನ ವಾಸಸ್ಥಳವನ್ನು ಸಮೀಪದ ಪೊಲೀಸು ಠಾಣೆಗೆ ತಿಳಿಸಬೇಕು. ಇಲ್ಲವಾದರೆ ನೋಡು, ಮೊದಲಿನ ಹಾಗೆ' ಎಂದು ಹೇಳಿ ಹೊರಗೆ ಬಿಟ್ಟರು.

"ನನಗೆ ಗಡ್ಡ ಮೀಸೆ ಪೊದೆ ಬೆಳೆದಿತ್ತು. ಮಂಕು ಮುಚ್ಚಿದವನಂತೆ. ಹುಚ್ಚನಂತೆ ಹೊರಗೆ ಹೊರಟೆ. ಆದರೆ ಎಲ್ಲಿಗೆ ಹೋಗುವುದು ? 'ನಾನು ಏನು ತಪ್ಪು ಮಾಡದೇ ನನ್ನನ್ನು ಈ ರೀತಿ ಶಿಕ್ಷಿಸಿದರಲ್ಲಾ. ಇವರಿಗೆ ಪಾಠ ಕಲಿಸಬೇಕು' ಎಂದು ನನಗೆ ಖಂಡಿತವಾಗಿಯೂ ನಂಬಿಕೆಯಾಯ್ತು. ಅಲ್ಲಿಂದ ಹೊರಡುವಾಗ ನನಗೆ ಸ್ವಲ್ಪ ದುಡ್ಡನ್ನು ಕೊಟ್ಟಿದ್ದರು. ನಾನು ಪೇಟೆಗೆ ಹೋಗಿ ಕ್ಷೌರ ಮಾಡಿಸಿಕೊಂಡೆನು. ಮತ್ತು ಒಂದು ಹೊಟೇಲಿನಲ್ಲಿ ಊಟ ತೀರಿಸಿ ಎಲ್ಲಿಗೆ ಹೋಗುವುದು, ಏನು ಮಾಡುವುದು ಎಂದು ತಿಳಿಯದೇ ಅಲೆಯುತ್ತಿದ್ದೆನು. 'ನನ್ನನ್ನು ಈ ರೀತಿ ಗೋಳುಹುಯ್ದುಕೊಂಡರಲ್ಲ ಇವರಿಗೆ ಪಾಠ ಕಲಿಸಬೇಕು' ಎಂದು ನನಗೆ ಹೆಚ್ಚೆಚ್ಚು ಅನಿಸತೊಡಗಿತು. ಹಾಗೆಯೇ ಸಿಟ್ಟೂ ಏರುತ್ತಿತ್ತು, – ಅದೇನು ಹೊಡೆತ, ಕೆಲಸ. ಆ ಪೊಲೀಸಿನವರ ಗೋಣನ್ನೇ ಮುರಿದರೆ, ಅದು ಎಷ್ಟು ಚೆನ್ನಾಗಿದ್ದೀತು, ಆ ರಕ್ತವನ್ನು ಹೀರಲು ಎಷ್ಟು ರುಚಿಯಾಗಿದ್ದೀತು ಎಂದು ನಾನು ಬಾಯಿ ಚಪ್ಪರಿಸಿದೆ. ಈಗಲೂ ನನಗೆ ಆಸೆ ಹೋಗಲಿಲ್ಲ, ಹೆಚ್ಚಾಗುತ್ತಲೇ ಉಂಟು. ನನ್ನ ಸಿಟ್ಟನ್ನು ಮರದ ಗೆಲ್ಲೊಂದನ್ನು ಮುರಿದು ತೀರಿಸಲು ನೋಡಿದೆನು. ಮುಂದೆ ಹೊರಟೆ. ಆದರೆ ಏನು ಮಾಡುವುದೆಂದು ತಿಳಿಯಲಿಲ್ಲ. ಪೇಟೆಗೆ ಪುನಃ ಹೋಗಿ ಒಂದು ಹರಿತವಾದ ಕತ್ತಿಯನ್ನು ಕೊಂಡುಕೊಂಡೆ. ಛತ್ರದಲ್ಲಿಯೋ, ದೇವಸ್ಥಾನದ ಪೌಳಿಯಲ್ಲಿಯೋ ಮಗಲುತ್ತ ದಿನಗಳನ್ನು ಕಳೆದೆ. ಕೂಲಿಗೆಲಸದಲ್ಲಿ ಏನು ಹಣ ದೊರೆಯುವುದು? ನನಗೆ ದೇಹದಲ್ಲಿ ಹೆಚ್ಚು ತ್ರಾಣವೂ ಇರಲಿಲ್ಲ. ಅಲ್ಲದೇ ರಕ್ತ ಪಿಪಾಸೆ ಮಿತಿಮೀರಿತು. ರಾತ್ರಿಹೊತ್ತು ಬೀದಿಯಲ್ಲಿ ಸಿಕ್ಕಿದ ಪೋಲೀ ನಾಯಿಗಳ ಕುತ್ತಿಗೆ ಕಡಿದು ಸೇಡು ತೀರಿಸಲು ನೋಡಿದೆ. ಆದರೆ ಮನುಷ್ಯ ರಕ್ತ ಕುಡಿಯದೇ ನನಗೆ ದಿನದಿಂದ ದಿನಕ್ಕೆ ಬಾಯಾರಿಕೆ ಏರುತ್ತಿತ್ತು; ಸಿಟ್ಟು ಹೆಚ್ಚುತ್ತಿತ್ತು. ಇದು ನೋಡಿ ಈಗ ಒಂದು ವರ್ಷದ ಹಿಂದೆ ಎಂದು ತೋರುವುದು. ನಾನೊಂದು ದಿವಸ ಬೆಳಗ್ಗೆ ಮುಂದಿನ ದಾರಿ ತೋರುವುದೋ ಎಂದುಕೊಂಡು ಹೋಗುತ್ತಿದ್ದೆನು. ಆಗ ಆ ಕಾಲುಹಾದಿಯಲ್ಲಿ ಯಾರೋ ಒಬ್ಬನು ಒಂದು ದೊಡ್ಡ ಗಂಟನ್ನು ಹೊತ್ತುಕೊಂಡು ಕೈಯ್ಯಲ್ಲಿ ಗೆಜ್ಜೆಗಳಿಂದ ಕೂಡಿದ ಕಬ್ಬಿಣದ ಸರಳನ್ನು ಹಿಡಿದುಕೊಂಡು ಮಡಿಕೇರಿಯಿಂದ ಇಳಿದಿಳಿದು ಹೋಗುತ್ತಿದ್ದನು. ನನಗೆ ಮೊದಲು ಛಡಿ ಹೊಡೆದ ಪೊಲೀಸಿನವನ ಹಾಗೆಯೇ ಅವನು ಕಂಡನು. ನನ್ನ ಕೋಪವೇರಿತು. ಆದರೆ ಆಗ ಅವನಿಗೆ ನಾನು ಏನನ್ನೂ ಮಾಡಲಿಲ್ಲ. ಮಾಡುವ ಹಾಗೆಯೂ ಇರಲಿಲ್ಲ. ದುಡುಕಿದ್ದರೆ ಪುನಃ ಜೈಲು, ಛಡಿ ಏಟು. ಅಲ್ಲಿದ್ದ ಬೇರೆ ಜನರೊಡನೆ ಅವನು ಯಾರು ಎಂದು ವಿಚಾರಿಸಿದೆನು. ಅವನು ಮಡಿಕೇರಿಯಿಂದ ಬೆಟ್ಟಕ್ಕೇರಿಗೆ ಟಪ್ಪಾಲು ಹೊತ್ತುಕೊಂಡು ಹೋಗುವ ಗಿರಿಯಪ್ಪ ಎಂದು ತಿಳಿಯಿತು. ಮತ್ತೆ ಅವರು ಮಾತಾಡಿಕೊಳ್ಳುತ್ತಿದ್ದುದೂ ಕೇಳಿತು – 'ಈಗ ಯುದ್ಧ ಸಮಯವಾದುದರಿಂದ ಹೊರಗೆ ಹೋದ ಸೈನಿಕರು ತುಂಬ ಹಣವನ್ನು ಕಳಿಸುತಿದ್ದಾರೆ. ಇವನೊಬ್ಬನೇ ಆ ಚೀಲದಲ್ಲಿ ಅಷ್ಟು ಹಣವನ್ನು ಈ ಕಡೆ ಹಳ್ಳಿಗಳಿಗೆ ಕೊಂಡೊಯ್ಯುತ್ತಾನೆ," ಎಂದು ಮುಂತಾಗಿ ಮಾತಾಡಿಕೊಂಡರು. ನನಗೆ ಕೂಡಲೇ ಹಾದಿಹೊಳೆಯಿತು. ನೆತ್ತರಿನ ದಾಹ ಜೋರಾಯಿತು. ಇದಕ್ಕೆ ಯಾವ ಉಪಾಯವೆಂದು

ಆಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬಂದೆನು. ನನಗೆ ತಂಗಲು ಗುಟ್ಟಾದ ಒಂದು ಸ್ಥಳ ಮಡಿಕೇರಿಯ ಸುತ್ತ ಎಲ್ಲಿಯಾದರೂ ಬೇಕೆಂದು ನಿಶ್ಚೈಸಿದೆ. ಮತ್ತೆ ನಾಪೋಕ್ಲು, ಮೂರ್ನಾಡು, ಭಾಗಮಂಡಲದ ಈ ಕಡೆಗಳಲ್ಲಿ ಅಲೆದೆ. ಮದೆನಾಡಿಗೆ ಹೋಗಬಾರದು ಎಂದು ಹೋಗಲಿಲ್ಲ. ಈ ಹಳ್ಳಿಗಳಲ್ಲಿ ನನಗೆ ಊಟ ಸಿಕ್ಕುತ್ತಿತ್ತು. ಆದರೆ ರಕ್ತ ಸಿಕ್ಕಲಿಲ್ಲ. ಒಂದು ದಿವಸ ಭಾಗಮಂಡಲದಿಂದ ನಾಪೋಕ್ಲಿಗೆ ನಡೆದುಕೊಂಡು ಹೋಗುತ್ತಿದ್ದಾಗ ಈ ಮುದುಕಿಯ ಮನೆಗೆ ಮಧ್ಯಾಹ್ನದ ಹೊತ್ತಿಗೆ ಅಕಸ್ಮಾತ್ತಾಗಿ ಹೋದೆನು. ಅವಳು ನಿಜವಾಗಿ ನನ್ನ ಅಜ್ಜಿಯಲ್ಲ. ಅವಳ ಮನೆ ನಾವು ಈಗ ಹೊಳೆದಾಟಿದೆವಲ್ಲ, ಅಲ್ಲಿಂದ ಒಂದು ಮೈಲು ಆ ಕಡೆಗೆ ಇತ್ತು. ಅವಳು ನನಗೆ ತುಂಬಾ ಉಪಚಾರ ಮಾಡಿದಳು. ನನಗೆ ಹೀಗೆ ಯಾಕೆ ಮಾಡುತ್ತಾಳೆ ಎಂದು ಆಶ್ಚರ್ಯವಾಯಿತು. ಅವಳಿಗೊಬ್ಬ ಮೊಮ್ಮಗ ಇದ್ದನಂತೆ. ಅವನು ಯುದ್ಧಕ್ಕೆ ಹೋಗಿ ಸತ್ತನಂತೆ ಎಂದು ಮುಂತಾಗಿ ಹೇಳುತ್ತ ಅತ್ತಳು. ನಾನು ಅವಳ ಮೊಮ್ಮಗನ ಹಾಗೆಯೇ ಅವಳಿಗೆ ಕಂಡನಂತೆ. ನನಗೆ ಯಾರೂ ಗತಿಯಿಲ್ಲವೆಂದು ಕೇಳಿ, ತನ್ನ ಜತೆಯಲ್ಲಿಯೇ ಇರಲು ಅವಳು ಹೇಳಿದಳು. ನನಗೆ ಬೇಕಾದದ್ದೂ ಅದೇ. ನಾನು ಈಗ ನೀವು ನೋಡಿದ ಜೋಪಡಿಯನ್ನು ಕಟ್ಟಿದೆನು. ಯಾರಿಗೂ ತಿಳಿಯಬಾರದೆಂದು ಅದನ್ನು ಆ ಕಾಡಿನ ಆಳದಲ್ಲಿ ನಾನೊಬ್ಬನೇ ಹೊಸೆದೆನು. ಮತ್ತೊಂದು ರಾತ್ರಿ ಅಜ್ಜಿಯನ್ನು ಪುಸಲಾಯಿಸಿ ಅಲ್ಲಿಗೆ ಕರೆದುಕೊಂಡು ಹೋದೆನು. ಅವಳು ಅಲ್ಲಿಯೇ ಇರುತ್ತಾಳೆ. ಅಲ್ಲೊಂದು ಮನೆಯುಂಟೆಂದು ಕೂಡ ಬೇರೆಯವರಿಗೆ ತಿಳಿಯದು. ಇಷ್ಟಾಗುವಾಗ ಸುಮಾರು ತಿಂಗಳುಗಳು ಉರುಳಿದವು. ಮಳೆ ಹಿಡಿಯಲು ತೊಡಗಿತು. ನಮಗೆ ಊಟಕ್ಕೆ ಆಗಬೇಕಲ್ಲ. ರಕ್ತದ ಆಸೆ ಹೆಚ್ಚುತ್ತಿತ್ತು. ಆ ಟಪ್ಪಾಲು ಹೊರುವವನ ವಿಲೇವಾರಿ ಇನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದೆನು. ಒಂದು ದಿವಸ ಕೋಳಿ ಕೂಗುವ ಮೊದಲೇ ನಾನು ಈ ಗುಡಿಸಲಿನಿಂದ ಹೊರಟು, ಸೋನೆಮಳೆಯಲ್ಲಿ ನೆನೆಯುತ್ತ ಉಡುವತ್ತು ಮೊಟ್ಟೆಗೆ ನಡೆದನು. ಅಲ್ಲಿ ನೋಡಿ, ಅವನು ಬರುವ ಹೊತ್ತಿಗೆ ಬೇರೆ ಜನರು ತಿರುಗುತ್ತಿರುವುದಿಲ್ಲ. ನಾನಲ್ಲಿ ಅಡಗಿ ಕತ್ತಲೆಯ ದಾರಿಯಲ್ಲಿ ಕುಳಿತುಕೊಂಡೆ. 'ಬರಲಿ ನನಗೆ ಛಡಿ ಹೊಡೆದ ಪೊಲೀಸು. ಈಗ ಟಪ್ಪಾಲು ಹೊರುತ್ತಾನೋ ಬರಲಿ', ಎಂದು ಕತ್ತಿ ಮಸೆಯುತ್ತಾ ಕುಳಿತುಕೊಂಡೆನು. ನಾನು ಅಲ್ಲಿಗೆ ತಲುಪುವಾಗ ಸರಿಯಾಗಿ ಬೆಳಕಾಗಿದ್ದಿಲ್ಲ. ಆದ್ದರಿಂದ ಅಲ್ಲಿ ನಾನು ಸುಮಾರು ಹೊತ್ತಕಾಯಬೇಕಾಗಿತ್ತು. ಮತ್ತೆ ಹೊತ್ತು ಎಷ್ಟು ಆಯಿತೆಂದೂ ಆ ಮಳೆ, ಮೋಡ, ಕಾಡಿನಿಂದಾಗಿ ತಿಳಿಯುತ್ತಿರಲಿಲ್ಲ. ಬರುವನೋ ಇಲ್ಲವೋ ಎಂದು ಸಿಟ್ಟಿನಿಂದ ಅಲ್ಲಿದ್ದ ಗಿಡಗಳನ್ನು ತುಂಡು ಮಾಡಿದೆನು. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ದೂರದ ತಿರುಗಾಸಿನಿಂದ ಅವನು ಇಳಿದಿಳಿದು ಬರುವುದನ್ನು ನೋಡಿದೆನು. ಆ ದಿನ ಕಂಡಂತೆಯೇ, ಅವನೇ ಇವನು. ನಾನು ಕತ್ತಿಯನ್ನು ಸರಿಯಾಗಿ ಹಿಡಿದುಕೊಂಡು ದಾರಿ ಕರೆಯ ಮರದ ಬದಿಯಲ್ಲಿ ಅಡಗಿ ನಿಂತೆನು. ಅವನು ಮುಂದೆ ಮುಂದೆ ನಡೆದು ಬಂದನು, ನಾನು ಅವಿತು ಕುಳಿತು ಸ್ಥಳದಿಂದ ಮುಂದೆ ಹೋದೆನು. ಆ ಗಳಿಗೆ ನಾನು ಹೊರಗೆ ದಾರಿಗೆ ಹಾರಿ ಅವನು ಹಿಂತಿರುಗಿ ನೋಡುವ ಮೊದಲೇ ನನ್ನ ಶಕ್ತಿ ತೀರ ಪ್ರಯೋಗಿಸಿ ಅವನ ಕುತ್ತಿಗೆಯನ್ನು ಕಡಿದೆನು. ಒಂದೇ ಏಟಿಗೆ ಅದು ತುಂಡಾಗಿ ದೂರ ರಟ್ಟಿತು. ತಲೆಯ ಗಂಟು ಅಲ್ಲೇ ನೆಲಕ್ಕೆ ಬಿತ್ತು. ದೇಹದಿಂದ ಚಿಮ್ಮುವ  ರಕ್ತವನ್ನು ಹೀರಿ – ಆಹಾ ಅದೆಷ್ಟು ರುಚಿ – ನಾನು ಆ ಗಂಟಲನ್ನು ಹೊತ್ತುಕೊಂಡು ಕಾಡೊಳಗೆ ಓಡಿಯೇ ಬಿಟ್ಟೆನು. ನನಗೆ ರಕ್ತ ಹೀರಿ ಹೊಸ ಹುರುಪು ಬಂದಿತ್ತು. ಸಂತೋಷದಿಂದ ಮುಳ್ಳೂ ಕೆಸರು ಎಂದು ಲೆಕ್ಕಿಸದೆ ಕಾಡಿನೊಳಗೆ ತೂರಿಹೋದೆ. ನಾನು ರಾತ್ರಿಯವರೆಗೂ ಹಾಗೆ ಕಾಡಿನಲ್ಲಿ ಕಳೆದನು. ಮಳೆ, ಚಳಿ, ಗಾಳಿ ಇವಾವುಗಳಿಂದಲೂ ನನಗೆ ಕಷ್ಟವಾಗಲಿಲ್ಲ. ರಾತ್ರಿಯಾದ ಮೇಲೆ ಬೆಟ್ಟಕ್ಕೇರಿ – ನಾಪೋಕ್ಲು ದಾರಿ ಕಡೆಗೆ ಅರುವತ್ತೊಕ್ಲಿಗಾಗಿ ನಡೆದನು. ಅಲ್ಲಿ ನನಗೆ ದಾರಿ ಸಿಕ್ಕುವುದು ಕಷ್ಟವಾಗಲಿಲ್ಲ. ಗದ್ದೆಗಳನ್ನು ದಾಟಿ, ಗುಡ್ಡ ಹತ್ತಿ ಆ ಜಾಡಿಗೆ ತಲುಪಿದೆನು. ನಾನು ಉಡುವತ್ತು ಮೊಟ್ಟೆಗೇ ಹೋಗಿದ್ದರೆ ಎಲ್ಲಿಯಾದರೂ ಪೊಲೀಸಿನವರು ಕಾಯುತ್ತಿದ್ದರೆ ಎಂದು ಕಾಡು ದಾರಿಯಲ್ಲಿಯೇ ಹೋದೆನು. ಮತ್ತೆ ಕಡಿಯತ್ತೂರಿಗೆ ಹಾದಿ ಹಿಡಿದು ನನ್ನ ಜೋಪಡಿಗೆ ಮಧ್ಯರಾತ್ರಿಯೋ ಇನ್ನೆಷ್ಟು ಹೊತ್ತೋ ತಲುಪಿದೆನು. ನನ್ನ ಬಟ್ಟೆಯೆಲ್ಲವೂ ಚಿಂದಿ, ಹರಿದು ಹೋಗಿತ್ತು. ಕಾಲು ಕೈಗಳಿಗೆ ಮುಳ್ಳು ತಗಲಿ ರಕ್ತ ಸುರಿಯುತ್ತಿತ್ತು. ನಾನೆಲ್ಲಿಗೋ ಬೇಟೆಗೆ ಹೋಗಿದ್ದನೆಂದು ಅಜ್ಜಿಗೆ ಹೇಳಿದೆನು. ನನ್ನ ಬಟ್ಟೆ, ಖಾಲಿ ಟಪ್ಪಾಲು ಚೀಲ ಇವನ್ನೆಲ್ಲ ಸುಟ್ಟು ಹಾಕಿದನು. ಆ ಚೀಲದೊಳಗೆ ನನಗೆ ಸಾವಿರದೈನೂರು ರೂಪಾಯಿ ದೊರೆತುವು. ಇನ್ನೇನಾಗಬೇಕು ನನಗೆ ? ಅಜ್ಜಿಯು ನನ್ನ ಗಾಯಗಳಿಗೆಲ್ಲ ಮದ್ದು ಅರೆದು ಹಚ್ಚಿ ಗುಣಮಾಡಿದಳು. ಮತ್ತೆ ನೋಡಿ ಎಂಟೋ ಹತ್ತೋ ತಿಂಗಳು ಮುಗಿದುವು. ನಾವು ಸುಖವಾಗಿಯೇ ಇದ್ದೆವು. ಅಜ್ಜಿಗೆ ಈಗೊಂದು ವಾರದಿಂದ ಜ್ವರ ಅಂಟಿರುವುದು. ನನಗೆ ಪೊಲೀಸರ ಹೆದರಿಕೆ ತಪ್ಪಿರುವುದಿಲ್ಲ. ಅವರು ಹೇಳಿದಂತೆ ನಾನು ಯಾವ ಠಾಣೆಗೂ ಹೋಗಿ ನನ್ನ ಇರವನ್ನು ಹೇಳಲಿಲ್ಲ. ರಕ್ತದ ಆಸೆ ಪುನಃ ನನ್ನನ್ನು ಬಾಧಿಸುತ್ತಿದೆ.

"ನಿಮ್ಮ ಹತ್ತಿರ ಇದನ್ನು ಹೇಳಬೇಕೆಂದು ಆಯಿತು. ಆದರೆ ಯಾಕೆಂದು ಗೊತ್ತಾಗುವುದಿಲ್ಲ. ನೋಡಿ ಇದನ್ನು ಬೇರೆ ಯಾರಿಗೂ ಹೇಳಲಿಲ್ಲ. ಅಜ್ಜಿಯನ್ನು ಪರೀಕ್ಷೆ ಮಾಡಲು ನೀವು ಬರಲು ಒಪ್ಪದಿದ್ದರೆ ನಿಮ್ಮ ರಕ್ತ ಹೀರುತ್ತಿದ್ದೆ. ನನ್ನ ವಿಷಯ ನಿಮ್ಮಿಂದ ಎಲ್ಲಿಯಾದರೂ ಹೊರಗೆ ಹೋದರೆ ನೋಡಿ. ನಾನು ನಿಮ್ಮ ರಕ್ತ ಹೀರದೆ ಬಿಡಲಾರೆ. ನಿಮಗೆ ನನ್ನಲ್ಲಿಗೆ ಬಂದದ್ದಕ್ಕೆ ಏನು ಕೊಡಬೇಕು?"

"ನನಗೆ ಅದಕ್ಕೆ ಏನೂ ಬೇಡ. ಆದರೆ ನೀನು ಇನ್ನಾದರೂ ಒಳ್ಳೆಯ ದಾರಿಯಲ್ಲಿ ಇರು."

"ನೀವೇನನ್ನುತ್ತೀರಿ? ನಾನು ಕೆಟ್ಟ ದಾರಿಯಲ್ಲಿ ಹೋಗಲೇ ಇಲ್ಲ. ನನಗೆ ರಕ್ತದ ದಾಹ ಇನ್ನೂ ಹಿಂಗಿಲ್ಲ. ಆದರೆ ಹೊತ್ತಾಯಿತು. ನಾನು ಹೇಳಿದುದು ನೆನಪಿನಲ್ಲಿರಲಿ. ನಿಮ್ಮ ಮನೆ ಹತ್ತಿರವಾಯಿತು. ನೀವು ಅಜ್ಜಿಯನ್ನು ನೋಡಲು ಬಂದು ತುಂಬ ಉಪಕಾರ ಮಾಡಿದ್ದೀರಿ. ಅವಳು ಬದುಕಿ ಉಳಿದರೆ ನಿಮ್ಮಲ್ಲಿಗೆ ರಾತ್ರಿ ಔಷಧಿಗೆ ಬರುತ್ತೇನೆ. ಆದರೆ ನಾನು ಹೇಳಿದುದು ಜ್ಞಾಪಕದಲ್ಲಿರಲಿ."

ಅವನು ಲಾಂದ್ರವನ್ನು ನಂದಿಸಿ ಹಿಂದೆ ಹೊರಟನು. ಕತ್ತಲೆಯ ಒಡಲೊಳಗೆ ಕರಗಿ ಮರೆಯಾದನು.

ನಾವಿಬ್ಬರೂ ಮಾತಾಡದೇ ಮುನ್ನಡೆದೆವು. ಏನು ಭಯಂಕರವಪ್ಪಾ, ಹೀಗೂ ನಡೆಯಲು ಸಾಧ್ಯವೇ ಎಂದು ನನ್ನ ಎದೆಯು ನ**ಡು**ಗುತ್ತಿತ್ತು. ಈಗ ಚಿಕ್ಕಪ್ಪನವರ ಹಿಂದೆ ನಡೆಯಲು ಧೈರ್ಯವಿಲ್ಲ, ಮುಂದೆ **ಹೆಜ್ಜೆ**ಹಾಕಲು ಕೆಚ್ಚಿಲ್ಲ. ಜತೆಯಲ್ಲಿ ನಡೆಯಲು ಸ್ಥಳವಿಲ್ಲ. ಅಂತೂ ಸ್ವಲ್ಪ ದೂರ ಈ ಮುಳ್ಳಿನ ಹಾದಿಯ ಮೇಲೆ ತೆವಳುವಾಗಲೇ ಪುಣ್ಯವಶಾತ್ ಮನೆಯು ಬೆಳ್ಳಗೆ ದೂರದಿಂದ ಕಂಡಿತು.

ಚಂದ್ರನು ಇನ್ನೂ ಕೆಳಗೆ ಇಳಿದಿದ್ದನು. ಮಂದವಾಗಿ ತಂಗಾಳಿ ಬೀಸುತ್ತಿತ್ತು. ನಾವು ಮನೆ ಮೆಟ್ಟಲು ಹತ್ತುವಾಗಲೇ ಚಿಕ್ಕಮ್ಮ ಕದ ತೆರೆದರು. ಅವರು ನಾವು ಹೋದಮೇಲೆ ನಿದ್ರೆಯೇ ಮಾಡಲಿಲ್ಲವಂತೆ. ಘಂಟೆ ನಾಲ್ಕಾಗಿತ್ತು.

"ಏನು ವಿಷಯ, ಏನು ವಿಶೇಷ?"

ನಾವಿಬ್ಬರೂ ಬಾಯಿ ಬಿಡಲಿಲ್ಲ.

"ಟೈಫಾಯ್ಡ್ ಜ್ವರ ಆ ಮುದುಕಿಗೆ, ಬದುಕುವ ಹಾಗೆಯೇ ಇಲ್ಲ," ಎಂದು ಕೊನೆಗೆ ಚಿಕ್ಕಪ್ಪ ಬಲಾತ್ಕಾರದಿಂದ ಒಂದು ಸುಳ್ಳು ಹೇಳಿದರು.

ಮುಂದೆ ನಾನು ಎಸ್ ಎಸ್ ಎಲ್‌ಸಿಯಲ್ಲಿ ತೇರ್ಗಡೆಯಾಗಿ ಮಂಗಳೂರು ಸೇರಿದೆ ಅದೇ ಆಗಸ್ಟ್ (೧೯೪೨) ತಿಂಗಳಿನಲ್ಲಿ ಸತ್ಯಾಗ್ರಹ, ಗೋಳೀಬಾರು ಇವೆಲ್ಲ ನಡೆದುವು. ಇನ್ನು ಕಾಲೇಜು ವಿದ್ಯಾಭ್ಯಾಸ ಸಾಧ್ಯವಿಲ್ಲ. ಒಳ್ಳೆಯದೇ ಆಯಿತು. ಎಲ್ಲ ಬಿಟ್ಟು ಮನೆಯಲ್ಲಿ ಸ್ವಸ್ಥ ಕೂರುವುದೆಂದು ನಾನು ನಿಶ್ಚಯಿಸಿ ಮಡಿಕೇರಿಗೆ ಹೊರಡಲು ತಯಾರು ಮಾಡಿದ್ದೆ. ಅದೇ ದಿವಸ ಚಿಕ್ಕಪ್ಪನವರ ಬಹಳ ಅಪರೂಪದ ಕಾಗದ ಬಂದಿತು.

"…. ಆ ರಾತ್ರಿ ನಮಗೊಂದು ಭಯಂಕರ ಅನುಭವವಾಯ್ತು. ನೋಡು, ಆ ವ್ಯಕ್ತಿಯನ್ನು ಪೊಲೀಸರು ಒಂದು ತಿಂಗಳ ಹಿಂದೆ ಸೆರೆ ಹಿಡಿದರು. ಅವನು ಇನ್ನೂ ಯಾರ**ನ್ನೋ** ಖೂನಿ ಮಾಡಿದನಂತೆ. ಪಾಶಿಗೆ ಕೊಡುವ ಶಿಕ್ಷೆ ಅವನಿಗೆ ವಿಧಿಸಿದ್ದಾರೆ. ಈ ಕಾಗದ ನಿನಗೆ ತಲುಪುವಷ್ಟರಲ್ಲಿ ಅವನು ಈ ಲೋಕದಲ್ಲಿರುವುದಿಲ್ಲ…"

ಆದ್ದರಿಂದ ನಾನಿ**ದನ್ನು** ಬರೆದು ಬಹಿರಂಗಪಡಿಸುತ್ತಿದ್ದೇನೆ.

# ಸ್ವಗತ




ಅಂದು ನಾನೇಕೆ ಕತೆ ಬರೆದೆ?
ಪ್ರಾಯಶಃ ಅಂದಿನ ನನ್ನ ಮಾನಸಿಕ ಲಹರಿ ಕಥಾಲೇಖನಕ್ಕೆ ಪ್ರೇರಕವಾಗಿತ್ತು, ಪರಿಸರ ಸಾಕಷ್ಟು ಉತ್ತೇಜಕವಾಗಿತ್ತು, ಮಿಗಿಲಾಗಿ ನನ್ನ ಓರಗೆಯ ಇತರ ಹೆಚ್ಚಿನವರು ಯಾರೂ ಸಾಧಿಸದ ವಿಕ್ರಮ ನನ್ನದಾಗಬೇಕೆಂಬ ಕೆಚ್ಚು ಇತ್ತು.

ಬರೆದದ್ದು ಮುದ್ರಣವಾಗಿ ಆ ಕಾರಣದಿಂದ ನನಗೆ ಸಾಮಾನ್ಯರ ದೃಷ್ಟಿಯಲ್ಲಿ 'ಅಸಮಾನ್ಯತೆ' ಪ್ರಾಪ್ತವಾಯಿತು. ಹಿರಿಯ ಸಾಹಿತಿ ದಿಗ್ಗಜಗಳು ನನ್ನನ್ನು ಚಿಗುರು ಪ್ರತಿಭೆಯಾಗಿ ಗುರುತಿಸಿದರು. ಇನ್ನೇನು ಬೇಕು, ಬಿರಡೆ ಒಡೆದು ಸಿಡಿದ ಹದಿನೆಂಟರ ಗಡಿಯ ಜೀನ್ಯೆಗೆ! ಆದರೆ ಔನ್ನತ್ಯ ಸಾಧಿಸಿದಷ್ಟು ಸುಲಭವಲ್ಲ ಅದನ್ನು ದಕ್ಕಿಸಿಕೊಳ್ಳುವುದು, ಅಲ್ಲಿಂದ ಮೇಲೇರುವುದಂತೂ ಕಡು ಕಠಿಣ.

ನನ್ನ ಅಧ್ಯಯನಾಸಕ್ತಿ, ಅನಿವಾರ್ಯತೆ, ಕಾರ್ಯಕ್ಷೇತ್ರ ಮತ್ತು ವ್ಯಾಪ್ತಿ ಬದಲಾದಂತೆ ಕತೆಯ ಸೆಲೆ ಬತ್ತಿತು. ಇದು ಭ್ರಮನಿರ**ಸನದ** ಎರಡನೆಯ ಮಜಲು – ನಾನು ಕತೆಗಾರನಲ್ಲ ಎಂಬ ಅರಿವು.

ಮೊದಲನೆಯ ಮಜಲು? ಬಲು ಹಿಂದೆಯೇ ಇದನ್ನೇರಿದ್ದೆ : ಹಲವು ಸಾವಿರ ಸಾವಿರ ಸಾಲು ಕವಿತೆ ಬರೆದು ನಾನು ಚಮತ್ಕಾರ, ಲಯ, ಪ್ರಾಸ ಮುಂತಾದ ತಂತ್ರಗಳ ಮಟ್ಟಕ್ಕಿಂತ ಮೇಲೇರಲಾ**ರೆ**ನೆಂಬ ಬೆಳಕು ಕಂಡಾಗ.

ಆದದ್ದೆಲ್ಲಾ ಒಳಿತೇ ಆಯಿತು ! ಏಕೆ ಗೊತ್ತೇ?
ವ್ಯಕ್ತಿಯ ಹುಟ್ಟನ್ನೂ ಕೂಡಿದಂತೆ ಆಕಸ್ಮಿಕಗಳೇ ಆತನ ಬದುಕನ್ನು ರೂಪಿಸುವುದು ಎಂದು ಈಗ ಚೆನ್ನಾಗಿ ಅರಿತಿದ್ದೇನೆ. ಆದ್ದರಿಂದ ವ್ಯಕ್ತಿಗೆ ಸ್ವಾತಂತ್ರ್ಯವಿರುವುದು ಆ ಆಕಸ್ಮಿಕಗಳ ತರಂಗಶಕ್ತಿಯನ್ನು ಸರಿಯಾಗಿ ಉಪಯೋಗಿಸಿಕೊಂಡು ಜೀವನ ಸಾಗರಯಾನದಲ್ಲಿ 'ಸಪ್ತಸಾಗರದಾಚೆಯೆಲ್ಲೋ' ಕಾದಿರುವ 'ಸುಪ್ತಸಾಗರ' ಗಾಮಿಯಾಗುವುದು.

ಇಂಥ ಅವಕಾಶ ನನ್ನ ವೃತ್ತಿ ನಿಮಿತ್ತವಾಗಿ (ಗಣಿತೋಪನ್ಯಾಸಕ) ನನಗೆ, ಪುನಃ ಆಕಸ್ಮಿಕವಾಗಿ, ಕೂಡಿ ಬಂದಿತು; ಬೋಧನ ಮಾಧ್ಯಮ ಇಂಗ್ಲಿಷ್; ಆದರೆ ಕನ್ನಡ**ದ**ಲ್ಲಿ ವಿವರಿಸಿದರೆ ಪರಿಕಲ್ಪನೆಗಳು ವಿದ್ಯಾರ್ಥಿಗಳಿಗೆ ಚೆನ್ನಾಗಿ ಮನಂ**ಬುಗುತ್ತ**ವೆ; ಅಳುಕೇನು ತಾಯ್ನುಡಿಯಲ್ಲಿ ಮಾತಾಡಲು! ಆದರೆ ಶಾಸ್ತ್ರ ವಿಷಯ, ವಿಜ್ಞಾನದ (ಅಂದರೆ ಅದರ ಪರಿಕಲ್ಪನೆಗಳ) ಇತಿಹಾಸ, ವಿಜ್ಞಾನಿಗಳ ಜೀವನ ಚರಿತ್ರೆ, ಪ್ರಚಲಿತ ವಿಜ್ಞಾನ – ಹೀಗೆ ಈ ಹನುಮಂತಲಾಂಗೂಲ ಬೆಳೆದೇ ಬೆಳೆಯಿತು, ನನ್ನ ಉಪನ್ಯಾಸಕ ವೃತ್ತಿಯ (೧೯೪೭) ಅವಿಭಾಜ್ಯ ಅಂಗವಾಗಿ, ಕೊನೆಯಲ್ಲಿ ಈ ಹೊಸ ವೃತ್ತಿಗೆ (ವಿಜ್ಞಾನಸಂಪಾದಕ ೧೯೬೯) ಸಿಂಹಾಪಿಸಿಯೂ ಬಿಟ್ಟಿತು!

ಹಿಂದೆ ಕವಿತೆ, ಕತೆ ಮುಂತಾದ ಕಲ್ಪನಾವಿಹಾರಗಳಲ್ಲಿ ಮಾಡಿದ ಪ್ರಯೋಗಗಳು, ಬಳಸಿದ ವರಿಸೆಗಳು ಮತ್ತು ಕಲಿತ ಪಾಠಗಳು ಈ ಹೊಸ ನೆಲೆಯಲ್ಲಿ ಕರೆದಲ್ಲಿ ಬಂದೊದಗುವ ಸುಲಭ ಅಸ್ತ್ರಗಳಾದುವು!

ಭ್ರಮನಿರಸನದ ಮೂರನೆಯ ಮಜಲು – ಅಂದರೆ ಈಗ ಸಲ್ಲಿಸುತ್ತಿರುವ ವಿಜ್ಞಾನ ವಾಙ್ಮಯ ಕೈಂಕರ್ಯದ ಬಗ್ಗೆ ವೈರಾಗ್ಯ – ಎಂದು ಏರುವೆನೋ, ಎಂದಾದರೂ ಏರಿದರೆ ಅಂದು ಬದುಕಿರುವೆನೋ...

ಭ್ರಮನಿರಸನ ಪರಂಪರೆಯೇ ಜೀವನವಾಗಿರಬಹುದೇ?
ಸ್ವಸಾಮರ್ಥ್ಯ ಕುರಿತ ಭ್ರಮನಿರಸನವೇ ಮಹಾನಿರ್ಯಾಣವಾಗಿರಬಹುದೇ?

**೯–೫–೧೯೯೩**